# ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ

ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕಿ

ಗೀತಾ ಮಲ್ಲೇಶಪ್ಪಾ

ಮಾರ್ಗದರ್ಶಕರು

ಡಾ. ಎಂ. ಉಷಾ

ಉಪನ್ಯಾಸಕರು

ಭಾಷಾಂತರ ಅಧ್ಯಯನ ವಿಭಾಗ





ಮಹಿಳಾ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಗೀತಾ ಮಲ್ಲೇಶಪ್ಪಾ ಇವರು "**ಆಧುನಿಕ ಕುಟುಂಬಗಳಲ್ಲಿ ಪಿತೃ ಪ್ರಧಾನತೆಯ ಸ್ವರೂಪ**" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 12.7.07

(ಡಾ. ಎಂ. ಉಷಾ)
ಮಾರ್ಗದರ್ಶಕರು
ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಪ್ರಮಾಣ ಪತ್ರ

"ಆಧುನಿಕ ಕುಟುಂಬಗಳಲ್ಲಿ ಪಿತೃ ಪ್ರಧಾನತೆಯ ಸ್ವರೂಪ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎಂ. ಉಷಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 12.7.07

Geetha

(ಗೀತಾ ಮಲ್ಲೇಶಪ್ಪಾ)

ಸಂಶೋಧಕಿ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ , ಡಾ.ಬಿ.ಎ.ವಿವೇಕ ರೈ , ಇಂದಿನ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಮತ್ತು ಕುಲಸಚಿವರಾದ ಡಾ. ಶ್ರೀ ವಿ. ಶಂಕರ್ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಟಿ.ಆರ್. ಚಂದ್ರಶೇಖರ ಅವರಿಗೂ, ಪ್ರಸಾರಾಂಗದ ನಿರ್ದೇಶಕ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರಿಗೂ ನನ್ನ ಅಧ್ಯಯನದ ಆಸಕ್ತಿಗೆ ನಿರಂತರ ಪ್ರೋತ್ಸಾಹದಿಂದ ಅಧ್ಯಯನದುದ್ದಕ್ಕೂ ಮಾರ್ಗದರ್ಶನ ನೀಡಿ ಸಹಕರಿಸಿದ ಡಾ. ಎಂ. ಉಷಾ ಅವರಿಗೂ ತುಂಬು ಹೃದಯದ ಕೃತಜ್ಞತೆಗಳು ಸಲ್ಲಿಸುತ್ತೇನೆ.

ಮಹಿಳಾ ಅಧ್ಯಯನದ ಮುಖ್ಯಸ್ಥರಾದ ಡಾ. ಶೈಲಜಾ ಹಿರೇಮಠ ಅವರಿಗೂ ಮಹಿಳಾ ಕೇಂದ್ರದ ನಿರ್ದೇಶಕರಾಗಿರುವ ಡಾ.ಎಚ್.ಎಸ್.ಶ್ರೀಮತಿ ಅವರಿಗೂ ನನ್ನ ಅಧ್ಯಯನದ ಬಗ್ಗೆ ಸದಾ ವಿಚಾರಿಸುತ್ತಾ ಪ್ರೋತ್ಸಾಹ ನೀಡಿದ ಗುರುಗಳಾದ ಡಾ. ಶಿವಾನಂದ ವಿರಕ್ತಮಠ ಹಾಗೂ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಓದಲು ಪ್ರೇರೇಪಿಸಿದ ಡಾ. ಎ. ವೆಂಕಟೇಶ ಅವರಿಗೂ ನನ್ನ ಅನಂತ ಅಭಾರಿಗಳು.

ನನ್ನ ಹಿರಿಯ ಸಂಶೋಧನಾ ಮಿತ್ರರಾದ ಡಾ. ಸುಜಾತ ಅಕ್ಕಿ, ಡಾ. ಅನುಸೂಯ ಕದಂಬ ಡಾ. ಲೋಕರಾಜ ಡಿ., ಡಾ. ಆಂಜನೇಯ ಅವರಿಗೂ ಸಂಶೋಧನಾ ಗೆಳತಿಯರಾದ ರೇಣು, ರಾಧ, ಅಕ್ಕಮ್ಮ, ಕಾವೇರಿ, ಶ್ರೀದೇವಿ, ಸುಕನ್ಯಾ, ನೇತ್ರಾವತಿ, ಗೌರಿ, ಸುಮಲತಾ, ಡಿ.ಬಿ. ಜ್ಯೋತಿ, ಗಿರಿಜಾ, ಮಂಜುಳಾ, ಕಾಂಚನ, ಸುನಂದ, ಸುಜಾತ, ನಂದಿನಿ, ಗಂಗಮ್ಮ, ಶಾಂತಿ, ಶೀಲಾ ಹಾಗೂ ಗೆಳೆಯರಾದ ಓಂಪ್ರಕಾಶ, ದೇವರಾಜ, ಡಿ. ಚಂದ್ರಪ್ಪ, ವೆಂಕಟರಾಮ ಜಿ., ನಿಂಗಪ್ಪ, ರಾಮಮೂರ್ತಿ, ಯರ್ರಿಸ್ವಾಮಿ, ಶಶಿಧರ, ವೀರೇಶ, ಹುಲಿಗೆಪ್ಪ, ಶೀನು, ಉಮೇಶ, ನಾಗರಾಜ, ಓಬಯ್ಯ, ಕಂಪಾಲಿಗ, ಶಿವು ಕಮಲಾಪುರ, ಬಾಲಚಂದ್ರ, ಮೋಹನ, ನರಸಪ್ಪ ಅವರಿಗೂ ನಾನು ಅಭಾರಿಯಾಗಿರುವೆ.

ನನ್ನ ಓದಿಗೆ ಬೆನ್ನೆಲುಬಾಗಿ ನಿಂತ ನನ್ನ ಕನಸನ್ನು ನನಸು ಮಾಡಿದ ಪೂಜ್ಯ ತಂದೆಯರಾದ ಮಲ್ಲೇಶಪ್ಪಾ ಶಾಸ್ತ್ರೀ ಮತ್ತು ತಾಯಿ ತಾರಬಾಯಿ ಹಾಗೂ ಅಕ್ಕಂದಿರಾದ ಭಾಗ್ಯಲತಾ, ಪ್ರೇಮಾವತಿ, ತಂಗಿಯರಾದ ರೇಣು, ಉಷಾ, ಉಮಾ, ತಮ್ಮನಾದ ಅನಿಲಕುಮಾರ, ಪ್ರೀತಿಯ ಪುಟಾಣಿಗಳಾದ ಸೌಮ್ಯ, ಸುರಕ್ಷಾ, ಪಿಂಟು, ದಿವ್ಯಾ ಅಕ್ಕಂದಿರ ಮಕ್ಕಳಿಗೂ ನನ್ನ ಸವಿನೆನೆಕೆಗಳು.

ನನ್ನನ್ನು ಸದಾ ಪ್ರೋತ್ಸಾಹಿಸುತ್ತಿರುವ ನನ್ನೂರಿನ ಗೆಳತಿಯರಾದ ಅನಿತಾ, ಕನ್ಯಾಕುಮಾರಿ, ರೇಣುಕಾ ಹೊಸಮನಿ, ಶಶಿಕಲಾ ಮತ್ತು ಸದಾ ಅಭಿಮಾನದಿಂದ ಕಾಣುವ ಸಮಸ್ತ ಬಂಧು ಬಾಂಧವರಿಗೂ, ಪ್ರತ್ಯೇಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದವರಿಗೆಲ್ಲರಿಗೂ ನಾನು ಅಭಾರಿ ಯಾಗಿರುವೆ.

ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಾದ ಡಾ. ನಾಗವೇಣಿ ಮತ್ತು ಡಾ. ಕೆ.ಎ. ರಾಧಕೃಷ್ಣ ಅವರಿಗೂ ಮತ್ತು ಸಿಬ್ಬಂದಿ ವರ್ಗದವರೆಲ್ಲರಿಗೂ ನಾನು ಋಣಿಯಾಗಿರುವೆ. ಈ ಮಹಾ ಪ್ರಬಂಧವನ್ನು ಪ್ರೀತಿಯಿಂದ ಹಾಗೂ ಆತ್ಮಿಯತೆಯಿಂದ ಅಂದವಾದ ಅಕ್ಷರ ರೂಪದಲ್ಲಿ ಸಂಯೋಜಿಸಿದ ಶ್ರೀನಿವಾಸ ಕೆ. ಕಲಾಲ್., ಭಾವನಾ ಗ್ರಾಫಿಕ್ಸ್, ಕಮಲಾಪುರ ಇವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಗೀತಾ ಮಲ್ಲೇಶಪ್ಪಾ

# ಪರಿವಿಡಿ

## ಪ್ರಸ್ತಾವನೆ

ಮಾನವನು ಅಲೆಮಾರಿಯಾಗಿ ಬೇಟೆಯಾಡುತ್ತ, ಗಡ್ಡೆ-ಗೆಣಸುಗಳನ್ನು ಮತ್ತು ಹಣ್ಣು-ಹಂಪಲ ಗಳನ್ನು ತಿನ್ನುತ್ತ ಜೀವಿಸುತ್ತಿದ್ದ ಕಾಲದಲ್ಲಿ ಕಾಮತೃಪ್ತಿ ಮತ್ತು ಸಂತಾನಾಪೇಕ್ಷೆಗಳು ಅವನ/ಳನ್ನು ಸಹ-ಜೀವನಕ್ಕೆ ಅನಿವಾರ್ಯವಾಗಿ ಪ್ರೇರೇಪಿಸಿರಬಹುದು ಎಂಬುವುದೊಂದು ಕಲ್ಪನೆಯಿದೆ. ಕಾಲಾಂತರದಲ್ಲಿ ಸಂಸ್ಕೃತಿಯ ವಿಕಾಸದೊಂದಿಗೆ ಪಶುಪಾಲನೆ, ಕೃಷಿಗಳಿಂದಾಗಿ ಕೆಲಕಾಲವಾದರೂ ಅವನು ಒಂದೆಡೆ ನೆಲೆಯಾಗಿ ನಿಲ್ಲಬೇಕಾಗಿ ಬಂದಾಗ, ಸುಖ-ದುಃಖಗಳನ್ನು ಪರಸ್ಪರರು ಹಂಚಿ ಕೊಳ್ಳಲು ಅದು ಸಹಕಾರಿಯಾಗುತ್ತೆದೆಂಬ ಅನುಭವ ಅವನಿ/ಳಿಗೆ ಮನವರಿಕೆಯಾದಾಗ ಸಹಜೀವನದ ಪದ್ಧತಿಯು ಮಾನವನ ಜೀವನದಲ್ಲಿ ಬಲವಾಗಿ ಬೇರೂರಿ ಮುಂದೆ 'ಕುಟುಂಬ' ಎಂಬ ಸಂಸ್ಥೆಗೆ ನಾಂದಿಯಾಯಿತೆಂಬ ಊಹೆಯಿದೆ. "ಈ ಕುಟುಂಬ ವ್ಯವಸ್ಥೆಯು ಮಾನವನ ಇತಿಹಾಸದಲ್ಲಿ, ಮಾನವ ಸಮಾಜದ ಸಮುನ್ನತಿಯಲ್ಲಿ ಬಲುದೊಡ್ಡ ಸಾಧನೆ. ಅತಿ ಪ್ರಾಚೀನ ಕಾಲದಿಂದಲೂ ಯಶಸ್ವಿಯಾಗಿ ಸಾಗಿ ಬಂದಿರುವ, ಸಾರ್ವತ್ರಿಕ ಸಾರ್ವಕಾಲಿಕ ಸಂಸ್ಥೆ ಕುಟುಂಬ. ಕೋಟಿ ಕೋಟಿಯಲ್ಲಿರುವ ಜನ ಸಮುದಾಯವು ಕುಟುಂಬಗಳೆಂಬ ಪುಟ್ಟ ಪುಟ್ಟ ಘಟಕಗಳಲ್ಲಿ ವ್ಯವಸ್ಥಿತವಾಗಿ ಹಂಚಿಹೋಗಿ ಇಡೀ ಸಮಾಜವು ತನ್ನ ವ್ಯವಹಾರವನ್ನು ಸುಸೂತ್ರವಾಗಿ ನಿರ್ವಹಿಸಲು ಇದು ಸಹಕಾರಿಯಾಗಿದೆ"(ಪೆರ್ಲ ಮಾ.ಭ;೨೦೦೦:೭).

ಕುಟುಂಬ ವ್ಯವಸ್ಥೆಯು ಒಂದು ಸಾಮಾಜಿಕ ಸಂಸ್ಥೆ. ಸಮಾಜ ರಚನೆಯಲ್ಲಿ ಕುಟುಂಬ ಸಂಸ್ಥೆ ಅತ್ಯಂತ ಚಿಕ್ಕ ಘಟಕವಾದರೂ ಮಹತ್ವದ ಸ್ಥಾನ ಪಡೆದಿದೆ. ಕುಟುಂಬ ವ್ಯವಸ್ಥೆಯನ್ನು ಸಂಘವೆಂದು ಕರೆಯಬಹುದು. ಅದೊಂದು ಚಿಕ್ಕ ಸಮಾಜ. ತಾಯಿ-ತಂದೆ, ಮಕ್ಕಳು, ಬಂಧುಗಳು

ಹೀಗೆ ಒಬ್ಬೊಬ್ಬರಿಗೂ ಸಾಂಘಿಕ ಜೀವನದ ಎಲ್ಲಾ ಸೌಲಭ್ಯಗಳು ಇದರಲ್ಲಿ ದೊರೆಯುತ್ತವೆ. ಕುಟುಂಬ ಸಂಸ್ಥೆಯನ್ನು ಸಮಾಜಶಾಸ್ತ್ರಜ್ಞರು ಶಾಸ್ತ್ರೋಕ್ತವಾಗಿ ಸ್ಪಷ್ಟಗೊಳಿಸಲು ಪ್ರಯತ್ನಿಸಿದ್ದಾರೆ. (ರಕ್ತ ಸಂಬಂಧಕ್ಕೊಳಪಟ್ಟ ಜನ ಒಂದು ಕುಟುಂಬಕ್ಕೆ ಸೇರಿದವರೆಂದು ಗಂಡ-ಹೆಂಡತಿ, ಪುತ್ರ-ಪುತ್ರಿ ಮೊದಲಾದ ಸಂಬಂಧಗಳನ್ನು ಹೊಂದಿ ಒಂದೇ ತೆರನಾದ ಸಂಸ್ಕೃತಿಯನ್ನು ವಂಶಪಾರಂಪರ್ಯವಾಗಿ ಬೆಳೆಸಿಕೊಂಡು ಬರುವ ಸಂಸ್ಥೆ ಕುಟುಂಬವೆಂದು ಬರ್ಜಸ್ ಮತ್ತು ಲಾಕರ ಅಭಿಪ್ರಾಯ. ಕುಟುಂಬ ಲೈಂಗಿಕ ಜೀವನವನ್ನು ಕ್ರಮಬದ್ಧವಾಗಿ ಮಾಡಿ, ಮಕ್ಕಳನ್ನು ಬೆಳೆಸಿ, ಅವರನ್ನು ಸುಸಂಸ್ಕೃತರನ್ನಾಗಿ ಮಾಡಿ ಮಾನವನ ವಂಶಪಾರಂಪರ್ಯ ಬೆಳೆಸಿಕೊಂಡು ಬರುವ ಒಂದು ಸಂಸ್ಥೆಯೆಂಬುದು ಮೈಕೆವರ್ ಮತ್ತು ಪೇಜರ್ ಅಭಿಪ್ರಾಯ.(ಡಾ. ಹಾ.ಮಾ.ನಾಯಕ;೧೯೭೨:೮೩೨).

ಶಾಸ್ತ್ರೋಕ್ತವಾಗಿ ಸ್ಪಷ್ಟಪಡಿಸಿರುವ ಅಭಿಪ್ರಾಯಗಳಲ್ಲಿ ಮೇಲ್ಕಂಡಿರುವ ಎರಡು ಅಭಿಪ್ರಾಯಗಳು ಬೆಲೆಯುಳ್ಳವು. ಈ ಅಭಿಪ್ರಾಯಗಳನ್ನು ಪರಿಶೀಲಿಸಿದರೆ, ಕೆಳಕಂಡ ಅಂಶಗಳು ಹೊರಬೀಳುತ್ತವೆ.

೧. ಕುಟುಂಬ ಲೈಂಗಿಕ ಜೀವನವನ್ನು ಕ್ರಮಬದ್ಧಗೊಳಿಸಿ ಅದರಿಂದುಂಟಾದ ಸಂತಾನ ಸೌಲಭ್ಯವನ್ನು ಉತ್ತಮ ರೀತಿಯಲ್ಲಿ ಕಾಪಾಡಲು ಸೂಕ್ತ ಮಾರ್ಪಡನ್ನು ಮಾಡುತ್ತದೆ.

೨. ದಾಂಪತ್ಯ ಜೀವನವನ್ನು ಸುಗಮವಾಗಿ ನಡೆಸಿಕೊಂಡು ಬರಲು ತಳಹದಿಯನ್ನು ಹಾಕಿಕೊಡುತ್ತದೆ.

೩. ಜೀವನವನ್ನು ಸುಗಮವಾಗಿ ನಡೆಸಲು ಅಗತ್ಯವಾದ ಆಸ್ತಿಪಾಸ್ತಿಗಳ ಅವಶ್ಯಕತೆಯ ಅಂಶವನ್ನು ಒತ್ತಿ ಹೇಳುತ್ತದೆ.

೪. ಸಾಮೂಹಿಕ ಜೀವನಕ್ಕೆ ಕುಟುಂಬವೇ ಆಧಾರ ಸ್ತಂಭವೆಂದು ಧೃಢೀಕರಿಸುತ್ತದೆ.

### ವಿವಾಹ ಸಂಸ್ಥೆ ಕುರಿತ ತಿಳುವಳಿಕೆಯ ಅವಶ್ಯಕತೆ

ಕುಟುಂಬ ಸಂಸ್ಥೆಯನ್ನು ವ್ಯವಸ್ಥಿತವಾಗಿ ಮುನ್ನಡೆಸಲು ಪೂರಕವಾಗುವ ವಸ್ತಾವವೂ ಅನಿವಾರ್ಯ ವಾದುದಾಗಿದೆ. ಇನ್ನೊಂದು ಸಾಮಾಜಿಕ ಸಂಸ್ಥೆ 'ವಿವಾಹ'ವಾಗಿದ್ದು ಕುಟುಂಬ ಅಧ್ಯಯನಗಳ ಸಂದರ್ಭದಲ್ಲಿ ಈ ಸಂಸ್ಥೆಯ ನಾಗರೀಕತೆಯುದ್ದಕ್ಕೂ ಭಿನ್ನ ಭಿನ್ನ ಸಮಾಜಗಳಲ್ಲಿ ಭಿನ್ನ ಭಿನ್ನ ಕಾಲಘಟ್ಟಗಳಲ್ಲಿ ಅನೇಕ ಬಗೆಯ 'ವಿವಾಹ' ಪದ್ಧತಿಯು ಕಂಡುಬರುತ್ತದಾದರೂ ಸ್ಥೂಲವಾಗಿ ಅದನ್ನು ಬಹುಪತಿ/ಪತ್ನಿ ಹಾಗೂ ಏಕಪತಿ/ಪತ್ನಿ ವಿವಾಹ ಪದ್ಧತಿಗಳಾಗಿ ವಿಭಜಿಸಿ ಗುರುತಿಸಲಾಗಿದೆ.

ಪ್ರಾಚೀನ ಕುಟುಂಬ ಜೀವನದ ಆದಿಯಲ್ಲಿ ಬಹುಪತಿ ಮತ್ತು ಬಹುಪತ್ನಿ ವಿವಾಹಗಳು ಸರ್ವೇ ಸಾಮಾನ್ಯವಾಗಿ ರೂಢಿಯಲ್ಲಿದ್ದವು. ಅಲ್ಲದೆ ಆಪ್ತರಿಗೂ ಅತಿಥಿಗಳಿಗೂ ಪತ್ನಿಯರನ್ನೊಪ್ಪಿ

ಸುವುದು ಒಂದು ದೊಡ್ಡ ಗೌರವವೆಂದು ನಂಬಿ ಅದನ್ನು ಅನೇಕ ಗುಂಪು ಗುಂಪುಗಳಲ್ಲಿ ಜಾರಿಗೆ ತಂದಿದ್ದರು. ಜೊತೆಗೆ ಒಂದು ಗುಂಪಿನ ಗಂಡಸರೆಲ್ಲರೂ ಇನ್ನೊಂದು ಗುಂಪಿನ ಹೆಂಗಸರನ್ನು ಮದುವೆಯಾಗಿ ಜೀವನ ನಡೆಸುತ್ತಿದ್ದರು. ಆದರೆ ಬಹುಪತ್ನಿತ್ವ ವಿವಾಹಗಳು ಸರ್ವೇ ಸಾಧಾರಣವಾಗಿ ಸಮಾಜದಲ್ಲಿ ಗಣ್ಯ ಸ್ಥಾನವನ್ನು ಪಡೆದಿದ್ದ ಸಂಸಾರಗಳಲ್ಲಿ ಮತ್ತು ಹೆಚ್ಚಿಗೆ ಆಸ್ತಿ-ಪಾಸ್ತಿಗಳನ್ನು ಗಳಿಸಿದ್ದ ಕುಟುಂಬಗಳಲ್ಲಿ ಮಾತ್ರ ರೂಢಿಯಲ್ಲಿದ್ದವು. ಬೇರೆ ಗುಂಪುಗಳು ಈ ತೆರನಾದ ವಿವಾಹ ಗಳನ್ನು ರೂಢಿ ಮಾಡಿಕೊಳ್ಳುವುದು ಕಠಿಣವಾಗುತ್ತಿತ್ತು. ಬಹುಪತಿ ವಿವಾಹ ಪದ್ಧತಿ ಗಂಡಸರ ಸಂಖ್ಯೆ ಕಡಿಮೆಯಾದ ಗುಂಪಿನವರಲ್ಲಿ ಮಾತ್ರ ವಾಡಿಕೆಯಲ್ಲಿತ್ತು. ಹೆಂಡತಿಯನ್ನು ಬೇರೆಯವರಿಗೊಪ್ಪಿ ಸುವುದು ಅಸಂಖ್ಯಾತ ಹೆಂಡತಿಯರನ್ನು ಮದುವೆಯಾದ ಕೆಲವೆ ಗುಂಪುಗಳಲ್ಲಿ, ಅಂದರೆ ಹೇರಳವಾದ ಆಸ್ತಿಪಾಸ್ತಿಗಳನ್ನಿಟ್ಟುಕೊಂಡಿದ್ದ ಶ್ರೀಮಂತ ಗುಂಪುಗಳಲ್ಲಿ ವಾಡಿಕೆಯಲ್ಲಿತ್ತು. ಇವುಗಳ ಜೊತೆಗೆ ಸಾರೋರೆಟ್ ಮತ್ತು ಲೇವಿರೆಟ್ ಪದ್ಧತಿಗಳನ್ನು ಆಚರಣೆಯಲ್ಲಿಟ್ಟುಕೊಂಡಿದ್ದ ಹಲವಾರು ಗುಂಪುಗಳಲ್ಲೂ ಸಾರೋರೆಟ್ ಪದ್ಧತಿ ರೂಢಿಯಲ್ಲಿತ್ತು. ಗುಂಪಿನ ಒಬ್ಬ ಹೆಣ್ಣನ್ನು ಮದುವೆಯಾದರೆ ಆ ಹೆಣ್ಣಿನ ತಂಗಿಯರನ್ನೆಲ್ಲ ಆ ಗಂಡು ಮದುವೆಯಾಗುವ ಹಕ್ಕು ಪಡೆಯುತ್ತಿದ್ದ. ಲೆವಿರೆಟ್ ಪದ್ಧತಿಯ ಪ್ರಕಾರ ಮದುವೆಯಾದ ಹೆಣ್ಣು ವಿಧವೆಯಾದರೆ ತನ್ನ ಗಂಡನ ಅಣ್ಣ-ತಮ್ಮಂದಿರನ್ನು ಮದುವೆಯಾಗುವ ಹಕ್ಕನ್ನು ಪಡೆಯುತ್ತಿದ್ದಳು. ನಿಜವಾಗಿ ನೋಡಿದರೆ ಸಾರೊರೆಟ್ ಪದ್ಧತಿಯ ಪ್ರಕಾರ ಒಂದು ಕುಟುಂಬದ ಗಂಡಸರೆಲ್ಲರಿಗೂ ಮದುವೆಯಾಗುವುದು ಅಸಂಭವವಾಗಿ ಕಂಡುಬಂದಾಗ ಮಾತ್ರ ಗಂಡನ ಅನುಮತಿಯಿಂದ ಹೆಂಡತಿ ಗಂಡನ ಒಡಹುಟ್ಟಿದ್ದವರಲ್ಲಿ ಸಂಭೋಗ ಮಾಡುವ ಪದ್ಧತಿಯಿತ್ತು. ಹೀಗೆ ಲೈಂಗಿಕ ಜೀವನದಲ್ಲಿ ಅನೇಕ ಕಟ್ಟುಪಾಡುಗಳು ಅಲ್ಲಲ್ಲಿ ಆಚರಣೆಯಲ್ಲಿದ್ದು ವಾದರು ಅವು ಕುಟುಂಬ ಜೀವನಕ್ಕೆ ಕೇವಲ ಅಪವಾದ ಮಾತ್ರವಾಗಿದ್ದುವೆಂಬುದನ್ನು ಮರೆಯಲಾಗದು.

ಕ್ರಮೇಣ ಪಿತೃಪ್ರಧಾನ ಮೌಲ್ಯವ್ಯವಸ್ಥೆಗಳು ಬಲಗೊಳ್ಳುತ್ತ ಹೋದಂತೆ ಹೆಣ್ಣಿನ ಪಾತಿವ್ರತ್ಯ ಕಲ್ಪನೆ ಗಟ್ಟಿಗೊಂಡತೆ ಹಾಗೂ ಹೆಣ್ಣಿನ ಮೇಲಿನ ಅಧಿಕಾರ ಸ್ಥಾಪನೆಯ ಮಹತ್ವಕಾಂಕ್ಷೆಯು ಹೆಚ್ಚಿದಂತೆಲ್ಲ ಬಹುಪತಿತ್ವದ ವಿವಾಹ ಪದ್ಧತಿ ತನ್ನ ಜನಪ್ರಿಯತೆಯನ್ನು ಕಳೆದು ಕೊಳ್ಳತೊಡಗಿತು. ಮಧ್ಯಕಾಲೀನ ಸಂದರ್ಭದಲ್ಲಿಯೇ ಬಹುಪತಿತ್ವವು ನಾಗರೀಕ ಮೌಲ್ಯವ್ಯವಸ್ಥೆಯಿಂದ ಹೊರಗಿಡ ಲ್ಪಟ್ಟಿತು. ಆಧುನಿಕ ಸಂದರ್ಭದ ಹೊತ್ತಿಗೆ ಹೆಚ್ಚು ಕಡಿಮೆ ಜಗತ್ತಿನಾದ್ಯಂತ ಬಹುಪತಿತ್ವದೊಂದಿಗೆ ಬಹುಪತ್ನಿತ್ವವನ್ನು ಕೂಡ ಹಲವು ಸಮಾಜಗಳು ಅನೈತಿಕವೆಂದು ತೀರ್ಮಾನಿಸಿದವು. ಅಂತೆಯೇ ಈ ಎಲ್ಲ ಪಲ್ಲಟಗಳು ಭಾರತೀಯ ಸಮಾಜದಲ್ಲಿಯೂ ಕಾಣಸಿಗುವುದಾಗಿದ್ದು, ಆಧುನಿಕ

ಭಾರತದಲ್ಲಿ ವಿವಾಹಾಪರಗೊಳಿಸೊ ಧರ್ಮ ಸಂಬಂಧಿತವಾಗಿವೇ ಸಿಂಧುತ್ವಗೊಳಿಸಿದ್ದರೂ ಏಕಪತಿ ಪತ್ನಿತ್ವವು ನೈತಿಕವಾದುದೆಂಬ ಸಾಮಾನ್ಯ ತಿಳುವಳಿಕೆಯೊಂದನ್ನು ಊರ್ಜಿತಗೊಳಿಸಿಕೊಳ್ಳಲಾಗಿದೆ. ಇಷ್ಟಾಗಿಯೂ ಈ ಕುರಿತ ಚರ್ಚೆಗಳು, ವಿವಾದಗಳು ಮುಂದುವರಿದೇ ಇವೆ. ಇಸ್ಲಾಂನಂತಹ ಸಮಾಜಗಳು ಬಹುಪತ್ನಿತ್ವವನ್ನು ಸಿಂಧುತ್ವಗೊಳಿಸಿಕೊಂಡಿದ್ದರೆ, ಇನ್ನುಳಿದ ಸಮಾಜಗಳಲ್ಲಿ ಸಿಂಧುತ್ವದ ಪ್ರಶ್ನೆಯನ್ನು ಮೀರಿ ಅದು ಉಳಿದು ಬಂದೆ ಇದೆ.

### ಭಾರತದಲ್ಲಿನ ಕುಟುಂಬ ವಿಧಾನಗಳು

ಭಾರತದಲ್ಲಿ ಎರಡು ಮುಖ್ಯವಾದ ವಂಶ ಮೂಲದ (Descent) ಕುಟುಂಬ ವಿಧಾನಗಳಿವೆ. ಅವೆಂದರೆ, ೧. ಪಿತೃವಂಶೀಯ ಮೂಲ ೨. ಮಾತೃವಂಶೀಯ ಮೂಲ ಕುಟುಂಬಗಳು. ಇಂಥ ಕುಟುಂಬಗಳ ಕಾರ್ಯಚಟುವಟಿಕೆಗಳು ಮತ್ತು ಪ್ರಕ್ರಿಯೆಗಳು ಮಹಿಳೆಯರ ಸ್ಥಾನಮಾನಗಳ ಅಧ್ಯಯನ ದೃಷ್ಟಿಯಿಂದ ಹೆಚ್ಚು ಮಹತ್ವದ್ದಾಗಿರುತ್ತದೆ. ಆದ್ದರಿಂದ ಪಿತೃವಂಶೀಯ ಮತ್ತು ಮಾತೃವಂಶೀಯ ಕುಟುಂಬಗಳು, ಅದರ ಕಾರ್ಯಚಟುವಟಿಕೆಗಳು, ಮಹಿಳೆಯರ ಸ್ಥಾನಮಾನಗಳನ್ನು ಕುರಿತು ಒಂದು ಸ್ಥೂಲ ನೋಟವನ್ನು ಕೊಡುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಪಿತೃಪ್ರಧಾನ ಕುಟುಂಬಗಳಲ್ಲಿ ಗಂಡಸಿಗೆ ಹೆಚ್ಚಿನ ಪ್ರಾಧಾನ್ಯ. ಮನೆಯ ಯಜಮಾನಿಕೆ, ಮದುವೆ ಕಾರ್ಯಗಳಲ್ಲಿ ಪ್ರಾಧಾನ್ಯ ಗಂಡಸಿಗೆ ಸೇರಿದ್ದು. ಮದುವೆಯಾದ ಮೇಲೆ ಹೆಂಡತಿ ಗಂಡನ ಮನೆಗೆ ಹೋಗಿ ಸಂಸಾರ ನಡೆಸಬೇಕು. ಆಕೆ ಗಂಡನ ಮನೆಗೆ ಸೇರಿ ಹೋಗುತ್ತಾಳೆ. ಪೂಜೆ ಪುನಸ್ಕಾರಗಳಲ್ಲಿ ಗಂಡನನ್ನೇ ಹಿಂಬಾಲಿಸುತ್ತಾಳೆ. ಹುಟ್ಟಿದ ಮಕ್ಕಳೆಲ್ಲರೂ ಗಂಡನ ಮನೆತನಕ್ಕೆ ಸೇರಿರುತ್ತಾರೆ. ಆಸ್ತಿ-ಪಾಸ್ತಿಗಳ ಹಕ್ಕು ಗಂಡುಮಕ್ಕಳಿಗೆ ಸಂಪೂರ್ಣವಾಗಿರುತ್ತದೆ. ಇದರಿಂದ ಗಂಡು ಇತರರ ಹಂಗಿಲ್ಲದೆ ತನ್ನ ದಿನಚರಿಯ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡು ಬಾಳುವ ದಿಟ್ಟತನವನ್ನು ಸಂಪಾದಿಸಿ ಕೊಳ್ಳುತ್ತಾನೆ. ಆದರೆ ಆತನ ಹೆಂಡತಿ ತನ್ನ ಆಪ್ತರನ್ನು ಬಂಧುಬಳಗವನ್ನು ಬಿಟ್ಟು ಗಂಡನೊಡಗೂಡಿ, ಗಂಡನ ಜನಗಳೊಂದಿಗೆ ಭಯಭೀತಿಗಳಿಂದಲೂ ನಯವಿನಯಗಳಿಂದಲೂ ಬಾಳಬೇಕಾಗುತ್ತದೆ. ಗಂಡನ ಮನೆಯನ್ನೇ ತನ್ನ ಮನೆಯೆಂದು ಪರಿಗಣಿಸಿ ಹೊಂದಿಕೊಳ್ಳಬೇಕಾಗುತ್ತದೆ. ಪಿತೃಪ್ರಭುತ್ವವಿರುವ ಕುಟುಂಬಗಳು ಆಧುನಿಕ ಕಾಲದಲ್ಲಿಯೂ ತಮ್ಮ ಪ್ರಾಧಾನ್ಯ ಕಳೆದುಕೊಂಡಿಲ್ಲ.

ಸಮಾಜ ಉದ್ಭವಿಸಿದ ಆದಿಯಿಂದಲೂ ಗಂಡಸು ದೃಢಕಾಯನಾಗಿಯೂ ಧೀರನಾಗಿಯೂ ಬಾಳಿ ಆಸ್ತಿ-ಪಾಸ್ತಿಗಳನ್ನು ಮಾಡಿ ತನ್ನ ಬಂಧುಬಳಗವನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬರಲು ಇರಬೇಕಾದ ಅನೇಕ ಎಡರು ತೊಡರುಗಳನ್ನು ಲೆಕ್ಕಿಸದೆ, ಶತೃಗಳನ್ನು ಹಿಮ್ಮೆಟ್ಟಿಸಿ ಅಥವಾ

ಧ್ವಂಸಮಾಡಿ ತನ್ನ ಪೀಳಿಗೆಯನ್ನು ಕಾಪಾಡಿಕೊಂಡು ಬಂದಿದ್ದಾನೆ. ತನ್ನನ್ನು ಆಶ್ರಯಿಸಿದ ಹೆಣ್ಣು ಪೀಳಿಗೆಯನ್ನು ಸಂರಕ್ಷಿಸಿಕೊಂಡು ಬಂದಿದ್ದಾನೆ. ಸ್ತ್ರೀಯಾದವಳು ಮನೆಯಲ್ಲಿದ್ದುಕೊಂಡು ಅವನಿಗೆ ಸಹಾಯಕಳಾಗಿ ತನ್ನ ಸಂತಾನವನ್ನು ಪಡೆದು ಅದನ್ನು ಸಂರಕ್ಷಿಸಿಕೊಂಡು ಬಂದಿದ್ದಾಳೆ ಎನ್ನುವ ತಿಳುವಳಿಕೆಯೊಂದು ಆಧುನಿಕ ಕಾಲಘಟ್ಟದಲ್ಲಿಯೂ ಪ್ರಬಲವಾಗಿದೆ. ಈ ದಿಶೆಯಿಂದಾಗಿ ಪಿತೃಮೂಲ ಕುಟುಂಬಗಳು ಸ್ತ್ರೀ ಮೂಲ ಕುಟುಂಬಗಳಿಗಿಂತ ಜನಪ್ರಿಯವಾದವು.

> ಇದನ್ನು ಮನಗಂಡ ಮೆಕೈವರ್ ಈ ರೀತಿ ನುಡಿದಿದ್ದಾನೆ. "ಸಮಾಜದಲ್ಲಿ ಆಸ್ತಿ-ಪಾಸ್ತಿಗಳಿಗಿರುವ ಮೌಲ್ಯಗಳೂ ವ್ಯವಸಾಯೋತ್ಪಾದನೆಯೂ ಅದರ ಬೆಳವಣಿಗೆ ಸಂಬಂಧಪಟ್ಟ ಸಕಲ ಸೌಲಭ್ಯಗಳು ಆಡಳಿತ ವ್ಯವಸ್ಥೆಯೂ ಕಾರ್ಯ ನಿಪುಣತೆಯ ಕಾರ್ಯಚಟುವಟಿಕೆಗಳು ಆಧುನಿಕ ಸಮಾಜದಲ್ಲಿ ನೈಪುಣ್ಯ ಪಡೆದಿರುವ ಸಕಲ ಕಸುಬುಗಳೂ ಪಿತೃಪ್ರಧಾನ್ಯತೆವುಳ್ಳ ಕುಟುಂಬದಿಂದ ಉದ್ಭವಿಸಿವೆ. ಇದರ ಜೊತೆಗೆ ಪಿತೃಪ್ರಧಾನ್ಯವುಳ್ಳ ಕುಟುಂಬದ ದೆಶೆಯಿಂದ ಜನಗಳ ಒಕ್ಕೂಟವೂ ಒಗ್ಗಟ್ಟೂ ಹೆಚ್ಚಾಗಿ ಮಾನವ ಸಮಾಜದ ಭದ್ರತೆಗೆ ಕಾರಣವಾಗಿದೆಯೆಂದು, ಪ್ರತಿಯೊಬ್ಬ ಮಾನವನು ತನ್ನ ಸಹೋದ್ಯೋಗಿಗಳೊಂದಿಗೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಶಕ್ತಿ ಸಾಮರ್ಥ್ಯಗಳನೊಳ್ಳಗೊಂಡವನಾಗಿ ತನ್ನ ರಕ್ತ ಸಂಬಂಧಿಗಳ ನಡವಳಿಕೆಗಳನ್ನು ಭದ್ರಗೊಳಿಸಲು ಪಿತೃಪ್ರಧಾನ್ಯ ಕುಟುಂಬ ನೆರವಾಗಿದೆಯೆಂದು, ನವೀನ ಸಮಾಜದ ಭದ್ರತೆಗೆ, ಪುರುಷನ ಪುರುಷತ್ವಕ್ಕೆ ತಕ್ಕ ಮನ್ನಣೆಯನ್ನು ಕೊಟ್ಟು, ಮಾನವ ಪೀಳಿಗೆಯ ಸರ್ವೋದ್ಧಾರಕ್ಕೆ ಕಾರಣವಾಗಿದೆಯೆಂದು ತಿಳಿಯಲಾಗಿದೆ"(ವೆಂ. ವನಜ; ೨೦೦೦:೪೮-೪೯).

ಈ ತಿಳುವಳಿಕೆಯನ್ನು ಮಹಿಳಾ ಅಧ್ಯಯನಕಾರರ ದೃಷ್ಟಿಕೋನದಿಂದ ನೋಡುವುದಾದರೆ ಈ ಎಲ್ಲಾ ಮಾಹಿತಿಗಳು ನಿಜವೇ? ಎಂಬ ಪ್ರಶ್ನೆಯನ್ನು ಎತ್ತುವುದರೊಂದಿಗೆ ಈ ಪ್ರಶ್ನೆಗಳಿಗೆ ಉತ್ತರ ನೀಡುವುದು ಎಂದರೆ ಇಲ್ಲಿ ಮಹಿಳೆಯನ್ನು ತುಂಬಾ ಹಿನಾಯಸ್ಥಿತಿಗೆ ಉಂಟುಮಾಡಲಾಗಿದೆ. ಪುರುಷನ ಜೊತೆಯಲ್ಲಿ ಮಹಿಳೆಯು ಇದ್ದರೂ ಸಹ ಇಲ್ಲಿ ಇವರ ಪ್ರಸ್ತಾಪವೆತ್ತುತ್ತಿಲ್ಲ. ಸಮಾಜದ ದೃಷ್ಟಿ ಯಲ್ಲಿ ಅವಳನ್ನು ಇನ್ನೂ ಕೆಳಮಟ್ಟದ ಸ್ಥಾನದಲ್ಲಿಯೇ ಇರಿಸುತ್ತಿರುವುದು ತುಂಬಾ ಶೋಚನೀಯ ವಾಗುತ್ತದೆ.

ಪಿತೃಪ್ರಧಾನ ಕುಟುಂಬಗಳಲ್ಲಿ ಸ್ತ್ರೀಯ ಸ್ಥಾನಮಾನಗಳು ಸುಭದ್ರವಾಗಿ ಕಂಡುಬರದೆ ಪುರುಷನ ಸ್ಥಾನಮಾನಗಳಿಗಿಂತ ಕೆಳಮಟ್ಟದಲ್ಲಿಯೇ ಇರುತ್ತವೆ. ಕಾನೂನನ್ನು ಒಕ್ಕಣಿಸುವಾಗಲು ಇದೇ ಮೇಲ್ಪಂಕ್ತಿಯನ್ನು ಅನುಸರಿಸಿರುವ ಸಂದರ್ಭಗಳು ಅನೇಕ ಭಾರಿ ಉದ್ಭವಿಸಿವೆ. ಇಂಥ ಪರಿಸ್ಥಿತಿ

ಭಾರತದಲ್ಲಿ ಕಾಲದಿಂದ ರೂಢಿಯಲ್ಲಿದೆ. ಬಹುಕಾಲ ಹೆಂಗಸರನ್ನು ಗಂಡಸರಿಗೆ ಸಮಾನರೆಂದು ಸಮಾಜ ಭಾವಿಸಿರಲಿಲ್ಲ. ಸಮಾನ ಹಕ್ಕುಗಳು ಅವರಿಗೆ ಇರಲಿಲ್ಲ. ಮನೆಯಲ್ಲಿ ನಿಂತು ವಿಶ್ರಾಂತಿ ಪಡೆಯಲು ಅರ್ಹರಾದ ಗುಣವುಳ್ಳದ್ದಾಗಿರುವದೆಂದೂ ಕಷ್ಟ ಕಾರ್ಪಣ್ಯಗಳಿಂದ ಅದರ ದೇಹ ಕೃಶವಾಗುವುದೆಂದೂ ಕಠಿಣ ವ್ಯವಸ್ಥೆಯಲ್ಲಿ ಸಮಯಕ್ಕೆ ತಕ್ಕ ಚುರುಕಾಗಿ ಸ್ಥಿರವಾಗಿ ನಿಲ್ಲಲಾರದೆಂದು, ನಿರ್ಣಯಗಳನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲವೆಂದೂ ತಿಳಿದಲ್ಲಿ ಪಿತೃಮೂಲ ಕುಟುಂಬ ವ್ಯವಸ್ಥೆ ಯನ್ನು ಒಪ್ಪಬೇಕಾಗುತ್ತಿತ್ತು.

ವಾಸ್ತವವಾಗಿ ಇಲ್ಲಿ ಪಿತೃವಂಶೀಯ ಕುಟುಂಬವೆಂದರೆ, ಮೂರು ಪೀಳಿಗೆಗಳಿಗೆ ಸೇರಿದ, ಒಂದೇ ಸೂರಿನಡಿ ವಾಸಿಸುವ ಸಹಪಂಕ್ತಿ ಭೋಜನ ಮಾಡುವ ವ್ಯಕ್ತಿಗಳನ್ನು ಹೊಂದಿರುತ್ತದೆ. ಇವರೆಲ್ಲಾ ಪುರುಷರ ಸಂಬಂಧಿಗಳು, ಅವರ ಪತ್ನಿಯರು, ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು ಆಗಿರುತ್ತಾರೆ. ಇಲ್ಲಿ ಒಂದೇ ಆಯವ್ಯಯ ಪಟ್ಟಿ, ಒಂದೇ ವಾಸದ ಮನೆ, ಜಂಟಿ ಒಡೆತನದ ಆಸ್ತಿ, ಕುಟುಂಬದ ಒಂದೆಡೆ ಕ್ರೋಢೀಕರಣಗೊಂಡಿರುವ ಕೌಶಲ್ಯ, ಶ್ರಮಿಕರು ಮತ್ತು ಸಂಪನ್ಮೂಲಗಳು ಕಂಡುಬರುತ್ತವೆ. ಒಂದೇ ಹೆಸರು, ಕುಲ, ಪೂರ್ವಜರ ಪೂಜೆ, ಒಂದೇ ದೇವರು, ಧಾರ್ಮಿಕ ಸಂಸ್ಕಾರಿಗಳು, ಹುಟ್ಟು ಸಾವಿನಲ್ಲಿ ಮಡಿ-ಮೈಲಿಗೆಯ ಆಚರಣೆಗಳು ಮುಂತಾದವುಗಳಿರುತ್ತವೆ ಎಂದು ಸಮಾಜಶಾಸ್ತ್ರಜ್ಞರು ವಿವರಿಸುತ್ತಾರೆ.

ಭಾರತದಲ್ಲಿ ವ್ಯಾಪಕವಾಗಿರುವ ಕುಟುಂಬವೆಂದರೆ, ಪಿತೃವಂಶೀಯ ಮತ್ತು ಪಿತೃಸ್ಥಾನೀಯಗಳು ಇವು ಪಿತೃಪ್ರಧಾನ ಕುಟುಂಬಗಳು ಆಗಿರುತ್ತವೆ. ಪಿತೃಪ್ರಧಾನ ವ್ಯವಸ್ಥೆಯನ್ನು ಹೈದಿ ಹಾರ್ಟಮನ್ ಎಂಬ ಸ್ತ್ರೀವಾದಿ ಮಹಿಳೆ ಹೀಗೆ ವಿವರಿಸುತ್ತಾರೆ.

"A set of social relations between men which have a material base and which though hierarchical, establish or create interdependence and solidarity among men that enable themto dominate women"(Heidi Hartmann) (ಉಲ್ಲೇಖ: ಮಹಿಳಾ ಅಧ್ಯಯನ, ದಕ್ಷಿಣಯಾನ ಸಂಚಿಕೆ, ಸಂ-೨, ಪು.೪೮)

ಮಹಿಳೆಯರ ಲೈಂಗಿಕತೆ, ಸಂತಾನೋತ್ಪತ್ತಿಯ ಸಾಮರ್ಥ್ಯ, ಆರ್ಥಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವ ಮೂಲಕ ಮಹಿಳೆಯರನ್ನು ನಿಯಂತ್ರಿಸಲಾಗುತ್ತದೆ. ಇದು ಏಕಪತಿ ವಿವಾಹ ಪದ್ಧತಿ, ಮಕ್ಕಳ ಪೋಷಣೆ ಮತ್ತು ಮನೆಗೆಲಸದ ಜವಾಬ್ದಾರಿ, ಪುರುಷರು, ರಾಜಕೀಯ ವ್ಯವಸ್ಥೆ ಮತ್ತಿತರ ಸಂಘ ಸಂಸ್ಥೆಗಳ ಮೇಲಿನ ಆರ್ಥಿಕಾವಲಂಬನೆ ಮುಂತಾದವುಗಳಲ್ಲಿ ವ್ಯಕ್ತವಾಗುತ್ತದೆ ಎಂದು ಹೇಳಿದ್ದಾರೆ.

ಪಿತೃವಂಶೀಯ ಮತ್ತು ಪಿತೃ ಸ್ಥಳೀಯ ಕುಟುಂಬಗಳಲ್ಲಿ, ಮಗನನ್ನು ತಂದೆಯ ವಾರಸುದಾರ, ವೃದ್ಧಾಪ್ಯದಲ್ಲಿ ಆಶ್ರಯದಾತೆ, ಕುಟುಂಬದ ಘನತೆ, ಗೌರವಗಳನ್ನು ಕಾಪಾಡುವವನು, ಸಂಪತ್ತನ್ನು ವೃದ್ಧಿಸುವವನು, ವಂಶವನ್ನು ಮುಂದುವರೆಸುವವನು. ಎಂದು ಭಾವಿಸಲಾಗುತ್ತದೆ. ಮಗ ತನ್ನ ತಂದೆಯ ಚಿತೆಗೆ ಬೆಂಕಿ ಇಡುವ ಮೂಲಕ ಅವನನ್ನು 'ಪುತ್' ಎಂಬ ನರಕದಿಂದ ಪಾರು ಮಾಡಿ ಸ್ವರ್ಗಕ್ಕೆ ಸೇರಿಸುತ್ತಾನೆ ಎನ್ನುವ ನಂಬಿಕೆ ಇದೆ. ಇದು ಕುಟುಂಬದಲ್ಲಿ ಮಗನಿಗೆ ಇರುವ ವಿಶೇಷ ಸ್ಥಾನಮಾನಗಳನ್ನು ಸೂಚಿಸುತ್ತದೆ.

ಡೆವಿಸ್ ಎ. ಮ್ಯಾಡಲ್ ಬಾಮೌರವರು ಭಾರತೀಯ ಕುಟುಂಬದಲ್ಲಿ ಸೊಸೆಯ ಸ್ಥಾನಮಾನಗಳ ಬಗ್ಗೆ ಹೇಳುತ್ತಾರೆ.

"A young wife of any jati or region usually has the lowest status in the family and is given the more one roud chores. What ever goes away she is upto to be called the culprit. Whatever the finger of blame is pointed it sone how swing to her"(Mandalbam;1970:86).(ಉಲ್ಲೇಖ: ಮಹಿಳಾ ಅಧ್ಯಯನ, ದಕ್ಷಿಣಯಾನ ಸಂಚಿಕೆ, ಸಂ-೨, ಪು.೫೧)

ಇವರು ಹೇಳಿರುವ ಈ ಹೇಳಿಕೆಯನ್ನು ಗಮನಿಸಿದರೆ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಲ್ಲಿಯೇ ಶ್ರೇಣೀಕರಣಗಳಿರುವುದನ್ನು ಕಾಣುತ್ತೇವೆ. ಅತ್ತೆಯೆಂದರೆ ಹಿರಿಯದಾದ ಪಾತ್ರ ನೀಡುವುದಲ್ಲದೆ ಅವಳು ತನ್ನ ಸೊಸೆಯು ತಾನು ಹೇಳಿರುವ ದಾರಿಯಲ್ಲಿಯೇ ನಡೆಯಬೇಕೆಂಬ ಅಭಿಪ್ರಾಯ ಇಟ್ಟುಕೊಳ್ಳುತ್ತಾರೆ. ಇಲ್ಲಿ ಸೊಸೆಯೆನ್ನುವ ಪಾತ್ರವನ್ನು ಕನಿಷ್ಠ ಸ್ಥಾನದಲ್ಲಿ ನಿಲ್ಲಿಸ ಲಾಗಿದೆ.

ಮಹಿಳೆಯೊಬ್ಬಳಿಗೆ ತನ್ನ ಪತಿಯ ಮನೆಯಲ್ಲಿ ದೊರಕುವ ಸ್ಥಾನಮಾನ ಇನ್ನೂ ಕೆಲವು ಅಂಶಗಳಿಂದ ನಿರ್ಧಾರವಾಗುತ್ತವೆ. ಅವೆಂದರೆ ೧. ಸಮಾಜದಲ್ಲಿ ಅವಳ ಹೆತ್ತವರ ಸ್ಥಾನಮಾನ ೨. ಪತಿಯ ಉದ್ಯೋಗ ಮತ್ತು ಸಾಮಾಜಿಕ ಸ್ಥಾನಮಾನ ೩. ಮಧ್ಯಮ ಮತ್ತು ಮೇಲ್ವರ್ಗಗಳ ಕುಟುಂಬಗಳಲ್ಲಿ ಅವಳು ತರುವ ವರದಕ್ಷಿಣೆ ಮತ್ತು ಉಡುಗೊರೆಗಳು. ೪. ತಾಯ್ತನ ಅದರಲ್ಲೂ ಗಂಡು ಮಗುವಿನ ತಾಯಿಯಾಗುವುದು.

ಪುರುಷ ಪ್ರಧಾನವಾದ ಸಮಾಜ ಕುಟುಂಬ ಎಂಬ ಒಂದು ಚಿಕ್ಕ ಘಟಕದ ಮೂಲಕ ಸಾಧಿಸಿದೆ. ಗರ್ಡಾಲರ್ನರ್ ಎಂಬ ಸ್ತ್ರೀವಾದಿ ಹೇಳುವಂತೆ, "The family note merely

mirrors the order is the state and educates its children to follow it, also creates and constanty rein forces that order"(ಉಲ್ಲೇಖ: ಮಹಿಳಾ ಅಧ್ಯಯನ, ದಕ್ಷಿಣಾಯಾನ ಸಂಚಿಕೆ, ಸಂ-೨, ಪು.೫೭-೫೮).

## ಆಧುನಿಕತೆಯ ಸಂದರ್ಭದಲ್ಲಿ ಕುಟುಂಬ ವ್ಯವಸ್ಥೆ

ಕೈಗಾರಿಕಾ ಕ್ರಾಂತಿಯು ಸಮಾಜ ವ್ಯವಸ್ಥೆಯನ್ನು, ಸಾಂಪ್ರದಾಯಕ ರೀತಿಯಿಂದ ಆಧುನಿಕತೆಯ ಕಡೆ ವಾಲಿಸಿತು. ಅಂತೆಯೇ ಭಾರತದಲ್ಲಿ ವಸಾಹತು ಆಳ್ವಿಕೆಯ ಸಂದರ್ಭವು ಆಧುನಿಕತೆಯನ್ನು ಹುಟ್ಟಿಹಾಕಿದ್ದಾಗಿದ್ದು, ಅದು ಇಂದಿಗೂ ಹೊಸ ಹೊಸ ಪಲ್ಲಟಗಳನ್ನು ತರುತ್ತಲೇ ಮುಂದುವರಿದಿದೆ. ಔದ್ಯೋಗೀಕರಣದಿಂದ ನಗರೀಕರಣವು ತೀವ್ರಗತಿಯಲ್ಲಿ ಪ್ರಭಾವಬೀರಿ ಗ್ರಾಮೀಣ ಸಮಾಜದಿಂದ ಜನರು ನಗರಗಳಿಗೆ ವಲಸೆ ಹೋಗುವಂತೆ ಆಕರ್ಷಿಸುತ್ತಿದೆ. ಈ ರೀತಿಯ ನಗರಗಳ ಸಂಪರ್ಕ ಮತ್ತು ನಗರ ಜೀವನವು ಗ್ರಾಮಸ್ಥರ ವಿಚಾರಗಳಲ್ಲಿಯೂ ಕೆಲಸ ಕಾರ್ಯಗಳ ರೀತಿಯಲ್ಲಿಯೂ, ಕಸುಬುಗಳಲ್ಲಿಯೂ, ಶಿಕ್ಷಣದ ಬಗೆಗೂ ಬದಲಾವಣೆಗಳನ್ನುಂಟು ಮಾಡುತ್ತದೆ. ಹೀಗಾಗಿ ಸಮಾಜದಲ್ಲಿ ಆಧುನಿಕತೆ ಕಂಡುಬರುತ್ತಿದೆ. ಇದಲ್ಲದೇ ಸಮಾಜದ ವ್ಯವಸ್ಥೆಯಲ್ಲಿ, ಕೌಟುಂಬಿಕ ಜೀವನ ಮತ್ತು ಸಾಮಾಜಿಕ ಜೀವನಗಳಲ್ಲಿ ಹೊಸ ಮೌಲ್ಯಗಳ ಪ್ರಭಾವ ವಿಶೇಷವಾಗಿ, ಸಾಂಪ್ರದಾಯಿಕ ಜೀವನದ ರೀತಿ ಆಧುನಿಕ ಜೀವನದ ರೀತಿಗೆ ಎಡೆಮಾಡಿಕೊಡುತ್ತಿದೆ. ಈ ತರಹದ ಬದಲಾವಣೆಗಳು ನಗರ ಸಮಾಜಗಳಲ್ಲಿ ಅಧಿಕವಾಗಿದ್ದು, ನಗರಗಳಲ್ಲಿ ಆಧುನಿಕ ಸಮಾಜದ ಅಸ್ತಿತ್ವ ಎದ್ದು ಕಾಣುತ್ತಿದೆ. ಔದ್ಯೋಗೀಕರಣ, ಯಂತ್ರ ಕೌಶಲ್ಯ ಮತ್ತು ನಗರೀಕರಣ ಇವು ಆಧುನಿಕ ಸಮಾಜದ ಮುಖ್ಯ ಲಕ್ಷಣಗಳಾಗಿ ಕಂಡುಬರುತ್ತಿವೆ. ಈ ಶಕ್ತಿಗಳು ಆಧುನಿಕ ಸಮಾಜದ ವಿವಿಧ ಘಟಕಗಳಲ್ಲಿ ಬದಲಾವಣೆಗಳನ್ನು ತರುವಲ್ಲಿ ಕಾರಣವಾಗಿವೆ. ಸಮಾಜದ ಮುಖ್ಯ ಘಟಕವಾದ ಕುಟುಂಬ. ವಿಶೇಷವಾಗಿ ನಗರ ಸಮಾಜದಲ್ಲಿ ಅವಿಭಕ್ತ ಕುಟುಂಬದಿಂದ ವಿಭಕ್ತ ಕುಟುಂಬದ ಬೆಳವಣಿಗೆಯಲ್ಲಿ, ಪರಿವರ್ತನೆಗಳನ್ನು ಕಾಣುತ್ತಿದೆ. ವಿಭಕ್ತ ಕುಟುಂಬವು ಆಧುನಿಕ ಕುಟುಂಬದ ಪ್ರತೀಕವಾಗುತ್ತಿದೆ.

ಸಾಮಾನ್ಯವಾಗಿ 'ಆಧುನಿಕತೆ' ಮತ್ತು 'ಆಧುನೀಕರಣ' ಎನ್ನುವ ಪದಗಳನ್ನು ಪರಿಕಲ್ಪನೆ ಮತ್ತು ಪ್ರಕ್ರಿಯೆ ಎನ್ನುವ ಅರ್ಥದಲ್ಲಿ ಬಳಸಲಾಗುವುದು. ಅನೇಕ ಸಾಮಾಜಿಕ ವಿಜ್ಞಾನಿಗಳು ಇವುಗಳ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ. ಸ್ಟೀಫನ್‌ಸನ್ನರ್ ಅಭಿಪ್ರಾಯದಲ್ಲಿ "ಆಧುನಿಕತೆ ಎಂದರೆ ಆಧುನಿಕ ಮೌಲ್ಯಗಳು ಮತ್ತು ನಂಬುಗೆಗಳು ಮತ್ತು ಆಧುನೀಕರಣವೆನ್ನುವುದು ಸಾಂಪ್ರದಾಯಿಕ

ರೀತಿಯಲ್ಲಿ ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಕಂಡುಬರುವ ಬದಲಾವಣೆ ಅಥವಾ ಚಲನೆ" ಆಧುನೀಕರಣವೆನ್ನುವುದು ಒಂದು ಸಾಮಾಜಿಕ ಪ್ರಕ್ರಿಯೆ. ಸಮಾಜದ ಒಬ್ಬ ವ್ಯಕ್ತಿ ಅಥವಾ ಒಂದು ಗುಂಪು ಆಧುನಿಕ ಮೌಲ್ಯಗಳಿಗೆ ಯಾವ ರೀತಿಯಲ್ಲಿ ವರ್ತಿಸುತ್ತಾನೆ ಎನ್ನುವುದನ್ನು ಪ್ರಕ್ರಿಯೆ ತೋರಿಸುತ್ತದೆ. ಕಾರಣ ಒಂದು ಸಮಾಜ ತನ್ನ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಮೇಲೆ ಆಧುನಿಕ ಮೌಲ್ಯಗಳನ್ನು ಸ್ವೀಕಾರ ಮಾಡುತ್ತದೆ. ಇಲ್ಲವೆ ಪ್ರತಿಭಟಿಸುತ್ತದೆ. ಎಸ್.ಸಿ. ದುಬೆಯವರ ಪ್ರಕಾರ "ಆಧುನೀಕರಣವೆಂದರೆ ಕೆಲವು ಅಭಿವೃದ್ಧಿ ಹೊಂದಿದ ದೇಶಗಳ ಮೌಲ್ಯಗಳನ್ನು ಕೇವಲ ತೋರಿಕೆಗಾಗಿ ಅಳವಡಿಸಿಕೊಳ್ಳುವುದು ಎಂದು ಅಲ್ಲ. ಸಂಸ್ಕೃತಿಗೆ ಹೊಂದಾಣಿಕೆಯಾಗುವ ರೀತಿಯಲ್ಲಿ ವಿದಾಯಾತ್ಮಕವಾಗಿ ಮೌಲ್ಯಗಳನ್ನು ಆವರಿಸಿಕೊಳ್ಳುವುದು. ಹೀಗಾಗಿ ಈ ಪ್ರಕ್ರಿಯೆಯಲ್ಲಿ ಬಹಳಷ್ಟು ಮೌಲ್ಯಗಳು ಬದಲಾವಣೆಗಳು ಮತ್ತು ಸಂಘ, ಸಂಸ್ಥೆಗಳ ರಚನೆ ಮತ್ತು ವ್ಯವಸ್ಥೆ ಯಲ್ಲಿಯ ಬದಲಾವಣೆಗಳು ಕೂಡಿಕೊಂಡಿವೆ"(ಎಸ್.ಆರ್.ಶಾಸ್ತ್ರೀ; ೧೯೮೬:೩).

ಆಧುನೀಕರಣಕ್ಕೆ, ಮೌಲ್ಯಗಳಲ್ಲಿ ಬದಲಾವಣೆ ಮತ್ತು ಜನರಿಂದ ಅವುಗಳ ಸ್ವೀಕಾರ ಸಾಂಪ್ರದಾಯಿಕ ಮೌಲ್ಯಗಳ ಮತ್ತು ಆಧುನಿಕ ಮೌಲ್ಯಗಳು ಹೊಂದಾಣಿಕೆ ಅವಶ್ಯವಿದೆ. ಹಳೆಯ ಸಂಪ್ರದಾಯಗಳೆಲ್ಲಾ ಕೆಟ್ಟವು, ಹೊಸ ಬಗೆಯ ಮೌಲ್ಯಗಳೆಲ್ಲ ಒಳ್ಳೆಯವು ಎಂದು ಹೇಳಲಿಕ್ಕಾ ಗುವುದಿಲ್ಲ. ಸಂಪ್ರದಾಯವಾದ ಕೆಲವು ಮೌಲ್ಯಗಳನ್ನು ಉಳಿಸಿಕೊಂಡು, ಇನ್ನೂ ಕೆಲವನ್ನು ಆಧುನೀಕರಣದ ಹಿನ್ನೆಲೆಯಲ್ಲಿ ಸ್ವಲ್ಪಮಟ್ಟಿಗೆ ಬದಲಾಯಿಸಿ ಆಗಲಿ, ಪೂರ್ಣಬಿಟ್ಟು, ಹೊಸ ಮೌಲ್ಯಗಳನ್ನು ಅಳವಡಿಸಿಕೊಂಡು ಆಗಲಿ ಸಮಾಜ ಆಧುನಿಕವಾಗಿ ಬೆಳೆಯಬಹುದು. ಮಿಲ್ಟನ್ ಸಿಂಗ್ ಅವರು "ಸಂಪ್ರದಾಯ ರೀತಿಯ ಅವಿಭಕ್ತ ಕುಟುಂಬ ವಿಶೇಷವಾಗಿ ಮಾರ್ಪಾಡುಗೊಳ್ಳದೆ ಔದ್ಯೋಗಿಕ ಸಮಾಜದಲ್ಲಿ, ಔದ್ಯೋಗಿಕ ಕಾರ್ಯಕ್ಷೇತ್ರದಲ್ಲಿ ಅನುಕೂಲಪ್ರಾಯವಾಗಿ ಕೆಲಸ ಮಾಡಬಹುದು" ಎಂಬುದನ್ನು ಪ್ರತಿಪಾದಿಸಿದ್ದಾರೆ(ಎಸ್.ಆರ್.ಶಾಸ್ತ್ರೀ; ೧೯೮೬:೪).

ಭಾರತೀಯ ಸಮಾಜದಲ್ಲಿ ಸಾಂಪ್ರದಾಯಕವಾಗಿ ಕುಟುಂಬ ಪದವು ಅವಿಭಕ್ತ ಕುಟುಂಬವನ್ನೇ ಸೂಚಿಸುತ್ತಿತ್ತು. ಅವಿಭಕ್ತ ಕುಟುಂಬವು ಭಾರತೀಯ ಜೀವನದ ಒಂದು ಮಹತ್ತರವಾದ ಲಕ್ಷಣವೆಂದು ಪರಿಗಣಿಸಲ್ಪಡುತ್ತಿತ್ತು. "ಅವಿಭಕ್ತ ಕುಟುಂಬವು ಸಾಂಪ್ರದಾಯಕ ಜೀವನದ ಉಸಿರಾಗಿತ್ತು" ಎಂದು ಏಲಿಸ್ ಡಿ. ರಾಸ್ ಅವರು ಅಭಿಪ್ರಾಯ ಪಡುತ್ತಾರೆ(ಎಸ್.ಆರ್.ಶಾಸ್ತ್ರೀ;೧೯೮೬:೫). ಔದ್ಯೋಗಿಕರಣ ಮತ್ತು ನಗರೀಕರಣಗಳ ಪ್ರಭಾವದಿಂದಾಗಿ, ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಜೀವನ ರಂಗಗಳಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬರುತ್ತವೆ. ಸಾಮಾಜಿಕ ಆರ್ಥಿಕ, ಸಾಂಸ್ಕೃತಿಕ ಮತ್ತು

ಪೌರ ಜೀವನದಲ್ಲಿ ತೀವ್ರಗತವಾಗಿ ಆಗುತ್ತಿರುವ ಬದಲಾವಣೆಗಳು ಕೌಟುಂಬಿಕ ಜೀವನದ ಗತಿಯನ್ನು ಬದಲಾಯಿಸುತ್ತಿವೆ. ಎಂದು ಡೇವಿಡ್ ಮತ್ತು ವೀರಾಮೇಸಿ ಅವರ ಅಭಿಪ್ರಾಯ. ಕೆಲವು ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗೆ ಕಾರಣವಾದ ಶೈಕ್ಷಣಿಕ ಸೌಲಭ್ಯ ಅಧಿಕವಾಗಿ ಲಭ್ಯವಿರುವ ಉತ್ತಮ ಆದಾಯದ ಅವಕಾಶಗಳು ಮನೆಯ(ಕುಟುಂಬದ) ರಚನೆಯನ್ನು ಪರಿವರ್ತನೆಗೊಳಿಸಿವೆ. ಹೆಣ್ಣು ಮಕ್ಕಳ ಶಿಕ್ಷಣ ಅವಕಾಶ ಮತ್ತು ಅವರ ಮನೆಯ ಹೊರವಲಯಗಳನ್ನು ವಿಸ್ತರಿಸುತ್ತಿರುವ ಕಾರ್ಯ ಕ್ಷೇತ್ರ, ಕೌಟುಂಬಿಕ ನಿಯಂತ್ರಣಗಳ ಸಡಲಿಕೆಯಿಂದಾಗಿ ಕೌಟುಂಬಿಕ ಜೀವನದಲ್ಲಿ ಬದಲಾವಣೆಗಳು ಉಂಟಾಗುತ್ತಿವೆ. "ಮುಕ್ತ ಶಿಕ್ಷಣ, ಸಮಾನತೆಯ ಸ್ವಾಭಿಮಾನದ ಹೊಸ ಹೊಸ ವಿಚಾರಗಳು, ವ್ಯಕ್ತಿತ್ವದ ಬಗ್ಗೆ ಬೆಳೆಸಿಕೊಂಡ ಮೌಲ್ಯಗಳು ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಬಗ್ಗೆ ಉಂಟಾಗಿರುವ ಅಪೇಕ್ಷೆಗಳು, ವಿವಾಹ, ಕೌಟುಂಬಿಕ ಜೀವನ ಮತ್ತು ಹೆಣ್ಣು ಮಕ್ಕಳ ಕೌಟುಂಬಿಕ ಜವಾಬ್ದಾರಿಗಳ ರೀತಿಯಲ್ಲಿ ಬದಲಾವಣೆಗಳನ್ನು ತರುವಲ್ಲಿ ಕಾರಣೀಭೂತವಾದ ಮುಖ್ಯ ಅಂಶಗಳಾಗಿವೆ" ಎಂದು ಎಂ.ಎಸ್. ಗೋರೆಯವರು ಅಭಿಪ್ರಾಯಪಡುತ್ತಾರೆ(ಎಸ್.ಆರ್.ಶಾಸ್ತ್ರೀ;೧೯೮೬: ೬). ಆಧುನೀಕರಣದ ಪ್ರಭಾವದಿಂದಾಗಿ ಕೌಟುಂಬಿಕ ಜೀವನದಲ್ಲಿ ಉಂಟಾದ ಬದಲಾವಣೆಗಳು ಕುಟುಂಬದ ರಚನೆಯನ್ನು ಬದಲಾಯಿಸುತ್ತಿವೆ. ಅವಿಭಕ್ತ ಕುಟುಂಬ ಕ್ಷೀಣಗೊಳ್ಳುತ್ತಿರುವ ಉದಾ ಹರಣೆಗಳು ಇವೆ. ಅವಿಭಕ್ತ ಕುಟುಂಬಗಳು ಒಡೆದು ವಿಭಕ್ತ ಕುಟುಂಬಗಳಾಗಿ ಮಾರ್ಪಡುವ ಬದಲಾವಣೆಗಳನ್ನು ಕಾಣುತ್ತೇವೆ. ಈ ತರಹದ ಬದಲಾವಣೆಗಳು ನಗರ ಸಮಾಜಗಳಲ್ಲಿ ತೀವ್ರ ವಾಗಿದ್ದು, ಗ್ರಾಮೀಣ ಸಮಾಜದಲ್ಲಿ ಮಂದಗತಿಯಾಗಿದೆ.

ವಿಭಕ್ತ ಕುಟುಂಬಗಳು ದಿನೇ ದಿನೇ ಹೆಚ್ಚುತ್ತಲಿವೆ. ಕಾರಣ ಮಹಿಳೆಯರು ಸ್ವತಂತ್ರವಾಗಿ ಮುಂದುವರೆಯಲು ಪ್ರಯತ್ನಿಸುತ್ತಿದ್ದಾರೆ. ಈ ಹಿಂದಿನ ಕುಟುಂಬಗಳಲ್ಲಿ ಹಿರಿಯರಿಗೆ ಅವರ ಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿ ಇರುತ್ತಿತ್ತು. ಆದರೆ ಆಧುನಿಕ ಸಂದರ್ಭದಲ್ಲಿ ಒಬ್ಬರಿಂದಲೇ ಕುಟುಂಬ ನಿಭಾಯಿಸುವುದು ತುಂಬಾ ಕಷ್ಟಕರವಾಗುತ್ತಿದೆ. ದಿನೇ ದಿನೇ ಏರುತ್ತಿರುವ ಬೆಲೆಗಳಿಂದಾಗಿ ಒಬ್ಬರ ದುಡಿಮೆಯಿಂದಲೇ ಸಂಸಾರ ತೂಗಿಸುವುದು ಸಾಧ್ಯವಿಲ್ಲದ ಮಾತಾಗಿದೆ. ಸ್ತ್ರೀಯರಿಗೆ ಶಿಕ್ಷಣ ಎನ್ನುವುದು ಅನಿವಾರ್ಯವಾಯಿತು. ಸ್ತ್ರೀಯರು ಉದ್ಯೋಗಸ್ಥರು ಆಗಿ ಸಾರ್ವಜನಿಕ ಜೀವನದಲ್ಲಿ ಪಾಲ್ಗೊಳ್ಳುವಿಕೆಯಲ್ಲಿ ತೊಡಗಿಸಿಕೊಂಡಿರುತ್ತಾರೆ. ವಿಭಕ್ತ ಕುಟುಂಬವು "ಪತಿ, ಪತ್ನಿ ಮತ್ತು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಒಳಗೊಂಡ ಸಣ್ಣದಾದ ಸ್ವತಂತ್ರ ಗುಂಪು". ಈ ಕುಟುಂಬದಲ್ಲಿ ಹಿರಿಯರ ಬಿಗಿಯಾದ ನಿಯಂತ್ರಣವಿರುವುದಿಲ್ಲ. ಅದರ ಗಾತ್ರವು ಚಿಕ್ಕದಾಗಿರುವುದರಿಂದ ಕುಟುಂಬದಲ್ಲಿನ

ಸದಸ್ಯರುಗಳು ಹೆಚ್ಚು ಸ್ವತಂತ್ರವಾಗಿ ವ್ಯವಹರಿಸುತ್ತಾರೆ. ವಿವಾಹಿತ ಮಕ್ಕಳು ಪ್ರತ್ಯೇಕವಾದ ಮನೆಗಳಲ್ಲಿ ವಾಸಿಸುವುದರಿಂದ ಅವಿಭಕ್ತ ಕುಟುಂಬದ ಪ್ರಾಥಮಿಕ ಸಂಬಂಧಗಳು ಕಡಿಮೆಯಾಗಿ ಒಂದು ರೀತಿಯ ಮಾನಸಿಕ ಅಂತರವೂ ನಿರ್ಮಾಣವಾಗುವುದು. ಅದರಲ್ಲಿನ ಪರಸ್ಪರ ಅವಲಂಬನೆಯು ಕಡಿಮೆ ಗೊಳ್ಳುತ್ತದೆ. ಆಧುನಿಕ ಕೈಗಾರಿಕಾ ಸಮಾಜದಲ್ಲಿ ಮುಖ್ಯವಾಗಿ ಮುಂದುವರಿದ ಪಾಶ್ಚಾತ್ಯ ದೇಶಗಳಲ್ಲಿ ಅಣು ಕುಟುಂಬಗಳ ಸಂಖ್ಯೆ ಗಣನೀಯವಾಗಿ ಹೆಚ್ಚುತ್ತಿದೆ. ವಿಭಕ್ತ ಕುಟುಂಬವು ತನ್ನದೇ ಆದ ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವ ಕುಟುಂಬವಾಗಿದೆ. ಆರ್ಥಿಕ ಸ್ವಾವಲಂಬನೆ, ಆಧುನಿಕ ಶಿಕ್ಷಣ, ನಗರೀಕರಣ, ಕೈಗಾರಿಕರಣ, ಪ್ರಜಾಸತ್ತಾತ್ಮಕ ಮೌಲ್ಯಗಳು, ವೈಯಕ್ತಿಕತೆ, ವೈಯಕ್ತಿಕ ಸಾಧನೆ ಮತ್ತು ಸಂತೃಪ್ತಿಯ ಆಸಕ್ತಿ, ಸಾಮಾಜಿಕ ಚಲನೆ ಇತ್ಯಾದಿಗಳು ಸ್ವತಂತ್ರ ಅಣು ಕುಟುಂಬಗಳು ವ್ಯಾಪಕತೆಗೆ ಪೂರಕವಾದ ಅಂಶಗಳಾಗಿವೆ.

**ವಿಭಕ್ತ ಕುಟುಂಬದ ಲಕ್ಷಣಗಳು**

೧. **ಸಾರ್ವತ್ರೀಕತೆ :** ಈ ಕುಟುಂಬವು ಅನೇಕ ಲಕ್ಷಣಗಳಿಂದ ಕೂಡಿದೆ ಮತ್ತು ಇದು ಇಂದು ಸಾರ್ವತ್ರಿಕವಾಗಿದೆ. ಈ ಕುಟುಂಬವನ್ನು ಎಲ್ಲಾ ಸಮಾಜಗಳಲ್ಲಿ, ಸಮುದಾಯಗಳಲ್ಲಿ ಕಾಣಬಹುದು. ಇದು ತಂದೆ-ತಾಯಿ ಮತ್ತು ಮಕ್ಕಳನ್ನೊಳಗೊಂಡ ಒಂದು ಸಾಮಾನ್ಯ ಸಮೂಹ ವಾಗಿದೆ. ಇವು ಕೈಗಾರಿಕೆ ಸಮಾಜಗಳಲ್ಲಿ, ನಗರಗಳಲ್ಲಿ ಮತ್ತು ಆಧುನಿಕತೆಯ ಪ್ರಭಾವದಿಂದ ಬದಲಾಗುತ್ತಿರುವ ಎಲ್ಲಾ ಸಮಾಜಗಳಲ್ಲಿ ಸಾಮಾನ್ಯವಾಗಿ ಕಾಣಬಹುದಾದ ಕುಟುಂಬವಾಗಿದೆ.

೨. **ತಲೆಮಾರು/ಪೀಳಿಗೆ :** ಈ ಕುಟುಂಬವು ಎರಡು ಪೀಳಿಗೆ/ತಲೆಮಾರಿನವರನ್ನು ಹೊಂದಿದೆ. ಅದರ ಗಾತ್ರ ಕೇವಲ ಎರಡು ತಲೆಮಾರಿಗೆ ಸೀಮಿತವಾಗಿದ್ದು ಹೆತ್ತವರು ಮತ್ತು ಅವಿವಾಹಿತ ಮಕ್ಕಳನ್ನು ಒಳಗೊಂಡಿರುತ್ತದೆ. ಆಕಾರದಲ್ಲಿ ಚಿಕ್ಕದು. ಗಂಡ-ಹೆಂಡತಿ, ಮಕ್ಕಳನ್ನೊಳಗೊಂಡ ಕುಟುಂಬವು ಜೈವಿಕ ನಿಯಮಗಳಿಂದಾಗಿ ಚಿಕ್ಕ ಗಾತ್ರವನ್ನು ಹೊಂದಿದೆ. ಹಾಗೆಯೇ ಅದರ ಸದಸ್ಯತ್ವವು ಸೀಮಿತವಾಗಿದೆ.

೩. **ಸಮಾನತೆಯ ತತ್ವ, ನಿಯಂತ್ರಣ ಮತ್ತು ಸ್ವಾತಂತ್ರ್ಯ :** ಕುಟುಂಬವು ಸಮಾನತೆಯ ತತ್ವವನ್ನು ಆಧರಿಸಿದೆ. ಅವಿಭಕ್ತ ಕುಟುಂಬಕ್ಕೆ ಹೋಲಿಸುವಾಗ ಕೇಂದ್ರ ಕುಟುಂಬದಲ್ಲಿ ಸದಸ್ಯರು ಹೆಚ್ಚು ಸಮಾನರಾಗಿರುತ್ತಾರೆ ಮತ್ತು ಅಂತಸ್ತು, ಸ್ಥಾನಮಾನ ಸಂಬಂಧಗಳು ಹೆಚ್ಚು ಪ್ರಜಾಸತ್ತಾತ್ಮಕ ಆಧಾರದಲ್ಲಿರುತ್ತದೆ. ಗಂಡು ಮತ್ತು ಹೆಣ್ಣು ಮಕ್ಕಳಿಗೆ ಸಮಾನ ಪ್ರಾಶಸ್ತ್ಯ ನೀಡಲಾಗುತ್ತದೆ.

ಕುಟುಂಬದಲ್ಲಿ ಹೆತ್ತವರಿಗೆ ಮಕ್ಕಳ ಮೇಲೆ ನೇರ ನಿಯಂತ್ರಣವಿದ್ದರೂ ಎಲ್ಲಾ ಸದಸ್ಯರುಗಳಿಗೆ ಹೆಚ್ಚು ಸ್ವಾತಂತ್ರ್ಯವಿದೆ. ಕುಟುಂಬವು ಹಿಂದೆಂದಿಗಿಂತಲೂ ಹೆಚ್ಚು ಸ್ವತಂತ್ರವಾಗಿದ್ದ ಪತಿ-ಪತ್ನಿ, ಮಗಳು-ಮಗ ಹೀಗೆ ಎಲ್ಲ ಸದಸ್ಯರು ಹೆಚ್ಚು ಸ್ವತಂತ್ರರಾಗಿರುವರು. ಗಂಡು ಮಕ್ಕಳು ಮದುವೆ ಬಳಿಕ ಸ್ವತಂತ್ರವಾಗಿ ತಮ್ಮದೇ ಕುಟುಂಬವನ್ನು ಸ್ಥಾಪಿಸುವರು.

**೪. ಗೃಹವ್ಯವಸ್ಥೆ, ಶಿಶು ಕೇಂದ್ರಿತ :** ಆಧುನಿಕ ಕುಟುಂಬವು ವಾಸಿಸಲು ಪ್ರತ್ಯೇಕವಾದ ವಸತಿ ಗೃಹವೊಂದನ್ನು ಹೊಂದಿರುತ್ತದೆ. ಈ ವಸತಿಯಲ್ಲಿ ಮುಕ್ತ ಹಾಗೂ ಸ್ವತಂತ್ರವಾದ ಸಾಮಾಜಿಕ ಸಾಂಸ್ಕೃತಿಕ ವಾತಾವರಣ ಇರುತ್ತದೆ. ಪ್ರೀತಿ, ಪ್ರೇಮ, ವಾತ್ಸಲ್ಯ, ಸಹಾನುಭೂತಿ, ಸಹಕಾರ, ಭದ್ರತೆ ಮೊದಲಾದವುಗಳಿಗೆ ಸಾಮಾನ್ಯ ವಸತಿಯು ಮೂಲಾಧಾರವಾಗಿದೆ. ಇಂದಿನ ಕುಟುಂಬಗಳು ಹೆಚ್ಚು ಶಿಶುಕೇಂದ್ರಿತವಾಗಿವೆ. ಇಂತಹ ಕುಟುಂಬಗಳಲ್ಲಿ ಮಕ್ಕಳ ಆಶೆ-ಆಕಾಂಕ್ಷೆಗಳಿಗೆ ವಿಶೇಷ ಗಮನ ನೀಡಲಾಗುತ್ತದೆ. ಕುಟುಂಬ ವ್ಯವಹಾರಗಳಲ್ಲಿ ಮತ್ತು ನೀತಿ ನಿರ್ಣಯಗಳಲ್ಲಿ ಮಕ್ಕಳಿಗೆ ಪ್ರಾಶಸ್ತ್ಯ ನೀಡಲಾಗುತ್ತಿದೆ. ವ್ಯಾಸಂಗದ ವಿಷಯ ಉಡುಗೆ-ತೊಡಗೆ, ವಿವಾಹ, ಆಹಾರ ಕ್ರಮ ಇತ್ಯಾದಿಗಳ ವಿಚಾರದಲ್ಲಿ ಮಕ್ಕಳಿಗೆ ಸ್ವಾತಂತ್ರ್ಯ ನೀಡಲಾಗುತ್ತದೆ.

**೫. ಧರ್ಮದ ಪ್ರಭಾವ ಕಡಿಮೆ : ವ್ಯಕ್ತಿವಾದಿ ಸ್ವರೂಪ :** ಕುಟುಂಬವು ತನ್ನ ಧಾರ್ಮಿಕ ತಳಪಾಯವನ್ನು ಕಳಕೊಂಡಿದೆ. ಇಂತಹ ಕುಟುಂಬಗಳಲ್ಲಿ ಈಗ ಧಾರ್ಮಿಕ ಆಚರಣೆಗಳ ಕುರಿತಾದ ಶ್ರದ್ಧೆ ಕಡಿಮೆಯಾಗಿದೆ. ಹೀಗಾಗಿ ಕುಟುಂಬದ ಮೇಲೆ ಧರ್ಮದ ಹತೋಟಿಯೂ ಕಡಿಮೆಯಾಗಿದೆ. ನೈತಿಕತೆಗಿಂತ ಆರ್ಥಿಕತೆಯೇ ಕುಟುಂಬದ ಸಹಬಾಳ್ವೆಯ ಬುನಾದಿಯಾಗಿದೆ. ಈ ಕುಟುಂಬದಲ್ಲಿ ಸಂಬಂಧಗಳು ಮತ್ತು ಬಾಂಧವ್ಯ ಪರಿಧಿಯು ಚಿಕ್ಕದಾಗುತ್ತಾ ಹೋಗಿ ವ್ಯಕ್ತಿಗಳಿಗೆ ಸೀಮಿತವಾಗಿದೆ. ಸದಸ್ಯರಗಳ ಮೌಲ್ಯ ಹಾಗೂ ಬಯಕೆಗಳು ಹೆಚ್ಚು ವೈಯಕ್ತಿಕವಾಗಿವೆ. ಆದುದರಿಂದ ಈ ಕುಟುಂಬಗಳಲ್ಲಿ ಸಾಮೂಹಿಕ ಮನೋಭಾವನೆಗಳಿಗೆ ಅವಕಾಶ ಕಡಿಮೆಯಾಗಿದೆ.

### ಆಧುನೀಕರಣದ ಹೊಂದಾಣಿಕೆ

ಭಾರತದಲ್ಲಿ ಆಧುನೀಕರಣವು ಸಾಂಪ್ರದಾಯಿಕತೆಯನ್ನು ಬದಿಗಿಟ್ಟು ನಡೆದಿಲ್ಲ. ಬದಲಾಗಿ ಸಾಂಪ್ರದಾಯಿಕತೆಯ ಜೊತೆ ಜೊತೆಗೆ ಹೊಂದಾಣಿಕೆಯಿಂದ ನಡೆದ ಪ್ರಕ್ರಿಯೆಯಾಗಿದೆ. ಕಂದಾಚಾರಗಳು, ಮೂಢನಂಬಿಕೆ, ಜಾತಿಯ ಏಣಿಶ್ರೇಣಿ, ಅಸ್ಪೃಶ್ಯತೆ ಮುಂತಾದವುಗಳನ್ನು ನಿರ್ಮೂಲನೆ ಮಾಡವಲ್ಲಿ ಆಧುನಿಕತೆಯ ಪ್ರಭಾವ ತುಂಬಾ ಇದೆ. ಆದರೆ ಇನ್ನು ಕೆಲವು ಆರಾಧನೆಗೆ ಸಂಬಂಧಿಸಿದ

ಸಾಂಪ್ರದಾಯಿಕ ಆಚರಣೆಗಳು, ನಂಬಿಕೆಗಳು, ಭಯಗಳು ಇರುತ್ತಲೇ ನಮ್ಮ ಬದುಕನ್ನು ಆಧುನಿಕತೆಗೆ ಆವರಿಸಿದೆ. ಅಂದರೆ ಬದುಕಿನ ಆಯ್ದ ವಲಯಗಳಲ್ಲಿಯಷ್ಟೇ ಆಧುನೀಕರಣವನ್ನು ಸಾಧಿಸುವ ಹೊಂದಾಣಿಕೆ ನಡೆದಿದೆ. ಮುಖ್ಯವಾಗಿ ಜಾತಿ, ಧರ್ಮದ ಆಚರಣೆಯನ್ನು ಸಾಮಾಜಿಕ ನೆಲೆಯಿಂದ ತೀರಾ ಖಾಸಗಿ ಬದುಕಿಗೆ ಹಿಂದೆ ಸರಿಸುವಲ್ಲಿ ಆಧುನೀಕರಣದ ಪಾತ್ರ ಮಹತ್ವದ್ದಾಗಿದೆ. ಸಾಮಾಜಿಕ ವ್ಯವಸ್ಥೆಯ ಪ್ರಮುಖ ಅಂಗ ಕುಟುಂಬ ಅದರ ಕೇಂದ್ರಬಿಂದು. ಗೃಹಿಣಿ, ಗೃಹಿಣಿಯೆಂದರೆ ಮನೆ ಯೊಡತಿ ಮನೆವಾರ್ತೆ ನಡೆಸುವ ವಿವಾಹಿತೆ ಎಂದರ್ಥ. ಜಾಗದ ರೀತಿ-ನೀತಿಗಳು ಬದಲಾಗಿ ಜನ ಜೀವನವೂ ಬದಲಾಯಿಸಿದಾಗ ಮನೆಯೊಡತಿ ಮನೆವಾರ್ತೆಗಳು ಬದಲಾಗುವುದು ಸಹಜ. ಕಳೆದೊಂದು ಶತಮಾನದಿಂದ ಸಾಮಾಜಿಕ, ಆರ್ಥಿಕ, ರಾಜಕೀಯ, ಔದ್ಯೋಗಿಕ ಕ್ರಾಂತಿಯಿಂದಾಗಿ ಜೀವನದ ಎಲ್ಲಾ ರಂಗಗಳಲ್ಲಿ ಆದ ಬದಲಾವಣೆಯ ಬಿರುಗಾಳಿ ಬೀಸಿದೆ. ಪ್ರಪಂಚದ ಸಂಕೀರ್ಣತೆ ಹೆಚ್ಚುತ್ತಿದ್ದು. ಸ್ತ್ರೀ ವಿದ್ಯಾಭ್ಯಾಸ ಹಾಗೂ ಕುಟುಂಬ ಯೋಜನೆಗಳ ಜನಪ್ರಿಯತೆಯಿಂದಾಗಿ ತಾಯ್ತನದ ಹೊರೆ ಕಡಿಮೆಯಾಗುತ್ತಿದೆ. ಮಹಿಳೆಯರು ಪುರುಷರ ಸರಿಸಮಾನರಾಗಿ ಎಲ್ಲಾ ಕ್ಷೇತ್ರಗಳಲ್ಲೂ ದುಡಿಯ ತೊಡಗಿದ್ದಾರೆ. ಅಡಿಗೆ-ಮುಸರೆ, ಹಾಡು-ಹಸೆ ಎಂದು ಹೆಣ್ಣು ತನ್ನ ಸುತ್ತ ನಿರ್ಮಿಸಿಕೊಂಡಿದ್ದ ಕೋಟೆಗೆ ಪ್ರಪಂಚ ಲಗ್ಗೆ ಹಾಕುತ್ತಿದೆ. ಸಂಪರ್ಕ ಮಾಧ್ಯಮಗಳ ಆಧುನಿಕತೆಯಿಂದಾಗಿ ವಿಶ್ವದ ಆಗು-ಹೋಗುಗಳು, ರೋಗ, ಬರಗಾಲ, ಯುದ್ಧ ದುರಂತಗಳ ಸುದ್ದಿ ಮನೆಯಂಗಳಕ್ಕೆ ರಾಶಿರಾಶಿಯಾಗಿ ಸುರಿಯುತ್ತಿದೆ. ಹೊರಗೆ ದುಡಿಯದಿದ್ದರೂ ಇಂದಿನ ಗೃಹಿಣಿ ಪ್ರಪಂಚವನ್ನು ಹೊಸ್ತಿಲಿನೊಳಗೆ ನಿಲ್ಲಿಸಲು ಸಾಧ್ಯವಾಗುತ್ತಿಲ್ಲ. ಅವಳು ಹೊರ ಜಗತ್ತಿನೊಡನೆ ವ್ಯವಹರಿಸುವುದಲ್ಲದೆ, ಕ್ಲಿಷ್ಟವಾದ ಆಧುನಿಕ ಬದುಕಿನೊಡನೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿದೆ.

ದುಡಿಯುವ ಮಹಿಳೆಯರು, ಗೃಹಿಣಿಯರು ಶಾಂತಿ ಸಮಾಧಾನಗಳಿಂದ ದಿನದೂಡುತ್ತಾರೆಂದು ಕೆಲವರು ನಂಬಿದ್ದಾರೆ. ಗೃಹಿಣಿಗೆ ಮಾನಸಿಕ ಒತ್ತಡಗಳು ಕಡಿಮೆ, ಆತಂಕಗಳು ಇಲ್ಲ ಎಂಬ ಕಲ್ಪನೆಯೂ ಇನ್ನು ಕೆಲವರಿಗಿದೆ. ಆದರೆ ಮನೋವೈಜ್ಞಾನಿಕ ಅಧ್ಯಯನಗಳು ಹೇಳುವ ಕಥೆಯೇ ಬೇರೆಯಾಗಿದೆ. ಮನೆಯಲ್ಲಿರುವ ಗೃಹಿಣಿಯರಲ್ಲಿ, ಬೇಸರ, ನಿರುತ್ಸಾಹ, ಅತಿ ಆಯಾಸ, ಕಾರಣ ವಿಲ್ಲದ ಆತಂಕ, ನಿರಾಸಕ್ತಿ, ಚಿಂತೆ, ಖಿನ್ನತೆಗಳು ಅತಿಯಾಗಿ ಕಂಡುಬಂದು ವೈದ್ಯಕೀಯ ಮನೋ ವಿಜ್ಞಾನಿಗಳು ಇದನ್ನು "ಗೃಹಿಣಿಯರ ಖಾಯಿಲೆ" ಎಂದೇ ಗುರುತಿಸುತ್ತಾರೆ. (House wires' syrdrame / House wires' blight) ಮಾನಸಿಕ ಅನಾರೋಗ್ಯ ಮಹಿಳೆಯರಲ್ಲಿ ಅದರಲ್ಲೂ ಗೃಹಿಣಿಯರಲ್ಲಿ ಹೆಚ್ಚಾಗಿ ಕಂಡುಬಂದಿದೆ. ಹೊರ ಪ್ರಪಂಚದಲ್ಲಿ ಜವಾಬ್ದಾರಿಯುತ ಕಾರ್ಯ

ನಿರ್ವಹಿಸುವ ಮಹಿಳೆ ಗೃಹಿಣಿಯಾಗಿ ಬೇರೆ ರೀತಿಯ ಸಮಸ್ಯೆಗಳನ್ನೆದುರಿಸುತ್ತಾಳೆ. ವಿವಾಹ ಅದರಲ್ಲೂ ತಾಯ್ತನ ಇವಳ ಶಕ್ತಿ, ಸಾಮರ್ಥ್ಯ, ಜಾಣ್ಮೆ ಹಾಗೂ ಸಮತೋಲನಗಳಿಗೆ ಹೊಸ ಸವಾಲುಗಳನ್ನೆ ಒಯ್ಯುತ್ತವೆ. ಪಿತೃಪ್ರಧಾನ ಮೌಲ್ಯಗಳು ಜೀವಂತವಾಗಿರುವ ಭಾರತೀಯ ಸಮಾಜದಲ್ಲಿ ಮಹಿಳೆಯ ಜೀವನವು ಪುರುಷನ ಜೀವನದಿಂದ ಪ್ರತ್ಯೇಕವಾದುದಲ್ಲ: ಕೌಟುಂಬಿಕ ರಕ್ಷಣೆ ಗಂಡಿನ ಬೆಂಬಲವನ್ನು ಬಹುವಾಗಿ ನೆಚ್ಚಿಕೊಂಡಿರುವ ಮಹಿಳೆಯು ಪರಾವಲಂಬಿತ ಸ್ಥಿತಿಯಲ್ಲಿ ಸ್ತ್ರೀ ಶೋಷಣೆಗೆ ಸಂಪೂರ್ಣ ಕಡಿವಾಣ ಹಾಕುವುದು ಅಸಾಧ್ಯದ ಸಂಗತಿಯಾಗಿದೆ. ತಾಯ್ತನ, ಮಕ್ಕಳ ಪಾಲನೆ-ಪೋಷಣೆಗಳಂತಹ ಶ್ರಮದಾಯಕ ಕೆಲಸಗಳೊಂದಿಗೆ ಉದ್ಯೋಗಕ್ಕಾಗಿ ಹೊರಗಡೆಯಿಡಲು ಮಹಿಳೆಯರಿಗೆ ಕುಟುಂಬದ ನೆರವು ರಕ್ಷಣೆ ತೀರಾ ಅಗತ್ಯವಾದುದು. ಕಣ್ಮರೆಯಾಗುತ್ತಲಿರುವ ಅವಿಭಕ್ತ ಕುಟುಂಬಗಳು ಮತ್ತು ವಿಭಕ್ತ ಕುಟುಂಬದ ಒಂಟಿಗಾಲಿನ ದುಡಿತದಿಂದ ಉದ್ಯೋಗಸ್ಥ ಮಹಿಳೆ ಬದುಕು ಗಾಣದೆತ್ತಿನಂತಾ ಗುತ್ತಿರುವುದು ಕಳವಳಕಾರಿಯಾಗಿದೆ. ಇಂಥ ಸಂದರ್ಭದಲ್ಲಿ ಪುರುಷರ ಸಹಕಾರ ಕೌಟುಂಬಿಕ ಹೊಣೆಗಾರಿಕೆಗಳಲ್ಲಿ ಸಹಭಾಗಿತ್ವ ಅಪೇಕ್ಷಣೀಯವಾಗಿದೆ. ಹೆಣ್ಣಿನ ಕೌಟುಂಬಿಕ ಸಂಬಂಧಗಳ ಸುತ್ತ ಹೆಣೆದುಕೊಂಡಿರುವ ನಂಬಿಕೆಗಳು ಗಂಡ-ಹೆಂಡತಿ, ಅತ್ತೆ-ಸೊಸೆಯ ಬಾಂಧವ್ಯದ ಸ್ವರೂಪವನ್ನು ತಿಳಿಸುತ್ತವೆ. ಕೌಟುಂಬಿಕ ವ್ಯವಸ್ಥೆಯಲ್ಲಿ ಸೊಸೆಯ ಸ್ಥಾನಮಾನಗಳನ್ನು ಗಂಡ-ಹೆಂಡತಿಯ ಅಸಮಾನ ನೆಲೆಯ ಸಂಬಂಧದ ಸ್ವರೂಪವನ್ನು ಇಂಥ ನಂಬಿಕೆಗಳು ಪೋಷಿಸಿವೆ. ಗಂಡನನ್ನು ದೇವರೆಂದು ನಂಬಿಸುವ ಸಾಂಸ್ಕೃತಿಕ ಪರಿಸರದಲ್ಲಿ ಹೆಂಡತಿಗೆ ಪ್ರತ್ಯೇಕ ಸ್ವತಂತ್ರ ಅಸ್ತಿತ್ವದ ಕಲ್ಪನೆಯನ್ನು ಅಸಾಧ್ಯವಾಗಿಸಲಾಗಿದೆ. ತನ್ನ ಸುಖ-ದುಃಖ ವ್ಯಕ್ತಿತ್ವ ಶ್ರೇಯಸ್ಸೆಲ್ಲವನ್ನು ಗಂಡನ ಬದುಕಿನೊಂದಿಗೆ ಸಮೀಕರಿಸಿಕೊಂಡು, ಸತಿತ್ವ ಸಾಧನೆ ಮಾಡಲು ಒತ್ತಾಯಿಸುವ ನಂಬಿಕೆಗಳು ಆಕೆಯ ಅಧೀನ ನೆಲೆಯ ಆದರ್ಶನವನ್ನು ಎತ್ತಿ ಹಿಡಿದಿವೆ. ಗಂಡಿನ ಊಟದ ನಂತರ ಹೆಣ್ಣು ಮಕ್ಕಳು ಊಟ ಮಾಡಬೇಕು. ಗಂಡನ ಎಂಜಲು ತಟ್ಟೆಯಲ್ಲಿ ಹೆಂಡತಿ ಊಟ ಮಾಡಬೇಕು. ಗಂಡನನ್ನು ಏಕವಚನದಲ್ಲಿ ಹೆಸರು ಹಿಡಿದು ಸಂಬೋಧಿಸಿದರೆ ಗಂಡನ ಆಯುಷ್ಯ ಕ್ಷೀಣಿಸುತ್ತದೆ. ವ್ರತ, ಉಪವಾಸ, ಪೂಜೆ ಮತ್ತು ಪಾತಿವ್ರತ್ಯಗಳಿಂದ ಗಂಡನಿಗೆ ದೀರ್ಘಾಯುಷ್ಯ ಪ್ರಾಪ್ತಿ, ಮುತ್ತೈದೆ ಸಾವಿನಿಂದ ಸ್ವರ್ಗ ಪ್ರಾಪ್ತಿ. ಸಹಗಮನದಿಂದ ಗಂಡನಿಗೆ ಸ್ವರ್ಗ ಪ್ರಾಪ್ತಿ. ಹೀಗೆ ಇತ್ಯಾದಿ ನಂಬಿಕೆಗಳು ವಿಧಿಸುವ ನೀತಿ-ನಿಯಮಗಳು ಸ್ತ್ರೀಯರ ಬದುಕನ್ನು ಕಷ್ಟಕರವಾಗಿಸಿವೆ. ಅನುಲ್ಲಂಘನೀಯವಾಗಿದೆ. ಮದುವೆ ಮೊದಲ ವರ್ಷದ ಆಷಾಡದಲ್ಲಿ ಅತ್ತೆ-ಸೊಸೆ ಕೂಡಿ ಇರಬಾರದೆನ್ನುವ ನಂಬಿಕೆಯು ಇಂದಿಗೂ ಉತ್ತರ ಕರ್ನಾಟಕದಲ್ಲಿ ಪ್ರಬಲವಾಗಿದೆ. ಇಂದಿಗೂ ನಮ್ಮ ಸಮಾಜದ ಹೆಚ್ಚಿನ

ಹೆಂಗಸರು ತಮ್ಮ ಮನೆಯ ಗಂಡಸರು ಅಡಿಗೆ ಕೋಣೆಗೆ ಪ್ರವೇಶಿಸುವುದನ್ನು ಬಯಸುವುದಿಲ್ಲ. ಹೊರಗಡೆ ದುಡಿಯುವ ಹೆಣ್ಣುಗಳಾದರೂ ಈಗೀಗ ಮನೆ ಕೆಲಸಗಳನ್ನು ಹಂಚಿಕೊಂಡು ಹೊಂದಾಣಿಕೆ ಮಾಡಿಕೊಳ್ಳುವುದು ಅನಿವಾರ್ಯವಾಗಿದೆ. ಈ ಹೆಣ್ಣುಗಳು ಕೂಡ ಕೆಲವು ಕೆಲಸಗಳನ್ನು ತಮ್ಮ ಕರ್ತವ್ಯವೆಂದೇ ಇರಿಸಿ ಚಿಲ್ಲರೆ ಕೆಲಸಗಳನ್ನು ಗಂಡಸರ ವಶಕ್ಕೆ ಒಪ್ಪಿಸುವುದು ಇದೆ. ಇದು ಅವರವರ ಸಾಮರಸ್ಯಕ್ಕೆ ಹೊಂದಿಕೊಂಡ ವಿಚಾರ. ಯಾವುದೇ ಘೋಷಣೆಗಳು, ಬೇಡಿಕೆಗಳು, ಸ್ತ್ರೀಯರಿಂದ ಬಂದರೂ ಮೇಲ್ನೋಟಕ್ಕೆ ಅಸಂಬದ್ಧವೆಂದು ಪುರುಷರಿಗೆ ಕಾಣುವುದು ಸಹಜ. ಆದರೆ ಎಲ್ಲರೂ ಒಪ್ಪುವ ಅಪ್ಪಟ ಸತ್ಯವೊಂದಿದೆ. ಸಮಾಜದಲ್ಲಿ ಸ್ತ್ರೀ-ಪುರುಷರ ಅಸಮಾನತೆಗೆ ಪುರುಷರು ಕಾರಣರಾದಂತೆ ಸ್ತ್ರೀಯರ ಉದ್ಧಾರಕ್ಕೂ ಅವರೇ ಕಾರಣರು. ಆಧುನಿಕ ಯುಗದಲ್ಲಿಯ ದುಡಿಮೆ ಮಹಿಳೆಯನ್ನು ತನ್ನ ಸಮಾನವೆಂದು ತಿಳಿಯಬೇಕಾದುದು ಧರ್ಮ. ಅದೇ ರೀತಿ ಮಹಿಳೆಯೂ ಕೂಡಾ ತಾನೂ ಮಹಿಳೆಯೆಂಬ ಕಾರಣಕ್ಕಾಗಿಯೇ ಪುರುಷಗಿಲ್ಲದ ಕೆಲವು ರಿಯಾಯಿತಿಗಳನ್ನು ಯಾಚಿಸುವುದು, ಅವರ ಅನುಕಂಪಕ್ಕಾಗಿ ಹಾತೊರೆಯುವುದು. ಒನಪು ವಯ್ಯಾರಗಳನ್ನೇ ಬಂಡವಾಳ ವಾಗಿಸಿಕೊಂಡು ಕರ್ತವ್ಯಲೋಪ ಮಾಡುವುದು ಇವೆಲ್ಲಾ ಮಹಿಳೆಯರ ಆತ್ಮಾಭಿಮಾನ, ಸ್ವಂತಿಕೆಗಳನ್ನೇ ನಾಶ ಮಾಡುವಂತಹ ಸ್ಥಿತಿಗೆ ಒಯ್ಯುತ್ತದೆ.

ಈ ಎಲ್ಲ ತೊಡಕುಗಳ ನಡುವೆಯೂ ಸಮಾಜ ಚಲನಶೀಲವಾಗಿದೆ. ಇಂತಹ ಅಸಮಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆ ದುರ್ಬಳಾಗುವುದು, 'ಹಾಗೆ ಭಾವಿಸುವುದು ಮತ್ತು ಇತಿಹಾಸದಿಂದ ಮರೆಯಾಗುವುದು ಸಹಜವಾದುವೇ. ಆದರೆ ಆಧುನಿಕ ಅಧ್ಯಯನಗಳೂ ಇದನ್ನು ಸೂಕ್ಷ್ಮವಾಗಿ ಗಮನಿಸಿದೆ ಮೇಲುಸ್ಥರದ ಏಕಗ್ರಹಿಕೆಯ ವಿಶ್ಲೇಷಣೆ ನೀಡುವುದು ಲಿಂಗ ಅಸಮಾನತೆ ಬೇರುಬಿಟ್ಟಿರುವ ನೆಲೆಗಳನ್ನು ಸೂಚಿಸುತ್ತದೆ. ಎಲ್ಲ ಕ್ಷೇತ್ರಗಳಲ್ಲಿಯೂ ಮಹಿಳೆಯರು ಮುನ್ನುಗ್ಗಿ ಸಮಾನತೆಯ ಹಕ್ಕನ್ನು ಪಡೆಯುತ್ತಿದ್ದಾರೆ. ಸಾಮಾಜಿಕವಾಗಿ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಇಂದು ಚಟುವಟಿಕೆಗಳ ಪರಿಣಾಮವಾಗಿ ಕುಟುಂಬದ ಸ್ತ್ರೀಗೆ ಇರುವ ಹಕ್ಕನ್ನು ಉತ್ತಮಪಡಿಸಿ, ಕುಟುಂಬದ ಆರ್ಥಿಕತೆಯ ಉತ್ತಮಿಕೆಗೆ ಸ್ತ್ರೀಯು ದುಡಿದು, ಕುಟುಂಬದ ಆಸ್ತಿಗೂ ಹಕ್ಕನ್ನು ಪಡೆದು, ಪಿತೃಪ್ರಧಾನ್ಯವುಳ್ಳ ಕುಟುಂಬದ ರೀತಿ-ನೀತಿಗಳನ್ನು ಸಡಿಲಗೊಳಿಸಿದ್ದಾಳೆ. ಮಧ್ಯಮ ವರ್ಗದವರ ಕುಟುಂಬಗಳಲ್ಲೂ ಈ ತೆರನಾದ ಮಾರ್ಪಾಡು ದಿನೇ ದಿನೇ ಹೆಚ್ಚಾಗಿ ಕಂಡುಬರುತ್ತದೆ. ಸಮಾಜದ ಅನುಕೂಲತೆಗೂ ಭದ್ರತೆಗೂ ಆಧಾರವಾದ ತನ್ನ ಪರಾಕ್ರಮವನ್ನು ಪುರುಷತ್ವವನ್ನು ಹೆಚ್ಚಿಸಿಕೊಳ್ಳಲು ಮಾತೃಪ್ರಧಾನ ಕುಟುಂಬವನ್ನು ಹಿಂದಕ್ಕೆ ತಳ್ಳಿ ಪಿತೃಪ್ರಧಾನ್ಯವುಳ್ಳ ಕುಟುಂಬಕ್ಕೆ

ಮಾನವ ಉತ್ತೇಜನ ಕೊಟ್ಟುಕೊಂಡು ಬಂದಿದ್ದಾನಾದರೂ ಆಧುನಿಕ ಸಮಾಜದಲ್ಲಿ ಪಿತೃಪ್ರಧಾನ್ಯವುಳ್ಳ ಕುಟುಂಬದ ರೀತಿ ನೀತಿಗಳೂ ಸರಿಯಾಗಿ ನಿಲ್ಲದೆ ಮಾರ್ಪಾಡಾಗುತ್ತಿರುವುದನ್ನು ನಾವು ಕಾಣಬಹುದು. ಅಂತೂ ಡಾರ್ವಿನ್ ಸ್ಪಷ್ಟಪಡಿಸಿರುವಂತೆ ಸ್ತ್ರೀ ವರ್ಗ ಅಬಲವೆಂದು ಅದು ಕಷ್ಟಕಾರ್ಯಗಳನ್ನು ನಿರ್ವಹಿಸಲಾರದೆಂದು ಆದರಿಂದ ಜ್ಞಾನಶಾಖೆಗಳಲ್ಲಿ ಹೊಸ ಪ್ರಶ್ನೆಗಳು ಏಳುತ್ತಿವೆ. ಸ್ತ್ರೀವಾದದಂತಹ ಚಿಂತನೆಗಳು ಪಿತೃಪ್ರಭುತ್ವ ಚಿಂತನಾಕ್ರಮಗಳನ್ನು ಬಯಲಿಗೆಳೆಯುತ್ತಿವೆ. ಪರಿಣಾಮವಾಗಿ ಡಾರ್ವಿನ್, ಪ್ರಾಯ್ಡ್‌ನಂತಹ ಮಹತ್ವದ ಸುಪ್ರಸಿದ್ಧ ಚಿಂತಕರೂ ಕಟಕಟೆಯಲ್ಲಿ ನಿಲ್ಲಬೇಕಾಗಿದೆ.

ಇತ್ತೀಚೆಗೆ ತೀರಾ ಭಿನ್ನವಾದ ಇನ್ನೊಂದು ವರ್ಗ ತಲೆ ಎತ್ತತೊಡಗಿದೆ. ಉದ್ಯೋಗಸ್ಥ ಹೆಂಡತಿಯೊಡನೆ ಹೊಂದಾಣಿಕೆ ಮಾಡಿಕೊಂಡು ಹೊಸ ಬಗೆಯ ತಿಳುವಳಿಕೆಗೆ ಒಳಗಾದ ಜನರು ಇವರಾಗಿದ್ದಾರೆ. ಇವರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹೆಂಡತಿಯನ್ನು 'ಸಹಜೀವಿ' ಎಂಬ ದೃಷ್ಠಿಯಿಂದ ನೋಡುತ್ತಾರೆ. ಅವರ ದೃಷ್ಟಿಯಲ್ಲಿ ಹೆಂಡತಿ 'ಸಹಜೀವಿ'ಯೂ ಆಗಿರುತ್ತಾಳೆ. ಇಂತಹ ತಿಳುವಳಿಕೆಯುಳ್ಳ ಪತಿಯು ತಮ್ಮಿಬ್ಬರ ನೌಕರಿಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಮಹತ್ವದ ನಿರ್ಣಯ ಕೈಕೊಳ್ಳುವಾಗ ಹೆಂಡತಿಗೆ ಸಮಪಾಲು ನೀಡುತ್ತಾನೆ. ಹೀಗೆ ಇಡೀ ಕುಟುಂಬವು ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಉನ್ನತಮಟ್ಟದ ಹಾಗೂ ಸೌಹಾರ್ದತೆಯಿಂದ ಕೂಡಿದ ಜೀವನವನ್ನು ನಡೆಸಲು ಸಹಕಾರಿಯಾಗುತ್ತದೆ. ಆದರೆ ಇಂತಹವು ಬೆರಳೆಣಿಕೆಯಷ್ಟಿವೆ ಹಾಗೂ ಇಂತಹ ಕುಟುಂಬಗಳು ಲಿಂಗ ಪೂರ್ವಾಗ್ರಹದಿಂದ ನಿಜಕ್ಕೂ ಹೊರತಾದುದೇ ಎಂಬುದರ ಸೂಕ್ಷ್ಮ ಅಧ್ಯಯನ ನಡೆಯಬೇಕಿದೆ.

## ಅಧ್ಯಯನದ ಉದ್ದೇಶ

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬ ಪುರುಷನಿಗಿಂತ ಮಹಿಳೆಗೆ ಹೆಚ್ಚು ಮುಖ್ಯ ವಾಗುತ್ತದೆ. ಮಹಿಳೆಗೆ ಸಂಬಂಧಿಸಿದ ಯಾವುದೇ ಚರ್ಚೆ ಕುಟುಂಬವನ್ನು ಹೊರತುಪಡಿಸಿ ನಡೆಸುವುದು ಅಸಾಧ್ಯ. ಕಾರಣ ಅವಳ ಎಲ್ಲಾ ಚಟುವಟಿಕೆಗಳು ಕುಟುಂಬದ ಪರಧಿಯಲ್ಲೇ ಹೆಚ್ಚಾಗಿ ನಡೆಯುತ್ತವೆ. ಅವಳ ಬದುಕು ಕುಟುಂಬದ ಆಗುಹೋಗುಗಳೊಂದಿಗೆ ಬೆರೆತು ಹೋಗಿರುತ್ತದೆ. ಅದಿಲ್ಲದೇ ಅವಳ ಬದುಕಿಲ್ಲ. ಆ ಕಾರಣವಾಗಿಯೇ ಮಹಿಳೆಯನ್ನು ಕುರಿತು ಅಧ್ಯಯನದಲ್ಲಿ ಕುಟುಂಬ ಅಧ್ಯಯನ ಮುಂಚೂಣಿಯದಾಗುತ್ತದೆ ಹಾಗೂ ಅನಿವಾರ್ಯವಾಗುತ್ತದೆ.

ಆಧುನಿಕ ಸಂದರ್ಭದಲ್ಲಿ ಭಾರತೀಯ ಕುಟುಂಬವ್ಯವಸ್ಥೆ ಹಲವಾರು ಬದಲಾವಣೆಗೆ ಒಳಗಾಗಿದೆ ಎಂಬುದು ಸರ್ವವಿಧಿತ. ಆದರೆ ಯಾವ ರೀತಿಯ ಬದಲಾವಣೆಯಾಗಿದೆ ಎಂಬುದು ಭಿನ್ನ

ನಿಲುವುಗಳಲ್ಲಿದೆ. ಕೆಲವು ಅಧ್ಯಯನಗಳು ಸಾಂಪ್ರದಾಯಿಕತೆಯಿಂದ ಆಧುನಿಕತೆಯತ್ತ ಚಲನಶೀಲತೆಯನ್ನು ಗಮನದಲ್ಲಿಟ್ಟು ಕೊಂಡು ಮಹಿಳೆ ಬಿಡುಗಡೆಯ ಹಾದಿಯಲ್ಲಿದ್ದಾಳೆ ಎಂದು ವಿವರಿಸುತ್ತವೆ. ಶಿಕ್ಷಣ, ಉದ್ಯೋಗ, ನಗರಗಳ ವಾಸ ವಿಭಕ್ತ ಕುಟುಂಬ ವ್ಯವಸ್ಥೆಗಳು ಈ ಹಾದಿಯಲ್ಲಿ ತಮ್ಮದೇ ಆದ ಕೊಡುಗೆ ನೀಡಿವೆ ಎನ್ನುತ್ತೇವೆ. ಆದರೆ ಸ್ತ್ರೀವಾದಿ ಅಧ್ಯಯನಗಳು ಈ ಚಲನಶೀಲತೆಯ ವಾಚಾರವನ್ನು ಸ್ವೀಕರಿಸುತ್ತಲೆ ಅದು ಬಿಡುಗಡೆಯ ಹಾದಿಯೆ? ಅಥವಾ ಬದಲಾದ ಸಂಕೋಲೆಗಳ ಸೆಲೆಯೆ? ಎಂದು ಅನುಮಾನಿಸುತ್ತವೆ. ಶಿಕ್ಷಣ ಹಾಗೂ ಲಿಂಗ ಸಮಾನತೆಯ ವಿಚಾರಧಾರೆಗಳು ಪರಸ್ಪರ ಸಂಬಂಧಿಸಿವೆಯೆ? ಮಹಿಳಾ ಉದ್ಯೋಗದಿಂದ ಆರ್ಥಿಕ ಸ್ವಾತಂತ್ರ್ಯವೇ ಅಥವಾ ಇಬ್ಬಗೆಯ ದುಡಿತವೆ? ವಿಭಕ್ತ ಕುಟುಂಬಗಳು ಕೌಟುಂಬಿಕ ಹಿಂಸೆಯಿಂದ ಹೊರತಾಗಿವೆಯೆ? ಹಾಗೂ ಇವೆಲ್ಲವೂ ಅಂತಿಮವಾಗಿ ಸ್ತ್ರೀತ್ವದ ಗುರುತಿಗೆ ಪೂರಕವಾಗಿವೆಯೆ? ಇತ್ಯಾದಿ ಪ್ರಶ್ನೆಗಳ ಸರಮಾಲೆಯನ್ನು ಹೆಣೆದಿದೆ. ಈ ಎಲ್ಲ ಪ್ರಶ್ನೆಗಳ ಹಾಗೂ ಇದುವರೆಗಿನ ಅಧ್ಯಯನಗಳ ಈ ಧೃವೀಕರಣಗಳ ಹಿನ್ನಲೆಯಲ್ಲಿ ಆಧುನಿಕ ಕುಟುಂಬಗಳು ಹೇಗೆ ಪಿತೃಪ್ರಧಾನತೆಯ ಒಳಗೆ ಕೆಲಸ ಮಾಡುತ್ತವೆ ಎನ್ನುವುದನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಈ ಮಹಾಪ್ರಬಂಧವು ಕೆಲವು ಪ್ರಮುಖ ಉದ್ದೇಶಗಳಿಗನುಸಾರವಾಗಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅದಕ್ಕನುಗುಣವಾಗಿ ಅಧ್ಯಾಯಗಳನ್ನಾಗಿ ವಿಂಗಡಿಸಿ ವಿಷಯಗಳನ್ನು ವಿಶದಪಡಿಸಲಾಗಿದೆ. ಅಧ್ಯಯನದ ತಾತ್ವಿಕ ಚೌಕಟ್ಟನ್ನು ವಿವರಿಸುವ ಪ್ರಸ್ತಾವನೆ, ತವರು ಸಂಪನ್ಮೂಲ ಹಂಚಿಕೆ, ಶ್ರಮವಿಭಜನೆ ಮತ್ತು ಚಿಂತನಾ ಸ್ವಾತಂತ್ರ್ಯಕ್ಕೆ ಸಂಬಂಧಿಸಿ ಮುಖ್ಯ ಸಂಗತಿಗಳನ್ನು ಒರೆಹಚ್ಚುವ ಕ್ಷೇತ್ರಕಾರ್ಯಧಾರಿತ ಅಧ್ಯಾಯಗಳು ಹಾಗೂ ಸಮಾರೋಪವನ್ನು ಒಳಗೊಂಡಿರುವ ಈ ಪ್ರಬಂಧವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದ್ದಾಗಿದೆ.

೧. ಆಧುನಿಕ ಕುಟುಂಬದಲ್ಲಿ ಸ್ತ್ರೀ-ಪುರುಷರ ನಡುವಿನ ಶ್ರಮದ ಹಂಚಿಕೆಯ ಸ್ವರೂಪ ಯಾವ ರೀತಿಯಾಗಿದೆ ಎಂದು ತಿಳಿದುಕೊಳ್ಳುವುದು.

೨. ಸಂಪನ್ಮೂಲಗಳ ಹಂಚಿಕೆಯ ಸ್ವರೂಪದಲ್ಲಿ ಮಹಿಳೆಯ ಪಾತ್ರವನ್ನು ವಿಶ್ಲೇಷಿಸುವುದು.

೩. ತವರು ಮತ್ತು ಮಹಿಳೆಯ ಸಂಬಂಧ ಅರಿಯುವುದು.

೪. ಆಧುನಿಕ ಕುಟುಂಬಗಳ ಸ್ತ್ರೀ ಹೊಂದಿರುವ ಚಿಂತನಾಕ್ರಮವನ್ನು ಅರಿಯುವುದು.

ಮೇಲಿನ ನಾಲ್ಕು ವಿಷಯಗಳ ವಿಶ್ಲೇಷಣೆಯು ಆಧಾರದೊಂದಿಗೆ ಆಧುನಿಕ ಕುಟುಂಬಗಳಲ್ಲಿನ ಸ್ತ್ರೀಯರ ಸ್ಥಾನಮಾನ, ಅವರ ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯತೆ ಅಗತ್ಯತೆ ರಾಜಕೀಯ ಮೀಸಲಾತಿ,

ಆರ್ಥಿಕ ಸ್ವಾವಲಂಬನೆಯ ಮೂಲಕ ಸಮಾಜದಲ್ಲಿ ಮಹಿಳೆ ಸಬಲಳಾಗಿ, ಸಮಾನತೆಯ ಸದೃಢವಾದ ಸಮಾಜವನ್ನು ನೆಲೆಗೊಳಿಸುವ ಸಾಧ್ಯತೆಗಳನ್ನು ಕುರಿತು ಚರ್ಚಿಸಲಾಗುವುದು. ಮಹಿಳೆಗೆ ಗಂಡನ ಮನೆಯೇ ಭೂಷಣ ಮುಂತಾದ ಪರಿಕಲ್ಪನೆಗಳು ಕುಟುಂಬ ಎನ್ನುವ ಸಂಸ್ಥೆಯ ಒಳಗೆ ಅಡಕವಾಗಿ ರುವುದು ಪುರುಷ ಪ್ರಾಧಾನ್ಯತೆಗೆ ಸಾಕ್ಷಿಯಾಗಿದೆ. ಉದ್ಯೋಗಸ್ಥ ಮಹಿಳೆಯರು ಈ ಕುಟುಂಬ ಎನ್ನುವ ಸಂಸ್ಥೆಯ ಅನಿವಾರ್ಯತೆ, ವರದಕ್ಷಿಣೆ, ಕೌಟುಂಬಿಕ ಹಿಂಸೆ, ಪರಿತ್ಯಕ್ತತೆ, ವೈಧವ್ಯ, ಹೆಣ್ಣು ಭ್ರೂಣಹತ್ಯೆ ಈ ಸಮಸ್ಯೆಗಳಿಂದ ಇನ್ನೂ ಸಂಪೂರ್ಣವಾಗಿ ಏಕೆ ಹೊರಗೆ ಬರುತ್ತಿಲ್ಲವೆಂಬ ಕಾರಣಗಳನ್ನು ಪರಿಶೀಲಿಸುವುದು ಈ ಅಧ್ಯಯನ ಉದ್ದೇಶಗಳಲ್ಲಿ ಒಂದಾಗಿದೆ. ಕುಟುಂಬ ಸಂಸ್ಥೆಯಿಂದ ಮಹಿಳೆಗೆ ಭದ್ರತೆಯನ್ನು ಪಡೆದುಕೊಳ್ಳುವುದು ಅತ್ಯವಶ್ಯಕವಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಕೌಟುಂಬಿಕವಾಗಿ ಮಹಿಳೆಗೆ ದೊರೆಯುವ ಅವಕಾಶಗಳಿಗೂ ಅವಳ ವ್ಯಕ್ತಿತ್ವ ವಿಕಾಸನಕ್ಕೂ ಇರುವ ಸಂಬಂಧವನ್ನು ಅರಿಯುವುದು ಇದರ ಉದ್ದೇಶವಾಗಿದೆ.

### ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಕುಟುಂಬ ಕೇಂದ್ರಿತ ಅಧ್ಯಯನವಾಗಿದ್ದು 'ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ' ಎಂಬ ವಿಚಾರವನ್ನು ಸಮಸ್ಯೀಕರಿಸಿಕೊಂಡು ಅದರ ಸುತ್ತ ವಿಶ್ಲೇಷಣೆ ಯನ್ನು ನಡೆಸುವುದಾಗಿದೆ. ಈ ಅಧ್ಯಯನಕ್ಕೆ ನಿರ್ದಿಷ್ಟ ಕ್ಷೇತ್ರ ಒಂದನ್ನು ಗುರುತಿಸಿಕೊಂಡು ಅಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಳ್ಳುವ ವೈಧಾನಿಕತೆ ಅಳವಡಿಸಲಾಗಿದೆ. ಇದರಿಂದ ಪ್ರಸ್ತುತ ಸಂದರ್ಭದಲ್ಲಿ ಅದರಲ್ಲೂ ನಗರ ಪ್ರದೇಶದಲ್ಲಿ ವಾಸಿಸುತ್ತಿರುವ ಉದ್ಯೋಗಸ್ಥ ಮಹಿಳೆಯರ ಕುರಿತ ಸ್ಪಷ್ಟ ಚಿತ್ರಣ ಈ ಅಧ್ಯಯನದಿಂದ ದೊರೆಯುತ್ತದೆ. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯವನ್ನು ಗುಲಬರ್ಗಾ ಜಿಲ್ಲೆಗೆ ಸೀಮಿತಗೊಳಿಸಿ ಅಧ್ಯಯನ ಮಾಡಲಾಗಿದೆ. ವಿಶ್ಲೇಷಣೆಯ ಆಕರ, ಸಾಮಗ್ರಿ ಯಾಗಿ 'ತವರು ಮನೆ ಸಂಪನ್ಮೂಲಹಂಚಿಕೆ, ಶ್ರಮವಿಭಜನೆ ಹಾಗೂ ಚಿಂತನಾಕ್ರಮ ಎಂಬ ನಾಲ್ಕು ಕ್ಷೇತ್ರಗಳನ್ನು ಮಾತ್ರ ಗುರುತಿಸಿಕೊಳ್ಳಲಾಗಿದೆ. ಮಹಿಳೆಯ ಜೀವನದ ಸಂದರ್ಭದಲ್ಲಿ ಈ ನಾಲ್ಕು ವಿಚಾರಗಳು ಅತ್ಯಂತ ಮುಖ್ಯವಾದುದಾಗಿದ್ದು. ಅವುಗಳಲ್ಲಿ ಪ್ರಾತಿನಿಧಿಕವಾಗಿ ಕೈಗೆತ್ತಿಕೊಳ್ಳುವ ಮೂಲತಃ ಅಧ್ಯಯನದ ಕೇಂದ್ರವನ್ನು ತಲುಪಿಸಬಹುದೆಂಬ ಆಶಯವಿದೆ. ಇವುಗಳಲ್ಲಿ ತವರು ಮತ್ತು ಚಿಂತನಾಕ್ರಮಗಳು ಅವಳ ಮಾನಸಿಕ ಹಾಗೂ ಭಾವನಾತ್ಮಕ ಜಗತ್ತಿನೊಂದಿಗೆ ನೇರ ಸಂಪರ್ಕ ಹೊಂದಿದ್ದಾಗಿದ್ದು, ಶ್ರಮವಿಭಜನೆ ಹಾಗೂ ಸಂಪನ್ಮೂಲದ ಹಂಚಿಕೆಗಳು ದೈಹಿಕ ಹಾಗೂ ಭೌತಿಕ ಸಂಗತಿಗಳನ್ನು ವಿವರಿಸಿಕೊಳ್ಳುವಲ್ಲಿ ನೆರವಾಗಿಲಿವೆ.

ಕುಟುಂಬ ಹಾಗೂ ಉದ್ಯೋಗ ಮಾಡುವಿಕೆಯ ದ್ವಿಪಾತ್ರದಲ್ಲಿಯೂ ಅವಳು ಎದುರಿಸುತ್ತಿರುವ

ಸಮಸ್ಯೆಗಳನ್ನು ಅಭ್ಯಸಿಸುವುದು. ಇಂದಿಗೂ ಸಮಾಜದಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಏನೇನು ಭಿನ್ನತೆಗಳಿಲ್ಲದಿರುವುದು ಕಾಣಬಹುದು. ಜಾಗತೀಕರಣದ ಸಂದರ್ಭದಲ್ಲಿ ಮಾನವ ಶಕ್ತಿಯ ಬದಲು ಯಂತ್ರಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದು ಅದರ ಜೊತೆಯಲ್ಲಿ ಆರ್ಥಿಕ ರಾಜಕೀಯ, ಶೈಕ್ಷಣಿಕ, ಅಸಮಾನತೆ, ಜಾತೀಯತೆ ಲಿಂಗತಾರತಮ್ಯವಿರುವುದನ್ನು ಕಾಣುತ್ತೇವೆ. ಆರ್ಥಿಕ ತೊಂದರೆಗಳಿಂದ ಎಷ್ಟೋ ಮಹಿಳೆಯರಿಗೆ ಕಾನೂನಿನ ಮೊರೆ ಹೋಗಲಾರದೆ ಶೋಷಣೆಗಳನ್ನು ಸಹಿಸಿಕೊಳ್ಳುತ್ತಲೇ ಇರುವವರಾಗುತ್ತಾರೆ. ಈ ಹಿಂದಿನ ಕುಟುಂಬಗಳಲ್ಲಿಯ ಮಹಿಳೆಯ ಸ್ಥಾನಮಾನ ಹಾಗೂ ಮುಂದುವರಿದ ಕುಟುಂಬಗಳಲ್ಲಿಯ ಸ್ಥಾನಮಾನಗಳಲ್ಲಿ ಅವಳ ಜೀವನವನ್ನು ಹೇಗೆ ಎದುರಿಸುತ್ತಾ ಬರುತ್ತಿದ್ದಾಳೆ ಎನ್ನುವುದನ್ನು ಅರಿತುಕೊಳ್ಳುವುದಕ್ಕಾಗಿ ಈ ಅಧ್ಯಯನದಲ್ಲಿ ಪ್ರಮುಖವಾಗಿ ನಾಲ್ಕು ಭಾಗಗಳನ್ನು ಮಾಡಿಕೊಳ್ಳಲಾಗಿದೆ.

ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ ಲಿಂಗಾಧಾರಿತ ನೆಲೆಯಲ್ಲಿ ಚರ್ಚಿಸಿ, ಹಲವಾರು ವಿಷಯಗಳನ್ನು ಕಂಡುಕೊಳ್ಳಲಾಗಿದೆ. ಆಯಾ ಅಧ್ಯಯಗಳ ಅಡಿಯಲ್ಲಿ ಕಂಡುಕೊಂಡ ವಿಷಯಗಳು ಹೀಗಿವೆ. ಒಟ್ಟಾರೆ ಪ್ರಬಂಧವನ್ನು ಅರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು 'ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಹಾಗೂ ಮಹತ್ವ' ಎಂದಿದೆ. ಅಧ್ಯಯನದ ಉದ್ದೇಶಕ್ಕನುಗುಣವಾಗಿ ಹಲವಾರು ಸಂಗತಿಗಳನ್ನು ಮುಂದಿನ ಎಲ್ಲ ಅಧ್ಯಯಗಳಲ್ಲಿ ವಿವರಿಸಿಕೊಳ್ಳಲಾಗಿದೆ. ಅಲ್ಲದೇ ಸ್ವರೂಪದಲ್ಲಿ ಒಟ್ಟು ಈ ಮಹಾಪ್ರಬಂಧದ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ಇಲ್ಲಿ ಮುಖ್ಯವಾಗಿ ಆಧುನಿಕ ಕುಟುಂಬಗಳ ಪಿತೃಪ್ರಧಾನತೆಯ ಸ್ವರೂಪದ ಬಗೆಯನ್ನು ವೈಧಾನಿಕತೆ ಮತ್ತು ಮಹತ್ವವನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯನವು 'ಕೌಟುಂಬಿಕ ಶ್ರಮವಿಭಜನೆ ಮತ್ತು ಮಹಿಳೆ' ಈ ಅಧ್ಯಾಯದಲ್ಲಿ ಶ್ರಮವಿಭಜನೆಯನ್ನು ಪಿತೃಪ್ರಧಾನತೆಯ ಕುಟುಂಬ ಹೇಗೆ ಪ್ರತಿನಿಧಿಸುತ್ತದೆ ಎಂಬ ಕಾರಣವನ್ನು ತಿಳಿದುಕೊಳ್ಳಲು ಕ್ಷೇತ್ರಕಾರ್ಯವನ್ನು ಮಾಡಲಾಯಿತು. ಪಿತೃಪ್ರಧಾನತೆಯಲ್ಲಿ ವಿವಾಹ ಸಂಸ್ಥೆಯು ಪಿತೃಸ್ಥಾನೀಯ ಸ್ವರೂಪ ಹೊಂದಿರುವುದರಿಂದ ಈ ಸಮಾಜದಲ್ಲಿ ಕುಟುಂಬವು ಒಂದು ಸಂಸ್ಥೆಯಾಗಿ ರೂಪಗೊಳ್ಳುತ್ತದೆ. ಮತ್ತು ಸ್ತ್ರೀಯು ತನ್ನ ಸಂಬಂಧಗಳನ್ನು ಇದರ ಜೊತೆಗೆ ಹೊಂದಿರಬೇಕು. ಆಧುನಿಕ ಕುಟುಂಬಗಳಲ್ಲಿಯೂ ಇಂದಿನ ಮಹಿಳೆ ಕುಟುಂಬದ ಕೆಲಸಗಳೊಂದಿಗೆ ಉದ್ಯೋಗದಲ್ಲಿ ತೊಡಗಿಸಿಕೊಂಡು ಆರ್ಥಿಕವಾಗಿ ಕುಟುಂಬಕ್ಕೆ ನೆರವಾಗುತ್ತಿದ್ದರೂ ಮಹಿಳೆಯ ಮನೆಯ ಕೆಲಸ 'ದುಡಿಮೆ' ಎಂದು ಪರಿಗಣಿಸಿಕೊಳ್ಳಲು ಆಗುತ್ತಿಲ್ಲ. ಅಲ್ಲದೇ ಅವಳ ಕುಟುಂಬದ ಜವಾಬ್ದಾರಿಯನ್ನು

ಪುರುಷರು ಎಷ್ಟರ ಮಟ್ಟಿಗೆ ನೆರವು ನೀಡುತ್ತಿದ್ದಾರೆ. ಮನೆಯ ಕೆಲಸದ ಜೊತೆ ಜೊತೆಗೆ ಹೊರಗಡೆಯು ನಿರ್ವಹಿಸಬೇಕಾದ ಕೆಲಸವು ಎಷ್ಟೊಂದು ಅಚ್ಚುಕಟ್ಟಾಗಿ ನಿಭಾಯಿಸುತ್ತಿದ್ದರೂ ಅವಳ ಶ್ರಮವನ್ನು ಶ್ರಮವೆಂದು ಪರಿಗಣಿಸುತ್ತಿಲ್ಲ.

ಮೂರನೆಯ ಅಧ್ಯಾಯವು 'ಸಂಪನ್ಮೂಲ ಹಂಚಿಕೆ ಮತ್ತು ಮಹಿಳೆ' ಈ ಅಧ್ಯಾಯದಲ್ಲಿ ಸಂಪನ್ಮೂಲ ಬಳಕೆಯ ಸ್ವರೂಪದಲ್ಲಿ ಸಂಪನ್ಮೂಲವನ್ನು ಸಮಾಜದ ಮೂಲಕವಾಗಿ ಮುಖ್ಯವಾಗಿ ಪರಿಗಣಿಸಿ ಮಹಿಳೆಯರಿಗೆ ಸಮಾಜದಲ್ಲಿ ಅಧಿಕಾರವಿರುವುದಿಲ್ಲ. ದುಡಿಮೆಯ ಪಾಲುದಾರಳಾದರೂ ದುಡಿಮೆಗೆ ಮೌಲ್ಯವಿಲ್ಲದಿರುವುದರಿಂದ ಅವಳ ಹೆಸರಿಗೆ ಯಾವುದೇ ಆಸ್ತಿ ಇಲ್ಲ. ಅತೀ ಹೆಚ್ಚು ದುಡಿಮೆ ಇದ್ದರೂ ಒಡೆತನವಿರುವುದಿಲ್ಲ. ಉದ್ಯೋಗಸ್ಥರಾದರೂ ಸಹ ಸಂಪನ್ಮೂಲಗಳ ಒಡೆತನ ಅವಳಿಗೆ ಪರಿಗಣಿಸುವುದಿಲ್ಲ. ಅವಳ ವೇತನದ ಅಧಿಕಾರ, ಆಸ್ತಿಯಲ್ಲಿ ಸಮಪಾಲು ಕೇಳಲು ಹಿಂಜರಿಕೆ ಮಾಡಿಕೊಳ್ಳುತ್ತಿರುವುದು ಗಮನಿಸಿದರೆ ಈ ಪಿತೃಪ್ರಧಾನ ವ್ಯವಸ್ಥೆಯು ಕುಟುಂಬ ಎನ್ನುವ ಸಂಸ್ಥೆಯೂ ಮಹಿಳೆಯನ್ನು ಬಂಧನದ ಬೇಡಿಯನ್ನಾಗಿಯೆ ಮಾಡುತ್ತವೆ.

ನಾಲ್ಕನೆಯ ಅಧ್ಯಾಯವು 'ತವರು ಮತ್ತು ಮಹಿಳೆ' ಈ ಅಧ್ಯಾಯದಲ್ಲಿ ತವರು ಮನೆ ಎನ್ನುವುದು ಮಹಿಳೆಗೆ ತನ್ನ ಮನೆಯೆಂದು ಒಪ್ಪಿಕೊಳ್ಳಲು ಆಗುತ್ತಿಲ್ಲ. ಕಾರಣ ಮೂಲದಿಂದಲೂ "ಕೊಟ್ಟ ಹೆಣ್ಣು ಕುಲದಿಂದ ಹೊರಗೆ" ಎಂಬ ತರಬೇತಿ ಪಡೆದಿರುವುದರಿಂದಾಗಿಯೇ ಇಂದಿಗೂ ಮಹಿಳೆಯರು ಅದನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ತಮ್ಮ ತವರು ಮನೆಯಲ್ಲಿ ಗಂಡನು ಜಾಸ್ತಿ ದಿನ ಉಳಿಯುವುದನ್ನು ನಿರಾಕರಿಸುತ್ತಾರೆ. ತವರಿನವರಿಗೆ ಅನಾರೋಗ್ಯವಿದ್ದಾಗಲೂ ಕೂಡ ನಮ್ಮ ಜವಾಬ್ದಾರಿ ಎಂದರೆ ತಮ್ಮ ಸಹೋದರರು ಇದ್ದಾರೆ. ಅವರೇ ನೋಡಿಕೊಳ್ಳುತ್ತಾರೆಂಬ ಅಭಿಪ್ರಾಯಕ್ಕೆ ಬರುತ್ತಾರೆ. ಅವರು ಹುಟ್ಟಿ ಬೆಳೆದ ಮನೆಯಲ್ಲಿ ತನ್ನ ಅಣ್ಣ ತಮ್ಮಂದಿರಿಗೆ ಇರುವಷ್ಟು ಅಧಿಕಾರ ತಮಗೂ ಇದೆ ಎನ್ನುವ ಅರಿವು ಬಂದಿದರು ಸಹ ತವರು ಮನೆ ತಮ್ಮ ಮನೆಯೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳಲು ನಿರಾಕರಿಸುತ್ತಾರೆ. ತವರು ಎಂದರೆ ಅನ್ಯ ಎಂಬ ಭಾವನೆ ಮೂಲದಿಂದಲೂ ಬೆಳೆಸಿಕೊಂಡಿರುವುದರಿಂದಾಗಿಯೇ ತವರಿನವರೊಂದಿಗೆ ಹೆಚ್ಚಿನ ಸಂಬಂಧ ಬೆಳೆಸುತ್ತಿಲ್ಲ.

ಐದನೆಯ ಅಧ್ಯಾಯವು 'ಚಿಂತನಾಕ್ರಮ ಮತ್ತು ಮಹಿಳೆ' ಈ ಅಧ್ಯಾಯದಲ್ಲಿ ಚಿಂತನಾ ಕ್ರಮದ ನಿರ್ವಚನ ಎನ್ನವುದು ಮಹಿಳೆಯ ಬದುಕಿನ ಮುಖ್ಯ ಭಾಗವಾಗಿದೆ. ಸಮಾಜದಲ್ಲಿ ಮಹಿಳೆಯು ಕುಟುಂಬದಿಂದ ಹೊರ ಬಂದರೆ ಅವಳು ಅನೇಕ ರೀತಿಯ ಸಮಸ್ಯೆಗಳನ್ನು

ಎದುರಿಸಬೇಕಾಗಿದೆ. ಅನೇಕ ಕಾನೂನುಗಳನ್ನು ಅರಿತುಕೊಂಡರೂ ಅವಳು ಧೈರ್ಯದಿಂದ ತನ್ನ ಹಕ್ಕುಗಳನ್ನು ಕೇಳಲು ಆಗುತ್ತಿಲ್ಲ. ಎಲ್ಲೆಡೆಯೂ ಸ್ತ್ರೀ ಸ್ವಾತಂತ್ರ್ಯದ ಬಗ್ಗೆ, ಲಿಂಗ ತಾರತಮ್ಯದ ಬಗ್ಗೆ ಹೆಣ್ಣು ಶಿಶುಹತ್ಯೆಯ ಬಗ್ಗೆ ಹೆಚ್ಚಿನ ಚರ್ಚೆಗಳು ಕಂಡುಬರುತ್ತಿದ್ದರೂ ಮಹಿಳೆಯರನ್ನು ಕನಿಷ್ಠ ಜೀವನಾವಶ್ಯಕ ಹಕ್ಕುಗಳಿಂದ ವಂಚಿತರನ್ನಾಗಿಸುತ್ತವೆ. ಕಾನೂನುಗಳು ನೀಡುವ ಎಲ್ಲಾ ಹಕ್ಕುಗಳು ಮಹಿಳೆಯರಿಗೆ ದೊರಕುವಂತೆ ಮಾಡಿ, ಅವರ ಸ್ಥಿತಿ-ಗತಿಗಳನ್ನು ಉತ್ತಮಪಡಿಸುವಲ್ಲಿ ಅನೇಕ ಮಹಿಳಾ ಸಂಘಟನೆಗಳು ಶ್ರಮಿಸುತ್ತಿವೆ.

ಅಧ್ಯಾಯ ಆರು 'ಸಮಾರೋಪ'ವಾಗಿದ್ದು ಪ್ರಬಂಧದ ಕೊನೆಯ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಚರ್ಚಿಸಲಾಗಿದೆ.

## ಅಧ್ಯಯನ ವೈಧಾನಿಕತೆ

ಪ್ರಸ್ತುತ ಅಧ್ಯಯನವು ಮಹಿಳಾ ಅಧ್ಯಯನದ ದೃಷ್ಟಿಕೋನದೊಂದಿಗೆ ಸಮಾಜ, ವಿಜ್ಞಾನ, ಸಂಶೋಧನಾ ಪ್ರಧಾನಿಕತೆಯನ್ನು ಅಳವಡಿಸಿಕೊಂಡಿದ್ದಾಗಿದೆ. ಬದಲಾಗುತ್ತಿರುವ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪವನ್ನು ಅರಿತುಕೊಳ್ಳುವ ಪ್ರಯತ್ನವನ್ನು ಅಧ್ಯಯನದಲ್ಲಿ ಅನುಸರಿಸಲಾಗಿದೆ. ಕುಟುಂಬದಲ್ಲಿ ಮಹಿಳೆ ಯಾವ ರೀತಿಯಲ್ಲಿ ಪುರುಷನ ಅಧೀನಕ್ಕೆ ಒಳಪಡುತ್ತಿದ್ದಾಳೆ, ಆರ್ಥಿಕವಾಗಿ ಸ್ವತಂತ್ರ್ಯತೆ ಪಡೆದು ತನ್ನ ವೇತನದ ಮೇಲೆ ಅಧಿಕಾರ ಪಡೆಯುತ್ತಿದ್ದಾಳೆಯೇ? ಸಂವಿಧಾನದಲ್ಲಿ ಮಹಿಳೆಯರಿಗೆ ಇರುವ ಕಾಯ್ದೆ, ಕಾನೂನುಗಳನ್ನು ಅರಿತರು ಅವುಗಳನ್ನು ಎಷ್ಟರ ಮಟ್ಟಿಗೆ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುತ್ತಿದ್ದಾಳೆ? ಇಂಥ ಮೂಲಭೂತ ಪ್ರಶ್ನೆಗಳನ್ನು ಎತ್ತಿಕೊಂಡು ತಾತ್ವಿಕ ಚರ್ಚೆಗೆ ಒಳಪಡಿಸಲಾಗಿದೆ. ನಿರ್ದಿಷ್ಟ ನಾಲ್ಕು ವಿಷಯಗಳಿಗೆ ಅನುಗುಣವಾಗಿ ಪ್ರಶ್ನೆಗಳ ಗುಚ್ಛಗಳನ್ನು ಸಿದ್ಧಪಡಿಸಿಕೊಂಡು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಈ ಹಿಂದಿನ ಕುಟುಂಬ ಅಧ್ಯಯನಗಳ ಸಾಹಿತ್ಯ ಸಮೀಕ್ಷೆ ಇಟ್ಟುಕೊಂಡು ಪ್ರಶ್ನೆಗಳನ್ನು ತಯಾರಿಸಿಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಬೇಕಾದ ಅಂಕಿ-ಅಂಶಗಳು ಹಾಗೂ ಇತರೆ ಮಾಹಿತಿಗಳನ್ನು ಪ್ರಾಥಮಿಕ ಮತ್ತು ಅನುಷಂಗೀಕ ಮೂಲಗಳಿಂದ ಪಡೆದುಕೊಳ್ಳಲಾಗಿದೆ. ಮಾಹಿತಿ ಸಂಗ್ರಹಣೆಯನ್ನು ಅಧ್ಯಯನಕಾರರೇ ಸ್ವಯಂ ಆಗಿ ಸಂಗ್ರಹಿಸಲಾಗಿದ್ದು, ಅಗತ್ಯಬಿದ್ದಲ್ಲಿ ಮಾಹಿತಿದಾರರೊಂದಿಗೆ ವಿಸ್ತೃತ ಚರ್ಚೆಯನ್ನು ಮಾಡಲಾಗಿದೆ. ಗುಣಾತ್ಮಕ ಮತ್ತು ಪರಿಣಾತ್ಮಕ ವಿಶ್ಲೇಷಣೆ ನೀಡುವ ದೃಷ್ಟಿಯಿಂದ ಕೆಲವು ಸರಳವಾದ ಸಾಂಖ್ಯಿಕ ಸಲಕರಣೆಗಳನ್ನು ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದ ಮಾಹಿತಿದಾರರಾಗಿ ನೂರು ಜನರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಂದು ಸಂದರ್ಶನ ಸೂಚಿಯನ್ನು ಬಳಸಿಕೊಳ್ಳಲಾಗಿದೆ.

ಪ್ರಾಥಮಿಕ ಮಾಹಿತಿಗಳನ್ನು ಅಂಕಿ-ಅಂಶಗಳ ಪಟ್ಟಿಯನ್ನು ಮೊದಲು 'ಕೊಡ್‌ಸೀಟ್'ಗೆ ಪರಿವರ್ತಿಸಲಾಗಿದೆ. ನಂತರ ಅದನ್ನು ವೃತ್ತಚಿತ್ರಕ್ಕೆ (ಗ್ರಾಫ್‌ಗೆ) ತರಲಾಗಿದೆ. ವಿಶ್ಲೇಷಣೆಯ ಸಂದರ್ಭದಲ್ಲಿ ಕ್ಷೇತ್ರಕಾರ್ಯದ ಸಂದರ್ಭದ ಇನ್ನಿತರ ಮಾಹಿತಿಯನ್ನು ಹಿನ್ನಲೆಯಾಗಿ ಬಳಸಲಾಗಿದೆ.

## ಅಧ್ಯಯನದ ಮಹತ್ವ

ಕುಟುಂಬ ಎಂಬ ಸಂಸ್ಥೆಯ ಸ್ವೀಕರಣೆ ನಿರಾಕರಣೆಗಳ ಕುರಿತ ವಾಗ್ವಾದಗಳು, ಕಾಲದಿಂದ ಕಾಲಕ್ಕೆ ಆ ಸಂಸ್ಥೆಯು ಎದುರಿಸುತ್ತ ಬಂದಿರುವ ಸಮಸ್ಯೆಗಳು, ಆ ಸಮಸ್ಯೆಗಳ ಪರಿಹಾರವಾಗಿ ಅದು ಹೊಂದಿರುವ ಮಾರ್ಪಾಡುಗಳು ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ ಕುಟುಂಬ ಅಧ್ಯಯನಗಳ ಮಹತ್ವ ಮನದಟ್ಟಾಗುತ್ತದೆ.

ಮಾನವ ಸಮಾಜದ ಮೂಲ ಘಟಕವಾಗಿ ಕುಟುಂಬವನ್ನು ಮನುಷ್ಯ ಸ್ವೀಕರಿಸಿರುವುದರೊಂದಿಗೆ ಅದನ್ನು ಲಿಂಗ ವ್ಯವಸ್ಥೆಯ ಮೂಲಾಧಾರವಾಗಿ ಬಳಸಿಕೊಂಡಿರುವುದು ಮಹಿಳಾ ಅಧ್ಯಯನಗಳಲ್ಲಿ ಅದರ ಮಹತ್ವವನ್ನು ಇನ್ನಷ್ಟು ಹೆಚ್ಚಿಸಿದೆ. ಸಾಂಪ್ರದಾಯಿಕ ತಿಳುವಳಿಕೆ ಅದನ್ನೊಂದು ದೈವನಿರ್ಮಿತ ಸಂಗತಿಯಾಗಿ ಎತ್ತಿ ಹೇಳುವುದು, ಸಮಾಜ ಅಧ್ಯಯನಕಾರರು ಮಹತ್ವದ ಸಾಮಾಜಿಕ ಸಂಸ್ಥೆಯಾಗಿ ಗುರುತಿಸಿಕೊಂಡಿರುವುದರೊಂದಿಗೆ ಮಹಿಳಾ ಅಧ್ಯಯನವು ಅದರ ಲಿಂಗಾಧಾರಿತ ಪಾತ್ರದ ಕುರಿತು ಗಮನಹರಿಸುತ್ತಾರೆ.

ಪ್ರಸ್ತುತ ಅಧ್ಯಯನವಾದರೂ ಮೇಲಿನ ಮೂರು ಚಿಂತನಾಧಾರಗಳನ್ನು ಗಮನಿಸಿದ್ದಾಗಿದ್ದು, ಬದಲಾಗುತ್ತಿರುವ ಕೌಟುಂಬಿಕ ಸಂದರ್ಭದಲ್ಲಿ ಮಹಿಳೆಯ ಭೌತಿಕ, ಬೌದ್ಧಿಕ ಸ್ಥಿತಿಗತಿಗಳನ್ನು ಅರಿಯಲು ಹೊರಟದ್ದಾಗಿದೆ. ಹಲವು ಅಧ್ಯಯನಗಳು ಪ್ರಸ್ತುತ ಪಡಿಸಿರುವ ಅಂಕಿ ಅಂಶಗಳು ಹಾಗೂ ಅವುಗಳಿಂದ ರೂಪಿತವಾದ ತೀರ್ಮಾನಗಳೊಂದಿಗೆ ತನ್ನ ಅಧ್ಯಯನ ಸಾಮಗ್ರಿಯನ್ನು ಸೇರಿಸುವ ಆಶಯವುಳ್ಳದ್ದಾಗಿದೆ. ಆ ಮೂಲಕ ಮಧ್ಯಮವರ್ಗದ ಕುಟುಂಬಗಳು ಅವುಗಳಲ್ಲಿನ ಸ್ತ್ರೀಯ ಪಾತ್ರವನ್ನು ಅರಿಯಲು ಯತ್ನಿಸುವುದಾಗಿದ್ದೂ ಇದು ಮಹಿಳಾ ಅಧ್ಯಯದ ಕುಟುಂಬ ಅಧ್ಯಯನಗಳ ದಿಗಂತವನ್ನು ವಿಸ್ತಾರಿಸುವುದಾಗಿದೆ.

ಸಹಜವಾಗಿ ಹುಟ್ಟಿಕೊಂಡ ಸಮಾಜದ ಚೌಕಟ್ಟಿನಲ್ಲಿ ಸ್ತ್ರೀ-ಪುರುಷರು ಸರಿಸಮಾನವಾಗಿ ಬದುಕಲು

ಸಾಮಾಜೀಕರಣ ಅತೀ ಪ್ರಮುಖವಾಗಿದೆ. ಪುರುಷ ನಿರ್ಮಿತ ಸಮಾಜಿಕ ಚೌಕಟ್ಟಿನಲ್ಲಿ ಸ್ತ್ರೀ ಪುರುಷರ ಬೆಳವಣಿಗೆ ಶಿಸ್ತು ಮತ್ತು ರೂಢಿ ಸಂಪ್ರದಾಯಗಳನ್ನು ಒಳಗೊಂಡಿವೆ. ಈ ರೀತಿಯ ಚೌಕಟ್ಟಿನಲ್ಲಿ ಸ್ವಾತಂತ್ರ್ಯ ನಿರ್ಣಯ, ಅಧಿಕಾರ, ವಂಶಾಭಿವೃದ್ಧಿ, ಲೈಂಗಿಕ ಹತೋಟಿ, ದಬ್ಬಾಳಿಕೆ ಈ ಎಲ್ಲವುಗಳು ಪುರುಷರ ಪಾಲಾದರೆ ಭಾದ್ಯತೆಗಳು, ಸದಾ ಸೇವೆ ಸಲ್ಲಿಸುವುದು, ತಾರತಮ್ಯ, ಅಸಮಾನತೆ, ಕುಟುಂಬದ ರಕ್ಷಣೆ ಮಕ್ಕಳ ಪೋಷಣೆ ಈ ಎಲ್ಲವುಗಳು ಮಹಿಳೆಯ ಪಾಲಾಗಿಸುವುದರಿಂದ ಅವಳ ಆರ್ಥಿಕ ಮಟ್ಟವು ಕುಂಠಿತಗೊಳ್ಳುತ್ತವೆ. ಈ ವ್ಯವಸ್ಥೆಯಿಂದ ಸಮಾಜದಲ್ಲಿ ಮೇಲುಕೀಳು, ಗಂಡು ಹೆಣ್ಣು, ಶ್ರೀಮಂತ, ಬಡವ ಎಂಬುವುದು ಆಳವಾಗಿ ಬೇರೂರಿವುದರಿಂದ ಅಸಮಾನತೆ ಉಂಟಾಗಿ ಕನಿಷ್ಠರು ಕನಿಷ್ಟರಾಗಿಯೇ ಉಳಿಯುತ್ತಾರೆ. ಶ್ರೇಷ್ಠರು ಶ್ರೇಷ್ಠರಾಗುತ್ತಾ ಹೋಗುತ್ತಾರೆ. ಶ್ರೇಷ್ಠರೆಂದು ಪುರುಷ ಪ್ರಧಾನರು ಸಮಾಜದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಾ ಶಕ್ತರಾಗಿ ಸ್ವತಂತ್ರ್ಯವನ್ನು ತಮ್ಮದಾಗಿಸಿಕೊಂಡು ಎಲ್ಲಾ ಅಧಿಕಾರ, ಆಡಳಿತ, ಹಕ್ಕುಗಳನ್ನು ಹಿಡಿತದಲ್ಲಿಟ್ಟುಕೊಂಡಿರುವುದರಿಂದ ಸಮಾಜದಲ್ಲಿ ಕನಿಷ್ಠರೆನಿಸಿ ಕೊಂಡ ಮಹಿಳೆಯರ ಮೇಲಿನ ಎಲ್ಲಾ ಸೌಕರ್ಯಗಳಿಂದ ವಂಚಿತ ರಾಗಿದ್ದಾರೆ. ಈ ರೀತಿಯಾಗಿ ಸಮಾಜದಲ್ಲಿ ಸ್ತ್ರೀ-ಪುರುಷರ ಮಧ್ಯೆ ಅಸಮಾನತೆ ಉಂಟಾಗಿರುವುದನ್ನು ಕಾನೂನಿನ ಮೂಲಕ ಸಂವಿಧಾನಾತ್ಮಕವಾಗಿ ದೊರೆಯುವ ಸಮಾನ ಹಕ್ಕುಗಳನ್ನು ಸ್ತ್ರೀಯೂ ಪಡೆದುಕೊಳ್ಳುವಂತೆ ಮಾಡಲು ಪ್ರತಿಯೊಬ್ಬ ಸ್ತ್ರೀಪುರುಷನು ಚಿಂತಿಸುವಂತಹ ವಿಚಾರವಾಗಿದೆ. ಹಾಗೆಯೇ ಸ್ತ್ರೀ-ಪುರುಷರ ಮಧ್ಯೆ ಇರುವ ಲಿಂಗ ತಾರತಮ್ಯದಿಂದ ನವಪೀಳಿಗೆಯ ಜನಾಂಗಕ್ಕೆ ಮಾರಕವಾಗುತ್ತದೆ. ಈ ರೀತೀಯ ತಾರತಮ್ಯವನ್ನು ಕುಟುಂಬದಲ್ಲಿ ಮಕ್ಕಳಿಗೆ ನೀಡುತ್ತಿರುವ ತರಬೇತಿಯ ಕಲಿಕೆಗಳು ಬದಲಾಗಬೇಕಾಗಿದೆ ಹಾಗೂ ಮಹಿಳೆಯರ ಪ್ರಗತಿಗೆ ಅಡ್ಡಿ ಆತಂಕವಾಗಿರುವ ಸಾಮಾಜಿಕ ಪಿಡುಗುಗಳನ್ನು ಕಾನೂನಿನ ಮೂಲಕ ತಿದ್ದುಪಡಿಯಾಗ ಬೇಕಾಗಿದೆ. ಕಾನೂನಿನ ಮೂಲಕ ಸಮಾಜದಲ್ಲಿ ದೊರೆಯಬೇಕಾದ ಎಲ್ಲ ಸೌಲಭ್ಯಗಳು ದೊರೆತಾಗ ತನ್ನಷ್ಟಕ್ಕೆ ತಾನೇ ಸಬಲ ಳಾಗುತ್ತಾಳೆ. ಸಮಾಜದ ಎಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಹಾಗೂ ಯೋಜನೆಗಳನ್ನು ತನ್ನದಾಗಿಸಿ ಕೊಂಡಾಗ ಸ್ವಾವಲಂಬಿಗಳಾಗುತ್ತಾರೆ. ಅಂದಾಗ ಯಾವುದೇ ವಿಷಯದ ಬಗ್ಗೆ ಚರ್ಚಿಸುವ ಪ್ರಶ್ನಿಸುವ, ನಿರ್ಣಯ ತೆಗೆದುಕೊಳ್ಳುವ ಮಟ್ಟದಲ್ಲಿರುತ್ತಾರೆ. ಏಕೆಂದರೆ ಮಹಿಳೆಯರು ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯವಾಗಿ ಸಮರ್ಥರಾಗಿ ಸ್ಥಾನಗಳನ್ನು ಪಡೆದುಕೊಳ್ಳುತ್ತಾರೆ. ಒಂದು ವೇಳೆ ಸರಿಸಮಾನವಾಗಿ ಸ್ಥಾನಗಳನ್ನು ಪಡೆದುಕೊಂಡರು ವ್ಯಕ್ತಿತ್ವದ ವಿಕಾಸನಕ್ಕೆ ಯಾವುದೇ ವಲಯದಲ್ಲಾಗಲಿ ಸೂಕ್ತ ರೀತಿಯ ತರಬೇತಿ ಅತ್ಯಂತ ಅವಶ್ಯಕ ಮತ್ತು ಅಗತ್ಯವಾಗಿದೆ ಎನ್ನುವುದನ್ನು ಗುರುತಿಸಲು ಈ ಅಧ್ಯಯನವಾದಾಗ ಇಂಥ ಸಮಯೋಚಿತ ಚಿಂತನೆ ಬೇಕಾದ ಅಗತ್ಯವಾದ ಎಲ್ಲಾ ಪರಿಕರಗಳು

ಸಿದ್ಧವಾಗಿದ್ದು ಮಹಿಳೆಯು ಹೊಸ ಚಿಂತನೆಗೆ ಆಯಾಮ ಲಭಿಸುವಂತಾಗಬೇಕಾಗಿದೆ. ಮಹಿಳೆಯರಿಗೆ ಸಂಬಂಧಿಸಿದ ಕುಟುಂಬ ಎನ್ನುವ ಸಂಸ್ಥೆಯಿಂದಲೇ ಅವಳಿಗೆ ದೊರೆಯಬೇಕಾಗಿರುವ ಮೂಲಭೂತ ಕಾನೂನುಗಳನ್ನು ರಚನೆಯಾಗುವುದರೊಂದಿಗೆ ವಿವಿಧ ಸಾಮಾಜಿಕ ಸಮಸ್ಯೆಗಳ ವಿರುದ್ಧ ಹೋರಾಡುವ ಪ್ರಜ್ಞೆ ನೀಡಲು ಎಲ್ಲಾ ಹಂತಗಳಲ್ಲಿ ಬೆಳೆದುಬಂದಾಗ ಮಹಿಳೆಯರ ಸ್ಥಿತಿಗತಿ ಉತ್ತಮ ಗೊಳಿಸುವುದರಲ್ಲಿ ಅನುಮಾನವಿಲ್ಲ. ಇಂಥ ವಿಶ್ಲೇಷಣಾತ್ಮಕ ಪ್ರಜ್ಞೆಯನ್ನು ಬೆಳೆಸುವ ದಿಕ್ಕಿನಲ್ಲಿ ಈ ಅಧ್ಯಯನದ ಸಂಶೋಧನೆಯು ಮಹತ್ವದಾಗುತ್ತದೆ.

## ಆಧಾರಗಳು

೧. ಪೆರ್ಲ ಮಾ.ಭ., *ಭಾರತೀಯ ವಿವಾಹ ಸಂಸ್ಕಾರ,* ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ದಕ್ಷಿಣ ಕನ್ನಡ, ೨೦೦೦

೨. ಡಾ. ಹಾ.ಮಾ. ನಾಯಕ., (ಪ್ರ.ಸಂ.) *ಕನ್ನಡ ವಿಶ್ವಕೋಶ,* ಸಂಪುಟ-೪, ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ೧೯೭೨

೩. ಶ್ರೀಮತಿ ಎಚ್.ಎಸ್., *ಮಹಿಳಾ ಅಧ್ಯಯನ-ದಕ್ಷಿಣಾಯನ,* ಸಂಪುಟ-೨, ಸಂಚಿಕೆ-೨ ಜುಲೈ ೨೦೦೦, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ (ಲೇ) 'ಕುಟುಂಬ ಮತ್ತು ಮಹಿಳೆ'- ವೆಂ. ವನಜ

೪. *ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು* ಆರು ಉಪನ್ಯಾಸಗಳು (ಲೇ) 'ಆಧುನೀಕರಣ ಹಾಗೂ ಜೀವನ ಭವಿತವ್ಯ', ಎಸ್.ಆರ್. ಶಾಸ್ತ್ರೀ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

ಲಿಂಗಾಧಾರಿತ ಶ್ರಮವಿಭಜನೆಯು ಪುರುಷ ಪ್ರಧಾನ ವ್ಯವಸ್ಥೆಯ ಬುನಾದಿಯಾಗಿದ್ದು, ಅದು ಅಂತಿಮವಾಗಿ ಸ್ತ್ರೀಯ ಕ್ರಿಯಾಶೀಲತೆಯನ್ನು ನಿಯಂತ್ರಿಸುತ್ತದೆ ಮತ್ತು ನಿರ್ದೇಶಿಸುತ್ತದೆ. ಈ ವಿಭಜನೆಗೆ ಅನುಗುಣವಾಗಿಯೇ ಈ ಸಮಾಜದ ಸ್ತ್ರೀಯು ಕುಟುಂಬದ ವ್ಯಾಪ್ತಿಗೆ ತನ್ನನ್ನು ತಾನು ಸೀಮಿತಗೊಳಿಸಿಕೊಂಡು ಶತಶತಮಾನಗಳಿಂದ ಬದುಕುತ್ತಾ ಬಂದಿದ್ದಾಳೆ. ತನ್ನ ಕೌಟುಂಬಿಕ ಜವಾಬ್ದಾರಿಯ ಭಾಗವಾಗಿ ಸಂತಾನೋತ್ಪತ್ತಿಯ ಚಟುವಟಿಕೆಯೊಂದಿಗೆ ಪೋಷಣೆಯ ಕೆಲಸವನ್ನು ನಿರ್ವಹಿಸುತ್ತಿದ್ದು, ಅದನ್ನು ನಿಸರ್ಗ ಸಹಜ ಕೆಲಸವೆಂದು ನಂಬಿಸಿದೆ ಹಾಗೂ ಪುರುಷ ಸದಸ್ಯರಿಗೆ ವಿಧೇಯಳಾಗಿ ಜೀವಿಸುವುದನ್ನು ಸಾಂಸ್ಕೃತಿಕ ಮೌಲ್ಯವಾಗಿ ನಿರ್ಮಾಣ ಮಾಡಲ್ಪಟ್ಟಿದೆ. ಈ ಎಲ್ಲದರ ಪರಿಣಾಮವಾಗಿ ಕುಟುಂಬ ಕೇಂದ್ರೀತವಾದ ಸ್ತ್ರೀಯ ಬದುಕು ಹಕ್ಕುಗಳಿಲ್ಲದ ಬದುಕಾಗಿ ನಡೆದು ಬಂದಿದೆ.

ಸ್ತ್ರೀ ಕುಟುಂಬ ಕೇಂದ್ರೀತಳಾಗಿದ್ದರಿಂದ ಶಿಕ್ಷಣ, ಆರ್ಥಿಕ ಕ್ಷೇತ್ರ ಹಾಗೂ ಸಾರ್ವಜನಿಕ ಪ್ರವೇಶದಿಂದ ಹೊರಗಿಡಲಾಗಿತ್ತು. ಈ ಹೊರಗಿಡುವಿಕೆಯಿಂದ ಆಕೆ ಕುಟುಂಬಕ್ಕೆ ಹೆಚ್ಚು ಅವಲಂಬಿತಳಾಗಿರುತ್ತಿದ್ದಳು. ಅಂದರೆ ಇವೆರಡು ಪರಸ್ಪರ ಪೂರಕ ಸಂಗತಿಗಳಾಗಿದ್ದವು ಹಾಗೂ ಇದು ನೂರಕ್ಕೆ ನೂರು ಪುರುಷನ ಹಿತಾಸಕ್ತಿಯನ್ನು ಅವಲಂಬಿಸಿದ್ದಾಗಿತ್ತು.

ಆಧುನಿಕ ಸಂದರ್ಭದಲ್ಲಿ ಬದಲಾದ ಪುರುಷ ಪ್ರಧಾನತೆಯ ಚರ್ಯೆಯು ತನ್ನ ಅಗತ್ಯಕ್ಕನುಗುಣವಾಗಿ ಸ್ತ್ರೀಯ ಚರಿತ್ರೆಯನ್ನು ಬದಲಿಸಿತು. ಪರಿಣಾಮವಾಗಿ ಸಾಂಪ್ರದಾಯಿಕ ಸಮಾಜದಲ್ಲಿ ನಿರಾಕರಣೆಗೊಂಡಿದ್ದ ಶಿಕ್ಷಣ, ಆರ್ಥಿಕತೆ ಮತ್ತು ಸಾರ್ವಜನಿಕ ಪ್ರವೇಶದ ಸಂಗತಿಗಳು ಪುರುಷ

ಪ್ರಧಾನತೆಯ ಹಿತ್ತಾಸಕ್ತಿಯ ಒಳಗೆ ಸ್ವಲ್ಪ ಸ್ವಲ್ಪವಾಗಿ ತೆರೆದುಕೊಂಡಿತು. ಆಧುನಿಕ ಸಮಾಜದ 'ಆಧುನಿಕ ಮಹಿಳೆ'ಯಾಗಿ ಶಿಕ್ಷಿತ, ಉದ್ಯೋಗಸ್ಥ, ಸಾರ್ವಜನಿಕ ಸ್ಥಳಗಳಿಗೆ ತೆರೆದುಕೊಂಡ ಸ್ತ್ರೀಯು ಕಾಣಿಸಿಕೊಂಡಳು. ಈ ಸ್ತ್ರೀ ಆಧುನಿಕ ಕುಟುಂಬದ ಆದರ್ಶ ಗೃಹಿಣಿಯಾದಳು. ಮಕ್ಕಳ ಪೂರ್ವಾಭಿವೃದ್ಧಿಗಾಗಿ ತನ್ನ ಶಿಕ್ಷಣವನ್ನು ಕುಟುಂಬದ ಅಗತ್ಯಕ್ಕಾಗಿ ತನ್ನ ಆರ್ಥಿಕತೆಯನ್ನು ಮತ್ತು ಕುಟುಂಬದ ಪ್ರತಿನಿಧಿಯಾಗಿ ತನ್ನ ಸಾರ್ವಜನಿಕ ಪ್ರವೇಶವನ್ನು ಸ್ವೀಕರಿಸಿದ ಈ ಮಹಿಳೆಯ ಆಗಮನದಿಂದಾಗಿ ಆಧುನಿಕ ಕುಟುಂಬದೊಳಗೆ ಪುನರ್ ಸಂಘಟನೆಗೊಂಡ ಶ್ರಮವಿಭಜನೆಯ ಸ್ವರೂಪ ಎಂಥದೆಂಬುದನ್ನು ಅರಿಯುವುದು ಆಧುನಿಕ ಕುಟುಂಬಗಳ ಅಧ್ಯಯನ ಮತ್ತು ಮಹಿಳಾ ಅಧ್ಯಯನಗಳೆರಡರ ದೃಷ್ಟಿಯಿಂದಲೂ ಕುತುಹಲಕಾರಿಯಾದ ಈ ಹಿನ್ನೆಲೆಯಲ್ಲಿ ಕೌಟುಂಬಿಕ ಶ್ರಮವಿಭಜನೆ ಮತ್ತು ಮಹಿಳೆ ಎಂಬ ಪ್ರಸ್ತುತ ಅಧ್ಯಯನವನ್ನು ರೂಪಿಸಿಕೊಂಡಿದ್ದು ಅದರಲ್ಲಿ ಕೆಲವು ನಿಶ್ಚಿತ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಮೂಲಕ ಈ ವಿಚಾರವನ್ನು ಸ್ಪಷ್ಟಪಡಿಸಿ ಕೊಳ್ಳಲು ಪ್ರಯತ್ನಿಸಲಾಗಿದೆ.

ಕುಟುಂಬದಲ್ಲಿ ಗಂಡು ದುಡಿದು ತರುವ ಯಜಮಾನ. ಹೆಣ್ಣು ಮಕ್ಕಳು ತಂದೆ-ತಾಯಿಯರನ್ನು ವಿಧೇಯರಾಗಿ ಜೋಪಾನ ಮಾಡುವ ಗೃಹಿಣಿಯಾಗಿ ಮತ್ತು ಸಮಾಜದ ಏಳ್ಗೆಗೆ ಸಹಾಯಕರು ಎಂಬ ಅಭಿಪ್ರಾಯ ಸಾಮಾನ್ಯವಾದದ್ದು. ಮನೆಯ ಅಂಗಳದಲ್ಲಿ, ಹೆಣ್ಣು ಮಕ್ಕಳ ಪಾತ್ರ ಪ್ರಮುಖ ವಾದದ್ದು. ಆಕೆ ಮನೆಯನ್ನು ಓರಣವಾಗಿಡುವುದಕ್ಕೆ, ಆಹಾರ ತಯಾರಿಸುವುದಕ್ಕೆ ಮಕ್ಕಳ ಲಾಲನೆ ಪಾಲನೆಗಳಿಗೆ ಹೆಚ್ಚಿನ ಅವಧಿಯನ್ನು ವಿನಿಯೋಗಿಸುತ್ತಾಳೆ. ಪತಿ ಮತ್ತು ಮಕ್ಕಳ ಸೇವೆಯನ್ನು ಮೊದಲ ಕರ್ತವ್ಯವೆಂದು ನಂಬಿ ದುಡಿಯುತ್ತಾಳೆ. ಒಟ್ಟು ಕುಟುಂಬ, ಅಧಿಕ ಸಂತಾನ, ಹೆಣ್ಣು-ಗಂಡು ಎಲ್ಲರೂ ಒಟ್ಟಾಗಿ ಹೊಲ ಮನೆಗಳಲ್ಲಿ ದುಡಿಯುವುದು ಇವೆಲ್ಲ ಬೇಸಾಯದ ಪ್ರಧಾನ ಪದ್ಧತಿಯ ಮುಖ್ಯ ಗುಣಲಕ್ಷಣಗಳಾಗಿದ್ದವು. ಅನಂತರ ಔದ್ಯೋಗಿಕ ಪ್ರಗತಿಯಾಯಿತು. ಇದರಿಂದ ಸಮಾಜದಲ್ಲಿ ಅನೇಕ ಬದಲಾವಣೆಗಳು ಆದವು.

"ಔದ್ಯೋಗಿಕ ಪ್ರಗತಿ ಮತ್ತು ತಾಂತ್ರಿಕ ತರಬೇತಿಗಳಿಂದಾಗಿ ದೊಡ್ಡ ಕಾರ್ಖಾನೆಗಳ ಉದಯ ವಾದವು"(ಚ.ಬಿ.ಮುಳುಗುಂದ, ಹೆಚ್.ವಿ. ನಾಗೇಶ್;೪೭). ಪ್ರಥಮವಾಗಿ ಮೀನುಗಾರಿಕೆ ಹಾಲು ಮಾರಾಟ ಮತ್ತು ತರಕಾರಿ ಬೆಳೆಯುವುದು, ಚಿಕ್ಕಪುಟ್ಟ ಗುಡಿಕೈಗಾರಿಕೆಗಳು ಮೊದಲಾದ ಸಣ್ಣ ಕಸಬುಗಳು ಹೆಣ್ಣು ಮಕ್ಕಳ ಪಾಲಿಗೆ ಇರುತ್ತಿದ್ದವು. ಆಕೆ ತನ್ನ ಗೃಹಕೃತ್ಯದೊಂದಿಗೆ ಈ ಕಸಬುಗಳನ್ನು ನಡೆಸಿ ಹಣ ಸಂಪಾದಿಸುತ್ತಿದ್ದಳು. ಈ ರೀತಿಯ ಕಸುಬುಗಳು ಹೆಚ್ಚಿನ ಉತ್ಪಾದನೆ ಬರುವುದರಿಂದಾಗಿ

ಪುರುಷ ಪ್ರಧಾನ ವ್ಯವಸ್ಥೆ ನಿಯಂತ್ರಣಕ್ಕೆ ಒಳಪಟ್ಟವು. ಇದರಿಂದ ಲಿಂಗಧಾರಿತ ಶ್ರಮವಿಭಜನೆಯಿಂದ ಗೃಹಿಣಿಯ ಜೀವನ ಪರಾಧೀನವಾಯಿತು. ಔದ್ಯೋಗಿಕ ಕ್ರಾಂತಿಯ ಫಲವಾಗಿ ಹೆಚ್ಚಿನ ಬೆಲೆ, ವಿಪರೀತ ಸುಂಕಗಳು ಮತ್ತು ಜೀವನದ ಅನಿಶ್ಚಿತತೆ ಉಂಟಾದವು. ಇದರಿಂದ ಸಾಮಾನ್ಯ ಜೀವನ ಕಷ್ಟಕರವಾಯಿತು. ಈ ಕಾರಣಗಳಿಂದ ಮಹಿಳೆಯು ಹೊರಗೆ ದುಡಿಯಬೇಕಾಯಿತು. ಧನ ಸಂಪಾದನೆಯ ಅವಶ್ಯಕತೆ ಮತ್ತು ದೊರೆಯುವ ಗೌರವ, ಸೌಕರ್ಯಗಳು ಮಹಿಳೆಯನ್ನು ಹೊರಗಿನ ಉದ್ಯೋಗಕ್ಕೆ ಆಕರ್ಷಿಸಿದವು.

ಅನೇಕ ಬದಲಾವಣೆಗಳೊಂದಿಗೆ ಸಮಾಜದಲ್ಲಿ ವರದಕ್ಷಿಣೆ ಪದ್ಧತಿ ಹುಟ್ಟಿಕೊಂಡಿತು. ಇದರಿಂದ ಹೆಣ್ಣು ಮಗಳ ಮದುವೆ ಕಷ್ಟವಾಯಿತು ಮತ್ತು ವಿವಾಹದ ವಯಸ್ಸು ಹೆಚ್ಚ ತೊಡಗಿತು. ಈಗ ತಂದೆ ತಾಯಿಯರು ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೂ ಹೆಚ್ಚಿನ ಗಮನ ಕೊಡುತ್ತಿದ್ದಾರೆ. ಇದರಿಂದ ಸ್ತ್ರೀ ವಿದ್ಯಾಭ್ಯಾಸ ಪ್ರಗತಿ ಹೊಂದಿ, ಸ್ತ್ರೀಯರೂ ತಾಂತ್ರಿಕ ತರಬೇತಿಯನ್ನು ಪಡೆಯುತ್ತಿದ್ದಾರೆ. ಹಾಗೂ ಅನೇಕ ಉದ್ಯೋಗಗಳಲ್ಲಿ ಕೆಲಸ ಮಾಡಲು ಮುಂದಾಗಿದ್ದಾರೆ. ಇಷ್ಟಾದರೂ ಜೀವನೋಪಾಯದ ದೃಷ್ಟಿಯಿಂದ ಹೆಣ್ಣು ಮಕ್ಕಳ ವಿದ್ಯಾಭ್ಯಾಸ ನಡೆಯುತ್ತಿಲ್ಲ ಎನ್ನಬಹುದು. ಹೆಣ್ಣು ಮಗಳ ಕುಶಲತೆ ಮತ್ತು ಬುದ್ಧಿವಂತಿಕೆಯ ಪ್ರಮಾಣದಲ್ಲಿ ಆಕೆ ಉದ್ಯೋಗ ಮಾಡಲು ಅನುಗುಣವಾದಂತಹ ಶಿಕ್ಷಣ ರೂಪುಗೊಳ್ಳಬೇಕು.

"ಇಂದು ಹೆಣ್ಣು ಮಕ್ಕಳು ವಿವಾಹದ ಹಾದಿ ನೋಡುತ್ತಾ ಮಧ್ಯಂತರ ಕಾಲ ನಿರ್ವಹಣೆಗಾಗಿ ಉದ್ಯೋಗ ಮಾಡುವುದು ಸಾಮಾನ್ಯವಾಗಿದೆ. ಮಹಿಳೆ ದುಡಿದು ಸ್ವತಂತ್ರ ವ್ಯಕ್ತಿಯಾಗುವ ಬಗ್ಗೆ ರಾಷ್ಟ್ರದ ಸಂಪತ್ತಿಗೆ ನೆರವಾಗುವ ಬಗ್ಗೆ ನಮ್ಮ ಸಮಾಜದಲ್ಲಿ ನಂಬುಗೆಯಿಲ್ಲ. ಆದ್ದರಿಂದ ಹೆಣ್ಣು ಮಗಳ ಶಿಕ್ಷಣಕ್ಕೆ ಗಮನ ಕೊಡುವುದಕ್ಕಿಂತ ಆಕೆಯ ವಿವಾಹಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿ ತಂದೆ-ತಾಯಿ ಮಗಳ ವಿವಾಹಕ್ಕೆ ತಡಪಡಿಸುತ್ತಾರೆ"(ಚ.ಬಿ.ಮುಳಗುಂದ, ಹೆಚ್.ವಿ. ನಾಗೇಶ್;೪೭). ವರದಕ್ಷಿಣೆಯ ಭೂತಕ್ಕೆ ಬಲಿಸಲ್ಲಿಸುತ್ತಾರೆ. ಮಾನವ ಆಹಾರ ಉತ್ಪಾದನೆಗೆ ತೊಡಗಿದಾಗಿನಿಂದ ಮಹಿಳೆ ಒಳಗೆ ಹೊರಗೆ ದುಡಿಯುತ್ತಾ ಬಂದಿದ್ದಾಳೆ. ಆದರೆ ಕೆಲವು ವರುಷಗಳಿಂದೀಚೆಗೆ ಆಕೆ ಧನ ಸಂಪಾದನೆಗಾಗಿ ಹೊರಗಿನ ಉದ್ಯೋಗ ಮಾಡತೊಡಗಿದ್ದು ಎನ್ನಬಹುದು. ಮದುವೆ ಆಗುವುದರಿಂದ 'ವರದಕ್ಷಿಣೆ' ಪದ್ಧತಿಯ ಹಾವಳಿ ಹೆಚ್ಚಾಗುತ್ತಿದೆ. ಇದರಿಂದ ದಿನನಿತ್ಯ ಗಂಟೆಗೆ ಒಂದು ವರದಕ್ಷಿಣೆ ಸಾವುಗಳನ್ನು ಕಾಣಬಹುದು. ಮಹಿಳೆಯರು ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಬಡತನ, ಗಂಡನ ಆಸೆ ಆಮಿಷಗಳಿಗೆ ಹಣದ ದುರಾಸೆಯಿಂದ ಮಹಿಳೆಯರು

ಎಷ್ಟು ಚಿಕ್ಕ ವಯಸ್ಸಿನಲ್ಲಿ ಎಂತ ಬಗೆಯ ಕಷ್ಟಗಳನ್ನು ಎದುರಿಸುತ್ತಾರೆ. ಉದಾಹರಣೆಗೆ ಗಾರ್ಮೆಂಟ್ಸ್ ಕಾರ್ಖಾನೆಯಲ್ಲಿ ವಿವಾಹವಾಗದ ಒಬ್ಬ ಹುಡುಗಿ ಚಿಕ್ಕ ವಯಸ್ಸಿನವಳಾಗಿದ್ದರು ಇಡೀ ಮನೆಯ ಜವಾಬ್ದಾರಿಯನ್ನು ನಿರ್ವಹಿಸಲು ಹೆಣಗಾಡುವುದನ್ನು ಕಾಣವುದು ಒಂದು ನೆಲೆಯಾದರೆ, ಇನ್ನೊಂದು ನೆಲೆ ಗಂಡನ ಕುಡಿತದಿಂದ ದೈಹಿಕ ಮತ್ತು ಮಾನಸಿಕವಾಗಿ ಕಷ್ಟಗಳನ್ನು ಎದುರಿಸಿದರೂ ಮನೆಯಲ್ಲಿ ಮಕ್ಕಳು ಉಪವಾಸ ಬೀಳುತ್ತವೆ ಎಂದು ನಿತ್ಯವು ಮೂರೋಪ್ಪತ್ತಿನ ಊಟಕ್ಕಾಗಿ ಪರಾದಾಟ ನಡೆಸುತ್ತಾಳೆ. ಜೊತೆಗೆ ವ್ಯವಸ್ಥೆಯು ಹೆಣ್ಣನ್ನು ಕೇವಲ ಭೋಗ ವಸ್ತುವಾಗಿ ನೋಡಿದೆ ವಿನಃ ಅವಳದೇ ಆದ ಆಸೆ-ಆಕಾಂಕ್ಷೆಗಳು ಇದ್ದಾವೆ ಎಂಬುದನ್ನು ಆಲೋಚಿಸುವುದಿಲ್ಲ. ಏಕೆಂದರೆ ನೈತಿಕತೆ ಮತ್ತು ಅನೈತಿಕತೆಯನ್ನು ಸೃಷ್ಠಿ ಮಾಡಿ ಹೆಣ್ಣನ್ನು ಒಂದು ಕಡೆ ಪಾವಿತ್ರ್ಯತೆ ಎಂಬ ಕಲ್ಪನೆ ಮೂಡಿಸುವುದು ಒಂದು ಕಡೆ ಮಾಡಿದರೆ ಅದೇ ವ್ಯವಸ್ಥೆಯು ಅನೈತಿಕ ಸಂಬಂಧ ಇಡುವ ಹಾಗೆ ಸೃಷ್ಠಿ ಮಾಡಿ ಆ ಪದ್ಧತಿಗೆ ಒಳಗೊಳ್ಳಲೇಬೇಕಾದ ಒತ್ತಡವನ್ನು ತಂದರೂ ಕೂಡ ಆ ಆರೋಪವನ್ನು ಹೆಣ್ಣಿನ ಮೇಲೆ ಹಾಕಿ ಸಮಾಜದಲ್ಲಿ ಅವಳನ್ನು ನೋಡುವ ದೃಷ್ಟಿ ಕೋನವೇ ಕೆಳದರ್ಜೆಯಲ್ಲಿ ನೋಡುವಂತೆ ಮಾಡುತ್ತದೆ. ಅಂದರೆ, ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ಕೇವಲ ಬಳಕೆ ವಸ್ತುವಾಗಿ ತನ್ನ ಅನುಕೂಲಕ್ಕಾಗಿ ತಕ್ಕಂತೆ ಉಪಯೋಗ ಮಾಡಿಕೊಳ್ಳುತ್ತಾನೆ. ಎಲ್ಲಿ ತನಕ ಸಮಾಜದಲ್ಲಿ ಪ್ರಧಾನ ಧಾರೆಯ ವ್ಯವಸ್ಥೆಯು ನಿರಂತರವಾಗಿ ಇರುತ್ತದೋ ಅಲ್ಲಿಯ ತನಕ ಮಹಿಳೆಯರು ಜೀವನ ಸುಧಾರಣೆ ಆಗುವುದು ಕಷ್ಟಸಾಧ್ಯ. ಹೆಣ್ಣು ಎಂಬ ಕಾರಣಕ್ಕಾಗಿ (೩೬/೩೭) ಅನೇಕ ಲಿಂಗತಾರತಮ್ಯ ನೆಲೆಗಳನ್ನು ಅನುಭವಿಸುವರಲ್ಲಿಯೂ ಅವಳ ಬದುಕಿನ ಮೇಲೆ ಬಗೆಯ ಪ್ರತಿಕೂಲ ಪರಿಣಾಮಗಳು ಬೀರುವ ಸಂಗತಿಗಳಾಗಿವೆ.

ಸ್ತ್ರೀಯರು ಉದ್ಯೋಗ ಮಾಡುವ ಅವಶ್ಯಕತೆಯಿಲ್ಲವೆಂಬ ಭಾವನೆ ಹಿಂದೆ ಇತ್ತು. ಆದರೆ ಇಂದಿನ ಪರಿಸ್ಥಿತಿ ಬದಲಾಗಿದೆ. ಆಧುನಿಕತೆ ಬದಲಾಗುತ್ತಿದ್ದಂತೆ ಸಮಸ್ಯೆಗಳ ಸ್ವರೂಪ ಹೆಚ್ಚುತ್ತಿರುವ ಕಾರಣದಿಂದ ಪ್ರತಿಯೊಬ್ಬರೂ ದುಡಿಯಬೇಕೆಂಬ ಒತ್ತಡಗಳು ಹೆಚ್ಚಾಗುತ್ತಿದೆ. ಸ್ತ್ರೀ ಉದ್ಯೋಗವನ್ನು ಕನಿಷ್ಠವೆಂದು ಕಾಣುತ್ತಿದ್ದ ದೃಷ್ಟಿಕೋನ ಬದಲಾಗಿದೆ. ಇಂದು ಸ್ತ್ರೀ ಉದ್ಯೋಗವು ಪ್ರಗತಿಯ ಹೆಜ್ಜೆಯೆಂದು ಕಾಣುವ ದೃಷ್ಟಿ ಬರುತ್ತಿದೆ. ಉದ್ಯೋಗಸ್ಥ ಮಹಿಳೆಯರ ಸಮಸ್ಯೆಗಳು ಹಲವಾರು. ಈ ಸಮಸ್ಯೆಗಳೆಂದರೆ: ೧. ಸ್ತ್ರೀಯ ವೈವಾಹಿಕ ಜೀವನ ೨. ತರಬೇತಿ ಮತ್ತು ಶಿಕ್ಷಣ ೩. ಸಮಾಜದ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆ ೪. ಮನೆತನದ ಆರ್ಥಿಕ ಪರಿಸ್ಥಿತಿ ಮತ್ತು ಉದ್ಯೋಗಕ್ಕೆ ತೊಡಗಬೇಕಾದ ಅವಶ್ಯಕತೆ ಮತ್ತು ಆಸಕ್ತಿಗಳು ಇವುಗಳೆಲ್ಲದರ ಮೇಲೆಯೂ ಅವಲಂಬಿಸಿರುತ್ತದೆ. ಬದಲಾಗುವ ಆರ್ಥಿಕ ಪರಿಸ್ಥಿತಿ ಮತ್ತು ಮಾರ್ಪಾಡಾಗಿರುವ ವಿಚಾರದಿಂದಾಗಿ, ಪ್ರಗತಿಪರ ಮತ್ತು

ಪ್ರಗತಿಗಾಮಿ ರಾಷ್ಟ್ರಗಳಲ್ಲಿ ಮಹಿಳೆಯೂ ಪುರುಷನೊಡನೆ ದುಡಿದು ಸಂಸಾರದ ಭಾರಕ್ಕೆ ಹೆಗಲು ಕೊಡುವಂತೆ ಆಗಿದೆ. ಮತ್ತೊಂದು ಕೈ ದುಡಿಯುವುದರಿಂದ ಸಂಸಾರದ ಆರ್ಥಿಕ ಮುಗ್ಗಟ್ಟು ಹಗುರವಾಗುತ್ತದೆ ಎಂದು ಪುರುಷನಿಗೂ ಅರಿವಾಗಿದೆ. ಇದರಿಂದ ಮಹಿಳಾ ಉದ್ಯೋಗ ಹೆಚ್ಚು ಪ್ರೋತ್ಸಾಹವನ್ನು ಪಡೆಯುತ್ತಿದೆ.

ಪುರುಷನು ಶತಶತಮಾನಗಳಿಂದಲೂ ಮಹಿಳೆಯರನ್ನು ತನ್ನ ಅಧಿನದಲ್ಲೇ ಅಡಕವಾಗಿರಿಸಿ ಕೊಂಡಿರುವುದರಿಂದ ಅವಳ ಪ್ರತಿಕಾರ್ಯದ ಜವಾಬ್ದಾರಿಗಳು ಸಹ ಅವನ ಹಿಡಿತದಲ್ಲಿರುವುದನ್ನು ಕಾಣುತ್ತೇವೆ. ಶ್ರಮವಿಭಜನೆಯ ತಾತ್ವಿಕ ನೆಲೆಯಿಂದಲೇ ಪಶು ಪಕ್ಷಿಗಳು ಪಳಗಿಸಿದ ಹಾಗೆ ಮಹಿಳೆಯು ಆರ್ಥಿಕತೆಯ ಮೇಲೆ ಹತೋಟಿ ಸಾಧಿಸಿದಳು. ಮಾನವನ ಜೀವನದ ಸ್ಥಿತ್ಯಂತರ ಹಂತಗಳಲ್ಲಿ ಶ್ರಮವಿಭಜನೆಯ ಕೆಲಸ ಕಾರ್ಯಗಳಲ್ಲಿ ಮನೆಯ ಮಕ್ಕಳ ಪಾಲನೆ, ಪೋಷಣೆ ಕೌಟುಂಬಿಕ ವಲಯದ ಕಾರ್ಯಗಳು ಮಹಿಳೆಗೆ ಸೀಮಿತವಾದವು. ಪುರುಷನು ಹೊರಗಿನ ಉತ್ಪಾದಿತ ಸಂಪಾದನೆಯ ಮುಖ್ಯ ಜವಾಬ್ದಾರಿಯ ಆರ್ಥಿಕ ಹಿಡಿತವನ್ನು ಪುರುಷ ಸಾಧಿಸಿಕೊಂಡನು. ಈ ಹಿನ್ನೆಲೆಯಲ್ಲಿ ಮಹಿಳೆಯ ಕಾರ್ಯ ಅಪ್ರಸ್ತುತ ಗಟ್ಟಿ ಇಲ್ಲದ್ದು ಎನ್ನುವಂತೆ ರೂಪುಗೊಂಡಿತು. ಪುರುಷರೇ ಪ್ರಧಾನರು ಮಹಿಳೆಯರು ಅವರ ಅಡಿಯಾಳುಗಳು ಮಾತ್ರವೆಂದು ಮಹಿಳೆಯ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲಗೊಂಡಿತು. ಯಾವಾಗಿನಿಂದ ಅಡಿಯಾಳಾಗಿ ಕೆಲಸ ನಿರ್ವಹಿಸಲು ಸಾಧ್ಯವಾಯಿತೋ, ಅಲ್ಲಿಂದಲೇ ಪುರುಷ ವರ್ಗ ಮಹಿಳೆಯರನ್ನು ಎರಡನೆಯ ದರ್ಜೆಯ ಪೂಜೆಯಂತೆ ಕೆಲಸವಿಲ್ಲದವಳು ಎಂಬಂತೆ ಪರಿಗಣಿಸಿ ಸಮಯಕ್ಕೆ ಸಂದರ್ಭಕ್ಕನುಸಾರವಾಗಿ ಆಕೆಯನ್ನು ಉಪಯೋಗಿಸಬಹುದೆಂದು ಅರಿಕೆ ಮಾಡಿಕೊಂಡರು. ಈ ವ್ಯವಸ್ಥೆಗೆ ಪುರುಷ ವರ್ಗವು ಸತತ ಯಥಾಸ್ಥಿತಿಯನ್ನು ಕಾಯ್ದುಕೊಂಡು ಬರುತ್ತಿರುವುದು ಇಂದಿನವರೆಗೂ ಕಾಣಬಹುದು. ಪಿತೃಪ್ರಧಾನ ವ್ಯವಸ್ಥೆಯು ಬಂಡವಾಳ ಶಾಹಿ ವ್ಯವಸ್ಥೆಯ ಉಗಮಕ್ಕಿಂತ ಮುಂಚೆ ಇರುವುದರಿಂದಾಗಿಯೇ ಪುರುಷರು ಕುಟುಂಬದೊಳಗಿನ ಉದ್ಯೋಗ ನಿಯಂತ್ರಿಸುವುದನ್ನು ಆರಂಭಿಸಿದನು.

ಪ್ರಜಾಪ್ರಭುತ್ವ ಖಾಸಗಿ, ಸಾರ್ವಜನಿಕ ವಿಂಗಡಣೆಯನ್ನು ಮಾಡಿದ ನಂತರ ವ್ಯಾಪಕವಾದ ವಿನಿಮಯ ಮತ್ತು ಉತ್ಪಾದನಾ ಪರಿಕರಗಳ ಘಟನೆಗಳಿಂದಾಗಿ ಮಹಿಳೆಯ ಶ್ರಮ ಶಕ್ತಿಯ ಮೇಲೆ ನಿಯಂತ್ರಣವು ಸಾಧಿಸುವುದನ್ನು ಕಲಿತ ಪುರುಷನು ಮಹಿಳೆಯ ಮೇಲೆ ಸಾಧಿಸಿದ್ದ ನಿಯಂತ್ರಣವು ವೈಯಕ್ತಿಕ ನೆಲೆಯಿಂದ ಸಾಮಾಜಿಕ ನೆಲೆಗೆ, ಸಾಮಾಜಿಕ ಸಂಸ್ಥೆಗಳ ಮೂಲಕ ವ್ಯಾಪಿಸಿತು. ಈ ಕಾರ್ಯಕ್ಕಾಗಿ ಪುರುಷನು ಅನುಸರಿಸುತ್ತಿದ್ದ ತಂತ್ರವೆಂದರೆ ಲಿಂಗಾಧಾರಿತ ಶ್ರಮವಿಭಜನೆಯ ದುಡಿಮೆ

ಯಾಗಿತ್ತು. ಪ್ರತಿಯೊಂದು ಸಾಮಾಜಿಕ ಅಭಿವೃದ್ಧಿಯಲ್ಲೂ ಸ್ತ್ರೀ ಮತ್ತು ಪುರುಷ ಸಮನವಾದ ಪಾತ್ರವಿದ್ದೇ ಇರುತ್ತದೆ. ಸ್ತ್ರೀ ಮತ್ತು ಪುರುಷರು ಸಮಾಜದ ಎರಡು ಕಣ್ಣುಗಳಿದ್ದಂತೆ ಒಬ್ಬ ವ್ಯಕ್ತಿಯ ಎರಡು ಕಣ್ಣುಗಳು ಸುಂದರ ಹಾಗೂ ಆರೋಗ್ಯಕರವಾಗಿರುವಾಗ ಮಾತ್ರ ಅವನ ಮುಖ ಕಾಂತಿಯು ವರ್ಧಿಸುವುದರಿಂದ ಎರಡು ಕಣ್ಣುಗಳಿಗೂ ಸಮಾನ ಮಹತ್ವ ಕೊಡಬೇಕಾಗುವುದು ಅದರಂತೆಯೇ ಸಮಾಜದ ಏಳ್ಗೆಯಾಗಲು ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾದ ಹಕ್ಕು, ಬಾಧ್ಯತೆಗಳನ್ನು ಮತ್ತು ಸ್ಥಾನಮಾನಗಳನ್ನು ಒದಗಿಸಿಕೊಡಬೇಕು. ಸಮಾಜದ ಬೆಳವಣಿಗೆಯಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಪೂರಕವೇ ಹೊರತು ಮಾರಕವಲ್ಲ.

ಸ್ತ್ರೀಯರಿಗೆ ಯಾವ ಸಮಾಜವು ಯೋಗ್ಯವಾದ ಸ್ಥಾನ ಕಲ್ಪಿಸಿಕೊಟ್ಟಿರುವುದೋ ಆ ಸಮಾಜವು ಸುಸಂಸ್ಕೃತ ನಾಗರಿಕ ಸಮಾಜವೆನ್ನಿಸುವುದು. ಆದರೆ ಸಾಮಾಜಿಕ ಬೆಳವಣಿಗೆಯನ್ನು ಚಿಂತಿಸುವಾಗ ಪುರುಷನಿಗೆ ಕೊಡುವಷ್ಟು ಮಹತ್ವವನ್ನು ಸ್ತ್ರೀಗೆ ಕೊಡುತ್ತಿಲ್ಲವೆಂದೇ ಹೇಳಬಹುದು. ಹಿಂದಿನಿಂದಲೂ ಸ್ತ್ರೀಯನ್ನು ಅಬಲೆ ಎಂದು ಪರಿಗಣಿಸುತ್ತಾ ಆಕೆಯ ಮೇಲೆ ಅನ್ಯಾಯದ ಹೊರೆಯನ್ನು ಹೊರಿಸುತ್ತಾ ಬಂದಿರುವುದನ್ನು ನಾವು ಸ್ಪಷ್ಟವಾಗಿ ಕಾಣಬಹುದು. ಆದರೆ ಜೀವ ವಿಜ್ಞಾನದ ರೀತ್ಯಾ ಸ್ತ್ರೀ-ಪುರುಷ ನಿಗಿಂತಲೂ ಹೆಚ್ಚು ಕಾಲ ಬದುಕಲು ಸಾಧ್ಯವಾಗುವಂತಹ ಶಾರೀರಿಕ ರಚನೆಯನ್ನು ಹೊಂದಿದ್ದಾಳೆ. ಆದರೆ ಕೆಲವರು ವಾದಿಸುವುದೇನೆಂದರೆ ಸ್ತ್ರೀ-ಪುರುಷನಿಗಿಂತ ಕೆಳ ದರ್ಜೆ ಪಡೆದಿದ್ದಾಳೆಂದು ವಾದಿಸುತ್ತಾರೆ. ಈ ವಾದಕ್ಕೆ ವಿರೋಧವಾಗಿ ಸ್ತ್ರೀಯನ್ನು ಪುರುಷರೊಡನ ಹೋಲಿಸಿದಾಗ ಸ್ತ್ರೀ ಯಲ್ಲಿರುವ ರೋಮರಹಿತತೆ, ರೂಪಲಾವಣ್ಯ, ಸುಲಭ ಉಚ್ಚಾರಣೆ ಮಾತುಗಾರಿಕೆ, ಜಾಣ್ಮೆ, ಕೈಚಳಕ, ತಾಳ್ಮೆ, ಕರುಣೆ ಮೊದಲಾದ ಗುಣಗಳು ಆಕೆಯ ವಿಕಾಸವಾದಕ್ಕೆ ಅನುಗುಣವಾಗಿ ಇರುವಂತಹ ಸ್ಥಾನಕ್ಕಿಂತ ಇನ್ನೂ ಹೆಚ್ಚಿನ ಸ್ಥಾನವಿರಬೇಕೆಂಬುದನ್ನು ಸೂಚಿಸುತ್ತವೆ. ಸ್ತ್ರೀ-ಪುರುಷರ ಬಗ್ಗೆ ಸಾಮಾಜಿಕ ಸಾಂಸ್ಕೃತಿಕ ಮತ್ತು ಮಾನಸಿಕ ವಲಯಗಳಲ್ಲಿ ನಡೆದಿರುವ ಪರಿಶೋಧನೆಗಳು, ಸ್ತ್ರೀಯರ ವ್ಯಕ್ತಿತ್ವದತ್ತ ಗಮನಹರಿಸಿ ಆಕೆಯ ಸ್ಥಾನವನ್ನು ನಿಶ್ಚಯಿಸಿಲ್ಲ. ಗಂಡಸಿನ ಪುರುಷತ್ವ, ಹೆಣ್ಣಿನ ಸ್ತ್ರೀ ತತ್ವಗಳು ಸಾಮಾಜಿಕ ಸ್ವಾಭಾವಿಕವಾದವುಗಳಾಗಿವೆ. ಸಮಾಜದಲ್ಲಿ ಸಂದಿಗ್ಧತೆ, ಪ್ರಾಯಕ್ಕೆ ಬಂದಾಗ ವ್ಯಕ್ತಿಯ ನಡವಳಿಕೆ, ಬಾಹ್ಯ ಪ್ರಪಂಚ ಮತ್ತು ಸಾಮಾಜಿಕ ಪರಿಸರ ವ್ಯಕ್ತಿಯ ಮೇಲೆ ಉಂಟು ಮಾಡುವ ಪ್ರಭಾವಗಳು ಇವುಗಳಲ್ಲಿ ಸ್ತ್ರೀ ಮತ್ತು ಪುರುಷನ ಪ್ರಕೃತಿಯನ್ನು ರೂಪಿಸುತ್ತವೆ.

ಸಮಾಜವು ಪರಿಭಾವಿಸಿಕೊಂಡ ಬಂದ ರೀತಿಯಲ್ಲಿ ಸಂತಾನೋತ್ಪತ್ತಿಯ ದುಡಿಮೆಯನ್ನು ಮಹಿಳೆಯರಿಗೆ ಹುಟ್ಟಿನಿಂದಲೇ ರೂಪಿಸಿಕೊಳ್ಳುವ ಹಾಗೆ ಸಾಮಾಜೀಕರಣ ಪ್ರಕ್ರಿಯೆ ಕುಟುಂಬಗಳಲ್ಲಿ

ಜಾಗೃತಗೊಂಡಿರುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಸಾಕಷ್ಟು ಬದಲಾವಣೆಗಳಾದರೂ ಈ ದುಡಿಮೆಗಳಿಂದ ಮಹಿಳೆಯರಿಗೆ ಕೊನೆ ದೊರೆಯುತ್ತಿಲ್ಲ. ಮಹಿಳೆಯಾಗಿ ಜನಿಸಿದ ಸಲುವಾಗಿಯೇ ಅವಳು ಲಿಂಗ ನಿರ್ದಿಷ್ಟ ಕೆಲಸಗಳನ್ನು ಮಾಡಬೇಕಾಗಿ ಬಂದಿದೆ. ನಮ್ಮ ಸಮಾಜದಲ್ಲಿ ಕೂಡ ದುಡಿಮೆಗಾರ ಎಂಬ ಪದವನ್ನು ಬಳಸಿದಷ್ಟು ಸುಲಭವಾಗಿ ದುಡಿಮೆದಾರಳು ಎಂಬ ನುಡಿಯನ್ನು ಎಲ್ಲಿಯೂ ಬಳಸುವುದು ಕಂಡುಬರುವುದಿಲ್ಲ. ಅವಳ ಶ್ರಮವು ಕಣ್ಣಿಗೆ ಕಂಡರು ಕಾಣದಂತೆ ಗಣನೆಗೆ ಬಾರದಂತೆ ಅಗೋಚರವಾಗಿದೆ. ದುಡಿಮೆಯನ್ನುವುದು ಪುರುಷರಿಗೆ ಸಂಬಂಧಿಸಿ ದಂತೆ ಸಾಮಾಜಿಕವಾಗಿದ್ದರೆ, ಮಹಿಳೆಗೆ ಸಂಬಂಧಿಸಿದಂತೆ ಜೈವಿಕವಾಗಿದೆ. ದುಡಿಮೆಯನ್ನುವುದು ಪುರುಷರಿಗೆ ಮೌಲ್ಯಯುತ್ತವಾದರೆ, ಮಹಿಳೆಯ ವಿಷಯದಲ್ಲಿ ಅದೃಶ್ಯತೆಯನ್ನು ಕಂಡುಕೊಳ್ಳಬಹುದು. ಕೌಟುಂಬಿಕ ಮತ್ತು ಸಂತಾನೋತ್ಪತ್ತಿ ದುಡಿಮೆಯೊಂದಿಗೆ ಉದ್ಯೋಗಸ್ಥಳಾಗಿ ಮಹಿಳೆಯು ಅದಿಕಾಲ ದಿಂದಲೂ ನಿರಂತರವಾಗಿ ದುಡಿಯುತ್ತಾ ಬಂದಿದ್ದಾಳೆ. ಆದರೆ ಅವಳಿಗೆ ಯಾವುದೇ ರೀತಿಯ ಆರ್ಥಿಕ, ಸಾಮಾಜಿಕ ಸ್ಥಾನಮಾನಗಳು ನೀಡಿರುವುದಿಲ್ಲ. ಇದನ್ನು ಮಹಿಳೆಯ ದುರದೃಷ್ಟವೆನ್ನದೇ ಇದು ಪುರುಷಶಾಹಿ ವ್ಯವಸ್ಥೆಯಲ್ಲಿ ಲಿಂಗ ತಾರತಮ್ಯ ಸಮಾಜದ ಕುತಂತ್ರ ಎನ್ನುಲು ಅಡ್ಡಿಯಿಲ್ಲ.

ಮೊದಲಿನಿಂದಲೂ ಈ ವೃತ್ತಿಗಳಲ್ಲಿ ಎಡಬಿಡದೆ ಕೆಲಸಗಳಿಗೆ ಹೊಂದಿಕೊಳ್ಳುವ ಹಾಗೆ ಬೌದ್ಧಿಕ ಪರಿಣಾಮ ಬೀರಿದ್ದಾರೆ. ಇದರಿಂದ ಮಹಿಳೆಯರು ತಮ್ಮ ಕೆಲಸಗಳೆಂದರೆ ಸಂತಾನೋತ್ಪತ್ತಿ ಕೌಟುಂಬಿಕ ಹಾಗೂ ಈ ವೃತ್ತಿಗಳ ದುಡಿಮೆ ಎನ್ನುವ ಹಾಗೆ ಪರಿವರ್ತಿತ ಮಾಡಿದ್ದಾರೆ. ಮಧ್ಯಮ ವರ್ಗಗಳಲ್ಲಿ ಮಹಿಳೆಯ ದುಡಿಮೆಯನ್ನು ಅನುತ್ಪಾದಕ ಸಾಲಿಗೆ ಸೇರಿಸಿ ಅವಳ ಶ್ರಮಶಕ್ತಿಯನ್ನು ನಿರುತ್ಪಾದಕ ಎಂಬ ರೀತಿಯಲ್ಲಿ ನಿರೂಪಿಸಿದ್ದಾರೆ. ಇದು ಇಂದು ನಿನ್ನೆಯದಲ್ಲ, ಕಾಲಕಾಲಾಂತರಗಳಿಂದ ನಡೆದು ಕೊಂಡು ಬಂದ ವ್ಯವಸ್ಥಿತಿ ಎಂದರೂ ತಪ್ಪಾಗಲಿಕ್ಕಿಲ್ಲ. ಮಹಿಳೆಯರು ಈ ಪುರುಷಶಾಹಿ ಸಮಾಜ ದಿಂದ ತಮ್ಮ ಸ್ವಹಿತಾಸಕ್ತಿಗಳನ್ನು ಬಲಿಕೊಟ್ಟು ಪಿತೃಪ್ರಧಾನ ಕೌಟುಂಬಿಕಗಳ ಅಡಿಯಲ್ಲಿಯೇ ತಮ್ಮ ಸ್ವಹಿತ ಭಾವಿಸಿದ್ದಾರೆ. ಇದರಿಂದ ತಮ್ಮನ್ನು ಅಧೀನರು ತಾವು ದುಡಿಮೆಗಾರರಲ್ಲ, ಕುಟುಂಬಕ್ಕೆ ಆರ್ಥಿಕತೆ ತಮ್ಮದೂ ಕಾಣಿಕೆ ಏನೇನೂ ಇಲ್ಲ ಎಂಬ ಭಾವನೆಯೊಂದಿಗೆ ದಿನಗಳನ್ನು ಕಳೆಯುತ್ತಿದ್ದಾರೆ. ಹೀಗೆ ಮಹಿಳೆಯರಲ್ಲಿ ಅಂತರ್ಗತಗೊಂಡಿರುವ ಈ ಭಾವನೆಯಿಂದಲೇ ಮುಳುಗಿ ದ್ದಾರೆ. ಇದರಿಂದಾಗಿಯೇ ಮಹಿಳೆಯರನ್ನು ಶೋಷಿಸುವ ಸಮಾಜಕ್ಕೆ ಮತ್ತು ಪುರುಷಶಾಹಿಗೆ ಸರಳ ವಾಗಿಸಿಬಿಟ್ಟಿದೆ.

ಪುರುಷನ ಜೀವನಗಿಂತಲೂ ಸ್ತ್ರೀಯ ಜೀವನವು ನಾನಾ ರೀತಿಯ ಎಡರು-ತೊಡರುಗಳಿರುವುದನ್ನು

ನಾವು ಕಾಣಬಹುದು. ಸ್ತ್ರೀ ಗರ್ಭಧರಿಸಿ ಮಗುವನ್ನು ಜನ್ಮ ನೀಡುವುದು ಕಷ್ಟಕರ ಘಟನೆಯೇ ಸರಿ ಆದರೆ ಆಕೆ ಈ ಅವಸ್ಥೆಯನ್ನು ಭಾವಿಸಿಯೂ ಸಹ ಸಮಾಜದಲ್ಲಿ ಆಕೆಯ ಸ್ಥಾನಮಾನಗಳು ಉನ್ನತ ಮಟ್ಟಕ್ಕೆರದಿರುವುದಕ್ಕೆ ಕಾರಣಗಳನ್ನು ಸಂಶೋಧಿಸಬೇಕಾಗಿದೆ. ನಮ್ಮ ನಡವಳಿಕೆಗಳು ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರಭಾವಗಳಿಕ್ಕೊಳಪಟ್ಟು ನಮ್ಮ ಮನಸ್ಸಿನಿಂದ ನಿರ್ದೇಶಿತವಾಗಿರುತ್ತವೆ. ವ್ಯಕ್ತಿಯ ಇಚ್ಛಾಶಕ್ತಿ ಮನೋಬಲಗಳಿಂದ ಈ ನಡವಳಿಕೆಗಳು ರೂಪುಗೊಳ್ಳುತ್ತಿವೆ. ಇದು ಗಂಡು, ಇದು ಹೆಣ್ಣು, ಒಂದು ಒಳ್ಳೆಯದು, ಮತ್ತೊಂದು ಕೆಟ್ಟದ್ದು, ಒಂದು ಗೌರವಾರ್ಹ ಮತ್ತೊಂದು ನಿಂದ್ಯಾತ್ಮಕ ಎಂಬ ಭಾವನೆಗಳು ಸಾಮಾಜಿಕವಾಗಿ ಬರುತ್ತಿವೆ. ಉದ್ದವಾದ ಕೂದಲನ್ನಿಳಿಬಿಟ್ಟು, ಒಂದೇ ವಸ್ತ್ರವನ್ನು ನಿರ್ದಿಷ್ಟ ರೀತಿಯಲ್ಲಿ ಧರಿಸಿ ಕುತ್ತಿಗೆಯಲ್ಲಿ ಆಭರಣಗಳನ್ನು ಧರಿಸಿಕೊಂಡು ಓಡಾಡುವವರನ್ನು ಸ್ತ್ರೀಯರೆಂದೂ ತಲೆಕೂದಲನ್ನು ಕತ್ತರಿಸಿ, ಪಂಚೆ ಇಲ್ಲವೇ ಪ್ಯಾಂಟ್‌ಧರಿಸಿ ಓಡಾಡುವವರನ್ನು ಪುರುಷರೆಂದು ಭಾವಿಸುವುದು ಸಾಮಾಜಿಕ ನಡವಳಿಕೆಯೇ ಆಗಿರುತ್ತದೆ.

ಸ್ತ್ರೀಯ ಸ್ಥಾನಮಾನಗಳು ಸಮಾಜದಿಂದ ನಿರ್ಧರಿತವಾಗಿರುತ್ತವೆ. ತಮ್ಮ ಬಗ್ಗೆ ಸಮಾಜದ ಕಲ್ಪನೆಗಳು, ಮೌಲ್ಯಧಾರಗಳು, ಭಾವನೆಗಳು, ಸಾಂಪ್ರದಾಯಕ ನಂಬಿಕೆ ಇಟ್ಟಿರುವ ಆದರ್ಶ ಇವುಗಳಿಂದ ಪ್ರಬಾವಿತರಾಗಿ ಮತ್ತು ಅವುಗಳನ್ನೊಪ್ಪಿಕೊಂಡು ಸ್ತ್ರೀ-ಪುರುಷರು ತಮ್ಮ ಜೀವಿತವನ್ನು ರೂಪಿಸಿಕೊಳ್ಳುತ್ತಾರೆ. ಸ್ತ್ರೀಯ ನಡವಳಿಕೆ ರೂಢಿಸಿಕೊಂಡಿರುವ ನಡವಳಿಕೆಯೇ ಇಲ್ಲವೇ ದೈಹಿಕ ಮತ್ತು ಮಾನಸಿಕ ಪರಿಸ್ಥಿತಿಗಳಿಗನುಗುಣವಾಗಿ ನಿರ್ಧಾಂಠವಾದ ನಡವಳಿಕೆಯೇ ಎಂದು ಹೇಳುವುದು ಕಷ್ಟವಾಗುತ್ತದೆ. ಈ ಸಮಸ್ಯೆಯನ್ನು ಬಿಡಿಸುವುದು ಸುಲಭವೇನಲ್ಲ. ಆಶ್ಚರ್ಯಕರ ಸಂಗತಿ ಎಂದರೆ, ಸ್ತ್ರೀಯ ಮನೋಧರ್ಮವನ್ನು ಅಭ್ಯಾಸಿಸುವ ಅತಿ ಬುದ್ಧಿವಂತನೂ ಕೂಡ. ಸ್ತ್ರೀಯ ವ್ಯಕ್ತಿತ್ವ, ಗುಣ ಮತ್ತು ನಡವಳಿಕೆಗಳ ಬಗ್ಗೆ ವಿವಾದತ್ಮಕವಾದ, ಅಪೂರ್ಣವಾದ ವರ್ಣನೆಗಳನ್ನು ಕೊಡುತ್ತಾರೆ. ಮೀನಿನ ಹೆಜ್ಜೆಗುರುತಿಸಬಹುದು ಆದರೆ ಸ್ತ್ರೀಯ ಮನಸ್ಸನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲ ಎಂಬಂತೆ ಸ್ತ್ರೀಯ ವಿಷಯದಲ್ಲಿ, ಪೂರ್ವಕಲ್ಪಿತ ಅಭಿಪ್ರಾಯಗಳಿಂದ ಪ್ರಭಾವಿತರಾಗದೇ, ಪಕ್ಷಪಾತವಿಲ್ಲದೆ ಚರ್ಚೆ, ವಾಗ್ವಾದ ಇಲ್ಲವೇ ಅಭ್ಯಾಸವನ್ನು ನಡೆಸುವ ವ್ಯಕ್ತಿಗಳು ಅಪರೂಪ.

ಸಾಹಿತ್ಯ, ಗಾದೆಗಳು, ಸಂಪ್ರದಾಯ ಪದ್ಧತಿ ಇವೇ ಮೊದಲಾದವುಗಳ ಮೂಲಕ ಪ್ರಚಲಿತ ವಾಗಿರುವ ಸ್ತ್ರೀ ಸಂಬಂಧವಾದ ತಪ್ಪು ಭಾವನೆಗಳನ್ನು ತೊಡೆದು ಹಾಕದೆ ಹೊರತು ಸಮಾಜದಲ್ಲಿ ಸ್ತ್ರೀಯ ಅಂತಸ್ತು ಕಾಣಲಾರದು. ಸ್ತ್ರೀಯರು ತೋರುವ ಮುಖಭಾವನೆಗಳು, ಅವರ ವಾದಸರಣಿ ತರ್ಕಬದ್ಧವಾಗಿಲ್ಲದಿರುವುದು, ಅನುಭವಗಳನ್ನು ಜೀವತದಲ್ಲಿ ಹೊಂದಿಸಿಕೊಳ್ಳುವುದರಲ್ಲಿ ತೋರುವ

ಅಸಮರ್ಥತೆ ಇವುಗಳೆಲ್ಲವೂ ಸ್ತ್ರೀಯರಲ್ಲಿ ಮಂದ ಬುದ್ಧಿಯ ಚಿಹ್ನೆಯೆಂದು ಭಾವಿಸಲಾಗುವುದು. ವಿವೇಚನೆಯಲ್ಲಿ ಸ್ತ್ರೀ ಕೆಳಮಟ್ಟದವಳೆಂಬುದನ್ನು ಯಾವ ಸಿದ್ಧಾಂತವೂ ಸೂಚಿಸುವುದಿಲ್ಲ. ಆದರೆ ಸ್ತ್ರೀಯ ತರ್ಕಶಕ್ತಿ ಕಡಿಮೆ ಎಂಬುದನ್ನು ಮಾತ್ರ ಒಪ್ಪಿಕೊಳ್ಳಬಹುದು. ಸ್ತ್ರೀಯು ತನ್ನ ಭಾವನೆಗಳನ್ನು ಮಾತಿಗೆ ಬದಲಾಗಿ ಮೌನದಲ್ಲಿ ತೋರಿಸುವ ಶಕ್ತಿಯನ್ನು ಹೊಂದಿದ್ದಾಳೆ. ವಸ್ತುಗಳ ಗೂಢಾರ್ಥವನ್ನು ತಿಳಿಯುವ ಚಾತುರ್ಯ ಸ್ತ್ರೀಯರಿಗಿದೆ. ಸ್ತ್ರೀಯ ಮೃದುಸ್ವಭಾವ ಮತ್ತು ತಾಳ್ಮೆ ಕುಟುಂಬ ಜೀವನಕ್ಕೆ ಅವಶ್ಯಕ. ಈ ಗುಣಗಳಿಂದಲೇ ಮಕ್ಕಳನ್ನು ಶೈಶವಾವಸ್ಥೆಯಲ್ಲಿ ಆಕೆ ಪುರುಷರಿಗಿಂತ ಚೆನ್ನಾಗಿ ಪೋಷಿಸಬಲ್ಲಳು. ಹೆಂಗಸರು ಮಕ್ಕಳೊಡನೆ ಬೇಗ ಹೊಂದಿಕೊಳ್ಳುವರಲ್ಲದೆ ಅವರು ಮಕ್ಕಳನ್ನು ಮಮತೆಯಿಂದ ನೋಡಿಕೊಳ್ಳುತ್ತಾರೆ.

ಪುರುಷ ಕಣ್ಣಿಂದ ನೋಡಲಾಗದ್ದನ್ನು ಸ್ತ್ರೀ ಹೃದಯದ ಮೂಲಕ ಕಂಡುಕೊಳ್ಳುತ್ತಾಳೆ. ಜನರನ್ನು ಅರ್ಥಮಾಡಿಕೊಳ್ಳುವ ಜಾಣ್ಮೆಯಲ್ಲಿ ಸ್ತ್ರೀ ಪುರುಷನಿಗಿಂತ ಮುಂದಿದ್ದಾಳೆ. ಸ್ತ್ರೀಯ ಬುದ್ಧಿ ಸೂಕ್ಷ್ಮವಾದುದು. ಸೂಚನೆ ಅನುಕರಣೆ ಹಾಗೂ ಸಹಾನೂಭೂತಿ ಇವುಗಳ ಆಧಾರದ ಮೇಲೆ ಸಾಗುತ್ತಿರುವ ಸಾಮಾಜಿಕ ಜೀವನದಲ್ಲಿ ಸಂವೇದನಾತ್ಮಕ ಸಂಬಂಧಗಳನ್ನು ಬೆಳೆಸುವಲ್ಲಿ ಸ್ತ್ರೀ-ಪುರುಷನಿಗಿಂತ ಮುಂದಿದ್ದಾಳೆ. ಸ್ತ್ರೀಯಲ್ಲಿ ವಿಕಾಸ, ತಾಳ್ಮೆ, ಸಹಾನುಭೂತಿ ಇವೇ ಮುಂತಾದ ಪ್ರವೃತ್ತಿಗಳು ಕಾಣಿಸಿಕೊಳ್ಳುತ್ತವೆ. ಸ್ತ್ರೀಯ ಮನವು ಎಲ್ಲ ಮೃದು ಸ್ವಭಾವಗಳಿಗೂ ಭಂಡಾರವಾಗಿರುವುದಲ್ಲದೆ ಅದರಲ್ಲಿ ಪ್ರೇರಕ ಶಕ್ತಿಯು ಹುದುಗಿದೆ. ಸ್ತ್ರಿಯ ಮನಸ್ಸು ದೌರ್ಬಲ್ಯದಿಂದ ಕೂಡಿದೆ. ಇಷ್ಟೆಲ್ಲಾ ಉತ್ತಮ ಅಂಶಗಳಿದ್ದರೂ ಸ್ತ್ರೀಯನ್ನು ಎರಡನೇ ದರ್ಜೆಯ ಪ್ರಜೆಯಂತೆಯೇ ಗುರುತಿಸಲಾಗುತ್ತಿದೆ. ಕೈಗಾರಿಕಾ ಕ್ರಾಂತಿಯ ನಂತರ ಈ ಸ್ಥಾನಮಾನಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದಿದೆ ಎನ್ನಬಹುದು. ಪುರಾತನ ಸಮಾಜದಲ್ಲಿ ಸ್ತ್ರೀಯರು ಹೆಚ್ಚು ಅಪಾಯಕಾರಿಯಲ್ಲದೆ ಗೃಹಕೃತ್ಯಗಳಲ್ಲಿ ತೊಡಗಿರುತ್ತಿದ್ದರು. ಜೀವನಕ್ಕೆ ಗತಿ ಇಲ್ಲದಿದ್ದರು, ೧೯ನೇ ಶತಮಾನದಲ್ಲಿ ಮಹಿಳೆಯೊಬ್ಬಳು ಹೊರಗೆ ದುಡಿಯಲು ಹೋಗುವಂತಿರಲಿಲ್ಲ. ಆದರೆ ೨೦ನೇ ಶತಮಾನದಲ್ಲಿ ಈ ಪರಿಸ್ಥಿತಿ ಸಂಪೂರ್ಣ ಬದಲಾಯಿತು. ಮನೆ ಕೆಲಸಗಳನ್ನು ತಪ್ಪಿಸಿಕೊಳ್ಳುವ ಸಲುವಾಗಿ ಆಕೆ ಕೆಲಸ ಮಾಡುತ್ತಿರಲಿಲ್ಲ. ಆದರೆ ಮನೆಯ ಆರ್ಥಿಕ ಪರಿಸ್ಥಿತಿ ಅವಳನ್ನು ಕೆಲಸಕ್ಕೆ ಹೋಗುವಂತೆ ಪ್ರೇರೆಪಿಸುತ್ತಿತ್ತು. ಹಣವು ದುಡಿಮೆಗೆ ಹೆಚ್ಚಿನ ಒತ್ತಡವನ್ನು ನೀಡಿದೆ. ವೃತ್ತಿರಂಗವನ್ನು ಸ್ತ್ರೀಯು ಪ್ರೇರೇಪಿಸಿದುದರಿಂದ ಅವಳ ಕ್ಷೇತ್ರ ವಿಸ್ತಾರವಾದುದು ಮಾತ್ರವಲ್ಲದೇ, ಆಕೆಯ ಜ್ಞಾನ, ದೃಷ್ಟಿಕೋನ ಮತ್ತು ಸಾಮಾಜಿಕ ವ್ಯಕ್ತಿತ್ವ ಬೆಳೆಯುತ್ತದೆ. ಡಾ. ದಾಸ ರವರು ಅವಲೋಚಿಸಿರುವಂತೆ "ಸಾಮಾಜಿಕ

ಸಂಪ್ರದಾಯಗಳ ಸಂಕೋಲೆಗಳಿಂದ, ಉದ್ಯೋಗಸ್ಥ ಹೆಣ್ಣು ದೂರವಿರಬಹುದು. ಕೈಗಾರಿಕಾ ಕೇಂದ್ರಗಳು ಆಕೆಗೆ ಹೊಸ ಸಂಬಂಧಗಳನ್ನು ಉಂಟು ಮಾಡುವುದಲ್ಲದೆ, ಹೊಸ ಆಲೋಚನೆಗಳು, ಉನ್ನತ ಶಿಕ್ಷಣ ಇನ್ನಿತರವುಗಳನ್ನು ವಿಪುಲವಾಗಿ ಒದಗಿಸುವುದರಿಂದ ಆಕೆಯ ವ್ಯಕ್ತಿತ್ವ ವಿಕಸನ ಹೊಂದುತ್ತದೆ. ವರ್ಗ ಹೋರಾಟದಲ್ಲಿಯೂ ಸ್ತ್ರೀ ಹೆಚ್ಚಿನ ರೀತಿಯಲ್ಲಿ ಪಾಲ್ಗೊಂಡು, ತನ್ನ ಹಕ್ಕು-ಬಾಧ್ಯತೆಗಳಿಗಾಗಿ, ಪ್ರತಿಭಟನೆ ಸಲ್ಲಿಸಲು ಅವಕಾಶವಿದೆ.

ಸ್ತ್ರೀಯರಿಗೆ ಉದ್ಯೋಗವಕಾಶಗಳು ಸೀಮಿತವಾಗಿವೆ ಅವರುಗಳು ಉಪಾಧ್ಯಾಯನಿಯರಾಗಿ, ನರ್ಸ್‌ಗಳಾಗಿ, ಗುಮಾಸ್ತರಾಗಿ ಸೇವೆಸಲ್ಲಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಎಲ್ಲ ರಂಗಗಳಾದ ಕಾನೂನು, ವ್ಯಾಪಾರ ಮತ್ತು ಚಿತ್ರಿಕಾರಂಗಗಳನ್ನು, ಡಾಕ್ಟರ್, ಇಂಜನಿಯರಿಂಗ್ ಪ್ರವೇಶ ಪಡೆಯುತ್ತಿದ್ದಾಳೆ. ಇಂತಹದೇ ಪರಿಸ್ಥಿತಿಯನ್ನು ನಾವು ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಕಾಣಬಹುದು. ಆಂಗ್ಲೋ ಇಂಡಿಯನ್ನರು, ಕ್ರಿಶ್ಚಿಯನ್ನರು, ಸಿಂಧಿಗಳು, ಪಾರ್ಸಿಗಳು ಹೆಂಗಸರು ಕೆಲಸಕ್ಕೆ ಹೆಚ್ಚು ಪ್ರಮಾಣದಲ್ಲಿ ಬರುತ್ತಾರೆ. ಕೆಲಸಕ್ಕೆ ಬರುವ ಮುಸ್ಲಿಂ ಸ್ತ್ರೀಯರ ಸಂಖ್ಯೆಯೂ ಬಹಳ ಕನಿಷ್ಠ ಪ್ರಮಾಣದಲ್ಲಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ಹಿಂದೂಗಳಲ್ಲಿ ಮುಸ್ಲಿಂಗಳಲ್ಲಿ ಮಧ್ಯಮ ವರ್ಗದ ಸ್ತ್ರೀಯರು ವ್ಯಾಪಾರಗಳಲ್ಲಿ ಕೆಲಸ ಮಾಡಲು ಒಪ್ಪಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಪರಿಸ್ಥಿತಿಯಲ್ಲಿ ಬದಲಾವಣೆ ಕಂಡುಬಂದಿದೆ. ಕೆಲವರು ಜೀವವಿಮಾ ಏಜೆಂಟರಾಗಿ, ಸೇಲ್ಸ್‌ಗರ್ಲ್‌ಗಳಾಗಿ ಸಿನಿಮಾ ತಾರೆಯಾಗಿ ಕೆಲಸ ಮಾಡುತ್ತಿದ್ದಾರೆ.

ಆಧುನಿಕ ಜಗತ್ತಿನಲ್ಲಿ ಮಹಿಳೆಯರ ಪಾತ್ರ ಕೇವಲ ಮನೆ ಮಕ್ಕಳ ಪಾಲನೆ ಪೋಷಣೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಜೀವನ ಮಟ್ಟ ಏರಿಕೆಯಿಂದಾಗಿ, ಆರ್ಥಿಕ ಮುಗ್ಗಟ್ಟಿನಿಂದಾಗಿ, ಎಲ್ಲಾ ಕುಟುಂಬಗಳು ಚಡಪಡಿಸುತ್ತಿವೆ. ಕುಟುಂಬವನ್ನು ಸ್ವಾವಲಂಬಿಗಳಾಗಲು ಸ್ತ್ರೀಯರ ಸಹಾಯ ಈಗ ಅಗತ್ಯವಾಗಿದೆ. ಈ ಕಾರಣದಿಂದಾಗಿ ಮಹಿಳೆ ಗೃಹ ಶಿಕ್ಷಣದೊಂದಿಗೆ ವೃತ್ತಿ ಶಿಕ್ಷಣವನ್ನು ಪಡೆಯಬೇಕಾಗಿದೆ. "Man for the field, women for the health" ಎನ್ನುವಂತೆ, ಕೆಲವೆ ದಶಕಗಳ ಹಿಂದೆ ಮಹಿಳೆಯ ಸ್ಥಾನ ಮನೆ ಎಂಬ ಅಭಿಪ್ರಾಯವಿತ್ತು. ಆದರೆ ಶಿಕ್ಷಣ ಪಡೆದ ಮಹಿಳೆಯರು ಈಗ ಉದ್ಯೋಗದ ಎಲ್ಲ ರಂಗಗಳಲ್ಲಿಯೂ ಪುರುಷನಿಗೆ ಸರಿಸಮಾನವಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಜೀವನಮಟ್ಟದ ಏರಿಕೆ, ಆರ್ಥಿಕವಾಗಿ ಸ್ವಾತಂತ್ರ್ಯ ಪಡೆಯಬೇಕೆಂಬ ಹಂಬಲವು ಕೆಲವು ಸ್ತ್ರೀಯರು ಉದ್ಯೋಗ ಮಾಡುವುದಕ್ಕೆ ಕಾರಣವಾದರೆ, ವೈಧ್ಯವ್ಯ ಪ್ರಾಪ್ತಿಯಿಂದಲ್ಲೋ, ದಾಂಪತ್ಯ ವಿಚ್ಛೇಧನದಿಂದಲೊ, ಕುಟುಂಬದ ಆರ್ಥಿಕ ಮುಗ್ಗಟ್ಟಿನಿಂದಲೊ, ಇಂಥ ಇತರ ಅನಿವಾರ್ಯ

ಆದರೆ ಆಧುನಿಕ ಸಮಾಜದಲ್ಲಿ ವ್ಯಕ್ತಿ ನಿರ್ವಹಿಸಬೇಕಾದ ಪಾತ್ರಗಳ ಸಂಖ್ಯೆ ಬೆಳೆಯುತ್ತಾ ಹೋಗುತ್ತಿದೆ. ಇದರಿಂದ ಪಾತ್ರ ಘರ್ಷಣೆ (Role Conflict) ಉಂಟಾಗುತ್ತಿದೆ. ವ್ಯಕ್ತಿಗತ ಎಲ್ಲಾ ಪಾತ್ರಗಳನ್ನು ಸಮರ್ಪಕವಾಗಿ ನಿರ್ವಹಿಸಲಾಗುವುದಿಲ್ಲ. ಕೆಲವು ಪಾತ್ರಗಳು ವ್ಯಕ್ತಿಯ ಮಾನಸಿಕ ಮತ್ತು ದೈಹಿಕ ಶಕ್ತಿಯನ್ನು ಸಂಪೂರ್ಣವಾಗಿ ಹೀರಿ ಬಿಡುತ್ತವೆ. ಆದರೂ ವ್ಯಕ್ತಿ ಮಾಡಲೇಬೇಕಾದ ಇನ್ನೂ ಅನೇಕ ಪಾತ್ರಗಳು ಉಳಿದಿರುತ್ತವೆ. ಈ ದಿಶೆಯಲ್ಲಿ ಆಧುನಿಕ ಸ್ತ್ರೀ ಅನೇಕ ಸಮಸ್ಯೆ ಗಳನ್ನೆದುರಿಸುತ್ತಿದ್ದಾಳೆ. ಸ್ತ್ರೀಯಾಗಿ ಆಕೆ ನಿರ್ವಹಿಸಬೇಕಾದ ಅಥವಾ ಆಕೆಯಿಂದಲೇ ಸಾಧ್ಯವಾಗು ವಂತಹ ಹಲವು ಪಾತ್ರಗಳನ್ನು ಅವಳಿಗೆ ಇಷ್ಟವಿರಲಿ ಬಿಡಲಿ ನಿರ್ವಹಿಸಲೇಬೇಕಾಗುತ್ತದೆ.

ಸ್ತ್ರೀಯರು ಉದ್ಯೋಗಕ್ಕೆ ಹೋಗುತ್ತಿರುವುದರಿಂದ ತಮ್ಮ ಕಾಲ ಮೇಲೆ ತಾವು ನಿಲ್ಲುವ ಹಾಗೆ ಆಗಿದೆ. ಈಗ ಅವಳು ಸ್ವಾವಲಂಬಿ ಸ್ವತಂತ್ರವಾಗಿ ಬಾಳುವಂತಿದೆ. ಅಷ್ಟೇ ಅಲ್ಲದೆ ಆಕೆ ಇನ್ನಿತರರನ್ನು ಬಾಳಿಸುವಂತೆಯೂ ಆಗಿದೆ. ಮನೆಯಲ್ಲಿ ಚಿಕ್ಕ ತಮ್ಮ ತಂಗಿಯರಿದ್ದರೆ, ಅವರ ವಿದ್ಯಾಭ್ಯಾಸ ಜೀವನಕ್ಕೆ, ತಂದೆಗೆ ಕಡಿಮೆಯಾದ ಆದಾಯವನ್ನು ತುಂಬಲು ಹೆಣ್ಣು ನೇರವಾಗುವ ಸಾಧ್ಯತೆ ತೊರಕಿದೆ. ಅವಳು ಗಂಡನ ಆದಾಯಕ್ಕೂ ನೇರವು ನೀಡಬಹುದು. ಹಿಂದೆ ಸಂಕುಚಿತ ವಾತಾವರಣದಲ್ಲಿ ಬೆಳೆದ ಹೆಣ್ಣು ಸಹಜವಾಗಿ ಅಂಜುಬುರುಕಿ, ಸಿನಿಕಳು ಆಗಿರುತ್ತಿದ್ದಳು. ಈಗ ದುಡಿಮೆಯಲ್ಲಿ ನಾಲ್ಕಾರು ಜನಗಳ ಜೊತೆ ಕೆಲಸ ಮಾಡುವುದರಿಂದ ಆತ್ಮಸ್ಥೈರ್ಯ ಹೊಂದುತ್ತಿದ್ದಾಳೆ. ಸಾಮಾಜಿಕವಾಗಿ ಘನತೆಯನ್ನು ಪಡೆಯುತ್ತಾಳೆ. ಸಂಸಾರದ ಆದಾಯವನ್ನು ಹೆಚ್ಚಿಸುವುದರ ಮೂಲಕ ಮಹಿಳೆಯರ ಜೀವನದ ಮಟ್ಟವನ್ನು ಉದ್ಯೋಗ ಉತ್ತಮಗೊಳಿಸಿದೆ.

ಉದ್ಯೋಗಕ್ಕೆ ಹೋಗುವುದರ ಮೂಲಕ ಸ್ತ್ರೀಯರು ವಿಶಾಲ ಜಗತ್ತಿನಲ್ಲಿ ಕಾಲಿರಿಸುವಂತಾಗಿದೆ. ಮಹಿಳೆಯರಿಗೆ ಉದ್ಯೋಗದಿಂದ ಕೆಲವು ಸಮಸ್ಯೆಗಳಿದ್ದರೂ ಅನುಕೂಲತೆಗಳೇ ಹೆಚ್ಚು. ಕೇವಲ ಸ್ವತಂತ್ರವಾಗಿ ಹಣಗಳಿಸುವುದಷ್ಟೇ ಅಲ್ಲ. ಅವಳು ಜೀವನ ಅನೇಕ ರೀತಿ ಶ್ರೀಮಂತಗೊಳಿಸುತ್ತದೆ. ಮತ್ತು ಹಿಂದಿನ ಸಂಪ್ರದಾಯಕತೆ ತಡೆ ಹಿಡಿದಿದ್ದ ಸಂಸಾರದ ವಾತಾವರಣಕ್ಕಿಂತ ಈಗಿನ ಜೀವನ ಅವಳಿಗೆ ಹೆಚ್ಚು ಆಸಕ್ತಿಕರವಾಗಿ, ಕುತೂಹಲಕಾರಿಯಾಗಿ ಪರಿಣಮಿಸುತ್ತದೆ. ಉದ್ಯೋಗಸ್ಥ ಅವಿವಾಹಿತ ಯುವತಿಯರು ಸ್ವತಂತ್ರ ಬಾಳು ನಡೆಸಬಹುದು. ಅಲ್ಲದೇ ಇಷ್ಟವಾದವರಿಗೆ ಮದುವೆಯಾಗಬಹುದು. ಮದುವೆಯಾಗಲೇಬೇಕೆಂಬ ಹಿಂದಿನ ನಿಯಮ ಒತ್ತಾಯವಿಲ್ಲ. ಅದು ಐಚ್ಛಿಕ ಮಾತ್ರ ಈ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟದ್ದು ಅವಳ ಉದ್ಯೋಗವೇ ಅವಳ ಯೋಚನೆ, ಅವಳ ರಕ್ಷಕ ಹಾಗೂ ಮಾರ್ಗದರ್ಶಕವೂ ಆಗಿದೆ.

ಹೆಣ್ಣು ಮಕ್ಕಳಿಗೆ ಇಂದಿನ ಪರಿಸ್ಥಿತಿಯಲ್ಲಿ ಉದ್ಯೋಗ ಮಾಡುವುದು ತೀರಾ ಅಗತ್ಯ. ಯಾವುದೇ ಒಂದು ಸಮಸ್ಯೆಯು ಎದುರಾದಾಗ ಅದನ್ನೇ ದೊಡ್ಡದು ಮಾಡಿ ತಲೆಯ ಮೇಲೆ ಕೈ ಹೊತ್ತು ಕೂರಬಾರದು. ಏಕೆಂದರೆ ಪ್ರತಿಯೊಬ್ಬರು ಪ್ರಾಮಾಣಿಕವಾಗಿ ದುಡಿಯುವುದು ದೇಶ ಸೇವೆಯೇ ಅದಷ್ಟು ಜನ ಸ್ತ್ರೀಯರು ವಿದ್ಯಾವಂತರಾಗಿ ಸಂಸಾರಕ್ಕೆ ಅವಶ್ಯವಿರುವ ಆರ್ಥಿಕ ಆದಾಯವನ್ನು ತುಂಬಲು ಸಹಾಯ ಮಾಡಬೇಕಾಗಿದೆ. ವಿವಾಹಿತ ಸ್ತ್ರೀ ತನ್ನ ದ್ವಿಪಾತ್ರದಲ್ಲಿ ಯಶಸ್ವಿಯಾಗಿ ಗಂಡ ಮಕ್ಕಳನ್ನು ಚೆನ್ನಾಗಿ ನೋಡಿಕೊಂಡು ಗಂಡನಿಗೆ ಆತನ ಸಂಸಾರದಲ್ಲಿ ಅಲಕ್ಷಿಸುತ್ತಿಲ್ಲ. ಮೊದಲು ಮನೆಯ ವಾತಾವರಣ ಆನಂದಕರವಾದರೆ, ಸಹಜವಾಗಿ ಅವಳ ಉದ್ಯೋಗವೂ ತೃಪ್ತಿಕರವಾಗಿ ಸಾಗುತ್ತದೆ. ಇದರಿಂದ ಅವಳ ವೈಯಕ್ತಿಕ ಆದಾಯವೂ ಹೆಚ್ಚುತ್ತದೆ. ಮತ್ತು ದುಡಿಯುವ ಸಂಸ್ಥೆಯ ಆರ್ಥಿಕ ಮಟ್ಟವು ಉತ್ತಮವಾಗಿ, ಒಟ್ಟಿನಲ್ಲಿ ದೇಶದ ಆದಾಯವನ್ನು ಹೆಚ್ಚಿಸುತ್ತದೆ. ಮಹಿಳೆಯ ಪಾತ್ರವನ್ನು ತೆಗೆದುಕೊಂಡಾಗ ಮಾತ್ರ ದೇಶದ ಶಕ್ತಿಯನ್ನು ಹೆಚ್ಚಿಸಲು ಸಾಧ್ಯ. ಅಂದರೆ ಉದ್ಯೋಗಸ್ಥ ಮಹಿಳೆ ತನ್ನ ಜೀವನದ ಮಟ್ಟವನ್ನು ಹೆಚ್ಚಿಸಿಕೊಂಡಾಗ ಮಾತ್ರ ದೇಶದ ಪ್ರಗತಿ ಸಾಧ್ಯ. ಇಂದು ಮಹಿಳೆಯು ಹಿಂದಿನ ಬಂಧನದಿಂದ ಹೊರಗೆ ಬಂದು ಎಲ್ಲವನ್ನು ಎದುರಿಸುವ ದಿಟ್ಟತನದಿಂದ ಅವಳಿಗೆ ಅನೇಕ ಸಮಸ್ಯೆಗಳು ಎದುರಾದರೂ, ಅವುಗಳನ್ನೆಲ್ಲಾ ದಾಟಿ ನಾನಾ ರಂಗಗಳಲ್ಲಿ ಯಶಸ್ವಿಯಾಗಿದ್ದಾಳೆ. ಮಹಿಳೆ ಮನೆಯಲ್ಲಿ ಗೃಹಿಣಿ, ಹೊರಗೆ ಉದ್ಯೋಗಸ್ಥಳು, ದೇಶದಲ್ಲಿ ಪ್ರಜೆಯಾಗಿ ಪಾತ್ರವನ್ನು ವಹಿಸುತ್ತಿದ್ದಾಳೆ.

ಪುರುಷರಿಗೆ ತಾವು ಸರಿಸಮ ಎಂದು ಆಧಾರ ಭೂತವಾಗಿ ಉದ್ಯೋಗದಲ್ಲಿ ತೋರಿಸಿ ಕೊಟ್ಟಿದ್ದಾಳೆ. ಹಾಗೂ ದೇಶದ ಆರ್ಥಿಕ ಆದಾಯವನ್ನು ಕಟ್ಟಲು ಸ್ತ್ರೀಯರು ಸಹಾಯಕರಾಗಿದ್ದಾರೆ. "ತೊಟ್ಟಿಲನ್ನು ತೂಗುವ ಕೈ ಜಗತ್ತನ್ನು ತೂಗಬಲ್ಲಳು", ಮಹಿಳೆಯರ ವಿಷಯದಲ್ಲಿ ಆತ್ಮವಿಶ್ವಾಸ, ನಂಬಿಕೆ ಬರುತ್ತಿದೆ. ಅನೇಕ ಪುರುಷರು ಉದ್ಯೋಗಸ್ಥಳಾಗಿರುವ ಯುವತಿಯರನ್ನು ಮದುವೆಯಾಗಲು ಬಯಸುತ್ತಿದ್ದಾರೆ. ಕಾರಣ ಅವರ "ಉದ್ಯೋಗ"ವನ್ನೇ ಒಂದು ಅರ್ಹತೆ ಎಂದು ಮುಖ್ಯವಾಗಿ ಗಮನಿಸುತ್ತಾರೆ. ಹೀಗೆ ಉದ್ಯೋಗಕ್ಕೂ ಮಹಿಳೆಯರಿಗೂ ಈಗ ಇರುವ ಸಂಬಂಧ ತುಂಬ ಸಮೀಪದ್ದಾಗಿದೆ. ಈಗ ಉದ್ಯೋಗಸ್ಥ ಮಹಿಳೆಯರು ಎಲ್ಲ ಸೌಕರ್ಯಗಳನ್ನು ಅನುಭವಿಸಲು ವಿದೇಶಗಳಲ್ಲಿ "ಸ್ತ್ರೀ ವಿಮೋಚನೆ" ಎಂಬ ಕ್ರಾಂತಿಯು ನಡೆದು ಬಂದಿರುವುದರಿಂದಾಗಿಯೇ ಮಹಿಳೆಯ ರಿಂದಲೇ ದೇಶದ ಪ್ರಗತಿ ಸಾಧ್ಯವೆಂದು ಹಲವು ವರ್ಷಗಳ ಹಿಂದೆಯೇ ಸ್ಟಾಚ್ಯೂಟರಿ ಕಮೀಷನ್ ಹೀಗೆ ಘೋಷಿಸಿತು.

"The women's movement in India holds the key to progress and the results it may achive are inclculately great".

ಭಾರತದಲ್ಲಿ ಸ್ತ್ರೀಯರ ಚಳುವಳಿ ಪ್ರಗತಿಗೆ ಕಾರಣವಾಗಿದೆ ಮತ್ತು ಅದು ಎಣಿಸಲಾರದಷ್ಟು ಹೆಚ್ಚು ಪರಿಣಾಮವನ್ನು ಸಾಧಿಸಬಹುದು. ಡಾ. ರಾಧಾಕೃಷ್ಣನ್ ಅವರು "While the greatest profession of a women is and probably will continue to be, that of home keeper, get hear world should not be limited to that relationship". ಕೇವಲ ಸ್ತ್ರೀಯರು ಸಂಸಾರದಲ್ಲೇ ನಿರತವಾಗಿ, ಅದಿಷ್ಟಕ್ಕೆ ಜೀವನವನ್ನು ಮುಗಿಸಬಾರದು. ಅವರ ಪ್ರಪಂಚ ಅದಿಷ್ಟಕ್ಕೆ ಸೀಮಿತವಾಗಿ ಬಿಡಬಾರದು, ಅದರಿಂದ ದೇಶಕ್ಕೆ ಸಲ್ಲಬೇಕಾದ ಸೇವೆ, ಕಾಣಿಕೆ ಬಹಳವಿದೆ ಎಂಬ ಅಭಿಪ್ರಾಯಪಡುತ್ತ ಹೇಳಿರುತ್ತಾರೆ.

ಮಹಿಳೆಯು ಭೂಮಿಯ ಮೇಲೆ ಹುಟ್ಟಿದಾಗಿನಿಂದಲೂ ಒಂದಲ್ಲ ಒಂದು ಕೆಲಸವನ್ನು ಮಾಡುತ್ತಿದ್ದಾಳೆ; ಒಂದಲ್ಲ ಒಂದು ರೀತಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಳೆ. ಅವಳು ಯಾವುದಾದರೂ ಒಂದು ವಿಧವಾದ ಕೆಲಸವನ್ನು ಮಾಡುತ್ತಲೆ ಇರುವಳು. ಮಾನವ ಸಮಾಜದಲ್ಲಿ ಪುರುಷ ಮತ್ತು ಸ್ತ್ರೀಯರ ನಡುವೆ ಮೂಲಭೂತವಾಗಿ ಶ್ರಮವಿಭಜನೆಯು ಏರ್ಪಟ್ಟಿದೆ. ಶ್ರಮ ಎನ್ನುವುದು ಎಲ್ಲ ಜೀವಿಗಳ ಒಂದು ಅವಿಭಾಜ್ಯ ಅಂಗವಾಗಿದೆ. ಮಾನವ ಹಸಿವನ್ನು ನಿವಾರಿಸಲು, ಬದುಕಿರಲು ಉತ್ಪಾದನೆಯಲ್ಲಿ ತೊಡಗುತ್ತಾನೆ. ಈ ಉತ್ಪಾದನೆಯ ವ್ಯವಹಾರದಲ್ಲಿ ಲಿಂಗ ಸಾಪೇಕ್ಷವಾದ ಶ್ರಮ ವಿಭಜನೆಗೂ ಮೊದಲೇ ಹುಟ್ಟಿತು. ಅನಂತರ ಸಾಮಾಜಿಕ ಶ್ರಮವಿಭಜನೆ ಎಂದು ವಿಶಿಷ್ಟವಾದ ಮನ್ನಣೆಗೆ ಒಳಗಾಯಿತು. ಸ್ತ್ರೀಯ ಜನನ ಕ್ಷಮತೆಯನ್ನು ಅಪರಿಹಾರ್ಯವೆಂದು ಒಪ್ಪಿಕೊಂಡರೂ ಲಿಂಗಸಾಪೇಕ್ಷ ವಿಭಜನೆಗಾಗಿ ಕುಶಲಕರ್ಮ ವಿಚಾರದಲ್ಲಿ ಈ ಕಾರಣವನ್ನೇ ಮುಂದಿಟ್ಟರು.

ಮಹಿಳೆಯು ಯಾವ ಯುಗದಲ್ಲಿಯೂ ಕೆಲಸವಿಲ್ಲದೆ ವ್ಯರ್ಥವಾಗಿ ಕಾಲಕಳೆದಿರುವುದಿಲ್ಲ. ಸರ್ವವಿಧದಲ್ಲಿಯೂ ಆಕೆಯು ಪುರುಷನಿಗೆ ಸಹಭಾಗಿಯಾಗಿದ್ದಾಳೆ. ಆಕೆಯೂ ಸಹ ಪುರುಷನಂತೆ ಎಲ್ಲಾ ರೀತಿಯ ಅಸಂಖ್ಯಾತ ಕೆಲಸಗಳನ್ನು ಮಾಡಿ ಜವಾಬ್ದಾರಿಯನ್ನು ನಿರ್ವಹಿಸಿದ್ದಾಳೆ. ಹಿಂದೆ ಶ್ರಮವಿಭಜನೆಯು ಲಿಂಗಭೇದವನ್ನಾಧರಿಸಿದ್ದು ಸ್ತ್ರೀಯು ಹೆಚ್ಚಾಗಿ ಗೃಹಕೃತ್ಯಗಳಲ್ಲೇ ತೊಡಗಿರುತ್ತಿದ್ದಳು. ಅವಶ್ಯಕತೆ ಇರುವುದರಿಂದ ವ್ಯವಸಾಯ ಕೆಲಸದಲ್ಲೂ ಮಹಿಳೆಯು ಸಹಾಯಕಳಾಗಿದ್ದಳು. ಆದರೆ ಬಹುತೇಕ ವೇಳೆಯನ್ನು ಅಡುಗೆ ಮಾಡುವುದು, ಮಕ್ಕಳು ಪೋಷಿಸುವುದು ಮುಂತಾದ ಕೆಲಸಗಳಿಗೆ ವಿನಿಯೋಗಿಸುತ್ತಿದ್ದಳು. ಅಡುಗೆ ಮನೆಯೇ ಮಹಿಳೆಯರಿಗೆ ಯೋಗ್ಯ ಸ್ಥಳವೆಂದು

ಒಮ್ಮೆ ನಂಬಿಸಲಾಗಿತ್ತು. ಪುರುಷನು ಮನೆಯ ಹೊರಗೆ ಕೆಲಸ ಮಾಡುತ್ತಿದುದ್ದರಿಂದ ಹಾಗೂ ಮಹಿಳೆಯು ಗೃಹಕೃತ್ಯಗಳಲ್ಲಿ ತೊಡಗಿ ಮಕ್ಕಳನ್ನು ನೋಡಿಕೊಳ್ಳಬೇಕಾಗಿರುವುದರಿಂದ ಸ್ವಾಭಾವಿಕ ವಾಗಿಯೇ ಆಕೆಗೆ ಹೆಚ್ಚು ಮತಗಳಿಸಿದ ಕೆಲಸಗಳನ್ನು ನೇಮಿಸಲಾಗುತ್ತಿತ್ತು. ಪುರುಷರೇ ಶ್ರೇಷ್ಠರೆಂದು ಭಾವಿಸಿ ಅವರೇ ಮೇಲುಗೈ ಆಗಿದ್ದರಿಂದ ಸ್ತ್ರೀಯರಿಗೆ ಬೇರೆ ವೃತ್ತಿಗಳಲ್ಲಿ ಹೆಚ್ಚು ಅವಕಾಶಗಳು ದೊರೆಯುವುದಕ್ಕೆ ಎಡೆಗೊಟ್ಟಿಲ್ಲ.

ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಹಿಡಿತಸಾಧಿಸಿದ ಪುರುಷ ವರ್ಗದ ಮೌಲ್ಯಗಳೇ ಒಟ್ಟು ಸಾಮಾಜಿಕ ಸಾಂಸ್ಕೃತಿಕ ಮೌಲ್ಯಗಳಾಗಿದ್ದು ಹೆಣ್ಣನ್ನು ಅರ್ಥೈಸಿದೆ. ಸ್ತ್ರೀ-ಪುರುಷ ಅಸಮಾನತೆಗೆ ಮುಂದೊಡ್ಡುವ ಜೈವಿಕ ಮೂಲವನ್ನು ನಾವಿಂದು ಪ್ರಶ್ನಿಸಬೇಕಾಗಿದೆ. ಜೈವಿಕ ಮೂಲ ಸಿದ್ಧಾಂತವು ಗಂಡಿನ ಜೈವಿಕ ರಚನೆಗಳು ಅವನ ಗಂಡುತನವನ್ನು ಸೃಷ್ಟಿಸುತ್ತವೆ ಮತ್ತು ಹೆಣ್ಣಿನ ಜೈವಿಕ ರಚನೆಗಳು ಅವಳ ಹೆಣ್ಣುತನವನ್ನು ಸೃಷ್ಟಿಸುವತ್ತವೆ ಹಾಗೂ ಗಂಡುತನವು ಹೆಣ್ಣುತನಕ್ಕಿಂತ ಶ್ರೇಷ್ಠ ವಾದದ್ದು ಎಂದು ನಂಬುವಂತೆ ಒತ್ತಾಯಿಸುತ್ತದೆ. ಆದರೆ "ಜೈವಿಕತೆ ಹೆಣ್ಣನ್ನು ಗಂಡಿಗಿಂತ ಭಿನ್ನಳೆಂದು ಸ್ಥಾಪಿಸುತ್ತದೆಯೇ ಹೊರತು ಕೀಳೆಂದಲ್ಲ. ಜೈವಿಕ ಸಂಗತಿಗಳಿಗೆ ಒಂದು ಮೌಲ್ಯ ಬರುವುದು ಸಾಮಾಜಿಕ ಕಟ್ಟುಕಟ್ಟಳೆಗಳಿಂದ, ವಿಧಿನಿಷೇಧಗಳಿಂದ"(ಉದ್ಧೃತ., ರಾಮಚಂದ್ರನ್ ಸಿ.ಎಸ್;೧೯೯೪:೧೦೪). ಈ ಪೂರ್ವಗ್ರಹಿತ ನಿಲುವುಗಳು ಗಂಡಿನ ಗುಣಸ್ವಭಾವ ಮತ್ತು ಕೆಲಸಗಳನ್ನು ಶ್ರೇಷ್ಠವೆಂದೂ, ಹೆಣ್ಣಿನದನ್ನು ಕನಿಷ್ಠವೆಂದು, ಗೌಣವೆಂದೂ ಪರಿಗಣಿಸುತ್ತದೆ. ಗಂಡಿನ ಕೆಲಸಗಳು ಆರ್ಥಿಕತೆಯೊಂದಿಗೆ ಸಂಬಂಧ ಪಡೆದುಕೊಂಡು 'ಉತ್ಪಾದನೆ" ಅನಿಸುತ್ತದೆ. ಹೆಣ್ಣಿನ ಆಹಾರ ತಯಾರಿಕೆ, ಹೇರುವಿಕೆ ಸಂಗೋಪನೆಗಳು ಅನುತ್ಪಾದಕವಾಗುತ್ತವೆ. ಇಂತಹ ವ್ಯವಸ್ಥೆಯೊಳಗೆ "ಸ್ತ್ರೀಯರು ತಮ್ಮ 'ದೇಹ'ದಿಂದ ಪ್ರತ್ಯೇಕಿಸಲ್ಪಟ್ಟ ಭಾವನೆಯನ್ನೇ ಅನುಭವಿಸುತ್ತಾರೆ... ತನ್ನ ದೇಹ ಯಾತಕ್ಕಾಗಿ, ಯಾರಿಂದ ಹಾಗೂ ಹೇಗೆ ಬಳಸಲ್ಪಡಬೇಕು ಎಂದು ನಿರ್ಧರಿಸುವಲ್ಲಿ ಆಕೆಗೆ ಸ್ವಾತಂತ್ರವೇ ಇಲ್ಲ" ಎಂದು ಬ್ಯಾಗರ್ ಪ್ರತಿಪಾದಿಸುತ್ತಾರೆ(ಉದ್ಧೃತ., ಇಂದಿರಾ;೧೯೯೬:೫೪).

ಕುಟುಂಬ ಎನ್ನುವುದು ಸಹಜ ಸಂಸ್ಥೆ, ಅದು ಖಾಸಗಿ ಜಗತ್ತು ಎನ್ನುವ ಪರಿಕಲ್ಪನಾತ್ಮಕ ಕೋಟೆಯನ್ನು ಭಗ್ನಗೊಳಿಸಿ ಕುಟುಂಬವನ್ನು ಸಾಮಾಜಿಕ ಘಟಕವಾಗಿಸಿತು. ಇದರಿಂದ ಪ್ರಕೃತಿ/ ಸಂಸ್ಕೃತಿ, ಖಾಸಗಿ / ಸಾರ್ವಜನಿಕ, ವೈಯಕ್ತಿಕ / ರಾಜಕೀಯ ಎನ್ನುವ ದ್ವಂದ್ವ ವರ್ಗೀಕರಣದ ಪರಿಕಲ್ಪನೆಯನ್ನು ನಿರಚಿಸುವುದು ಸಾಧ್ಯವಾಯಿತು. ಕುಟುಂಬ ಕೂಡ ಲೈಂಗಿಕ ರಾಜಕಾರಣದ ರೂಪವೇ ಆಗಿದೆ. ಪಿತೃಪ್ರಧಾನ ಕುಟುಂಬಗಳಲ್ಲಿ ತಂದೆಯೆ ಕುಟುಂಬದ ಮುಖ್ಯಸ್ಥ ಮಹಿಳೆಯರ ಅಭಿಪ್ರಾಗಳಿಗೆ

ಮಾನ್ಯತೆಯಿರಲಿಲ್ಲ. ಸ್ತ್ರೀ ಕೇವಲ ಅಡುಗೆ ಕೆಲಸ ಮಕ್ಕಳ ಲಾಲನೆ-ಪಾಲನೆಗಳಿಗೆ ಸೀಮಿತವಾಗಿದ್ದಳು. ಗಂಡು ಕುಟುಂಬದ ಹೊರಗಡೆಯ ಕಾರ್ಯಗಳಲ್ಲಿ ತಲ್ಲೀನನಾಗಿದ್ದರೆ, ಅವನ ಕೃಷಿ ಪಶುಪಾಲನೆ ಮೊದಲಾದ ಕಾರ್ಯಗಳಲ್ಲಿ ಇವಳು ಸಹಾಯಕಳಾಗಿದ್ದಳು.

ಪಿತೃಪ್ರಧಾನತೆ ಮತ್ತು ಬಂಡವಾಳ ಶಾಹಿ ವ್ಯವಸ್ಥೆಗಳೆರಡು ಮಹಿಳೆಯ ಆರ್ಥಿಕ ಅಧೀನತೆಗೆ ಕಾರಣವಾದ ಅಂಶಗಳು ಎಂಬ ಮೂಲಭೂತ ತತ್ವವನ್ನು ಪ್ರತಿಪಾದಿಸಿದವಳು ಹಾಯ್ಡಿಹಾರ್ಟ್‌ಮನ್ ಬಂಡವಾಳ ಶಾಹಿಗೆ ಮುಂಚೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪುರುಷರ ಹೆಂಗಸರ, ಮಕ್ಕಳ ಕುಟುಂಬ ದೊಳಗಿನ ದುಡಿಮೆಯನ್ನು ನಿಯಂತ್ರಿಸುವುದನ್ನು ಆರಂಭಿಸಿದ ಪ್ರಭುತ್ವಕ್ಕೆ ಖಾಸಗಿ/ಸಾರ್ವಜನಿಕ ವಿಂಗಡಣೆಯನ್ನು ಮಾಡಿದ ನಂತರ, ವ್ಯಾಪಕವಾದ ವಿನಿಮಯ ಮತ್ತು ಉತ್ಪಾದನಾ ಘಟಕಗಳಿಂದಾಗಿ ಮಹಿಳಾ ಶ್ರಮಶಕ್ತಿಯ ಮೇಲೆ ನಿಯಂತ್ರಣ ಸಾಧಿಸುವುದು ಬಹುಮುಖ್ಯ ಪ್ರಶ್ನೆಯಾಯಿತು. ಪುರುಷನು ಮಹಿಳೆಯ ಮೇಲೆ ಸಾಧಿಸುತ್ತಿದ್ದ ಈ ನಿಯಂತ್ರಣವು ವೈಯಕ್ತಿಕ ನೆಲೆಯಿಂದ ಸಾಮಾಜಿಕ ನೆಲೆಗೆ, ಸಾಮಾಜಿಕ ಸಂಸ್ಥೆಗಳ ಮೂಲಕ ವ್ಯಾಪಿಸಿತು. ಈ ಕಾರ್ಯಕ್ಕಾಗಿ ಪುರುಷರು ಅನುಸರಿಸುತ್ತಿದ್ದ ತಂತ್ರವೆಂದರೆ, ಸಾಂಪ್ರದಾಯಿಕ ಲಿಂಗಾಧಾರಿತ ಶ್ರಮವಿಭಜನೆ, ಶ್ರೇಣೀಕೃತ ವ್ಯವಸ್ಥೆಯಲ್ಲಿ ತಂತ್ರಜ್ಞಾನದ ವ್ಯವಸ್ಥೆ ಮತ್ತು ನಿಯಂತ್ರಣ ಪದ್ಧತಿಯನ್ನು ಸಮಾಜದಲ್ಲಿ ಸೃಷ್ಟಿಸುತ್ತಿದ್ದರು.

ಹದಿನೈದನೆ ಶತಮಾನದಿಂದ ಹದಿನೆಂಟನೆ ಶತಮಾನದವರೆಗೆ ಉದ್ಭವಿಸಿದ ಬಂಡವಾಳಶಾಹಿಯು ಪಿತೃಪ್ರಧಾನ್ಯತೆಯ ನಿಯಂತ್ರಣಕ್ಕೆ ಭಾರಿ ಪೆಟ್ಟನ್ನು ಒದಗಿಸಿತು. ಪಿತೃಪ್ರಧಾನತೆ ಮತ್ತು ಬಂಡವಾಳ ಶಾಹಿಯ ಅಂತಃ ಸಂಪರ್ಕದಿಂದ ಶ್ರಮ ಮಾರುಕಟ್ಟೆಯಲ್ಲಿ ವ್ಯವಸ್ಥೆ ಲಿಂಗಾಧಾರಿತ ವಿಭಜನೆಯ ಕೆಲಸಗಳು ಇಂದಿನ ಮಹಿಳೆಯ ಸ್ಥಿತಿಗತಿಗಳನ್ನು ನಿರ್ಧರಿಸುತ್ತವೆ.

"ಗಂಡಸರು ಹೆಂಗಸರನ್ನು ತಮ್ಮ ಸ್ಥಾನಮಾನ ಹಾಗೂ ಅನುಕೂಲಕ್ಕಾಗಿ ಎರಡು ವರ್ಗಗಳಾಗಿ ವಿಂಗಡಿಸಿದ್ದಾರೆ" ಎಂಬುದು ಜೋಸೆಫಿನ್‌ಬಟ್ಲರಳ ಸಿದ್ಧಾಂತ(ಉದ್ಧೃತ., ಇಂದಿರಾ;೧೯೯೬:೫೪). ಈ ವರ್ಗೀಕರಣಕ್ಕೆ "ಅವಳು ಲೈಂಗಿಕ ಅರ್ಥಶಾಸ್ತ್ರ" ಎಂಬ ಪರಿಕಲ್ಪನೆಯನ್ನು ನೀಡಿದಳು. ಜೂಲಿಯಟ್ ಮಿಶೆತ್ ಮಹಿಳೆಯ ಅಧೀನ ಸ್ಥಿತಿಗೆ ಕಾರಣಗಳನ್ನು ಹುಡುಕುತ್ತಾ ಉತ್ಪಾದನೆ ಹಂತದ ನಾಲ್ಕು ಬೆಳವಣಿಗೆಗಳನ್ನು ಗುರುತಿಸುತ್ತಾಳೆ. "ಸಂತಾನೋತ್ಪತ್ತಿ, ಉತ್ಪಾದನಾ ವ್ಯವಸ್ಥೆ, ಮಕ್ಕಳ ಸಾಮಾಜಿಕರಣ ಮತ್ತು ಲೈಂಗಿಕತೆ ಈ ನಾಲ್ಕು ರಚನೆಗಳು ಪರಸ್ಪರ ಸಂಬಂಧ ಹೊಂದಿ ದಂತಹವು ಮತ್ತು ಕುಟುಂಬ ರಚನೆಯಲ್ಲಿ ಈ ನಾಲ್ಕು ಹಂತಗಳು ಸೇರಿಸಲಾಗಿದೆ. ಆದ್ದರಿಂದಲೇ ಪಿತೃಪ್ರಧಾನ್ಯತೆಯನ್ನು ಸಮಾಜದಲ್ಲಿ ಕಿತ್ತೆಸೆಯುವಷ್ಟು ಸುಲಭ ಸಾಧ್ಯವಿಲ್ಲ. ಮಹಿಳೆಯರ ಅಧೀನ

ಸ್ಥಿತೆಗೆ ಒಂದೇ ಪರಿಹಾರವಿರಲು ಸಾಧ್ಯವಿಲ್ಲ. ಕೈಗಾರೀಕರಣದ ನಂತರ ಕೂಲಿಕೆಲಸ ಮತ್ತು ಮನೆಕೆಲಸದ ನಡುವಿನ ವಿಭಜನೆ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತಿದೆ(ಉದ್ಧೃತ., ಇಂದಿರಾ;೧೯೯೬: ೫೫). ಬಂಡವಾಳಶಾಹಿ ವ್ಯವಸ್ಥೆಗೆ ಹೊರತ್ತಿದ್ದ ವ್ಯವಸ್ಥೆಯಲ್ಲಿ ಲಿಂಗಭೇದ ಹೆಚ್ಚು ಉಗ್ರವಾಯಿತು. ಕೂಲಿ ಕೆಲಸದಿಂದ ಮಹಿಳೆಯನ್ನು ಹೊರತುಪಡಿಸಿದ್ದರಿಂದ ಅವಳ ಶೋಷಣೆ ಹೆಚ್ಚಾಯಿತು. ವೇತನ ಸಹಿತ ಕಾರ್ಮಿಕ ಶಕ್ತಿಯಿಂದ ಮಹಿಳೆಯ ಹೊರಗಿಸುವುದು ಅವರ ಶೋಷಣೆಯ ಮೂಲವಾಗಿದೆ.

ಮಹಿಳೆಯರನ್ನು ಕುರಿತು ದಮನಕಾರಿಯಾಗಿದ ಸಂಸ್ಥೆಗಳಾಗಿಯೇ ಪ್ರಭುತ್ವ ಮತ್ತು ಕುಟುಂಬ ವನ್ನು ಪರಿಕಲ್ಪಿಸಲಾಗುತ್ತದೆ. ಏಕೆಂದರೆ ಈ ಎರಡು ಸಂಸ್ಥೆಗಳು ಕುಟುಂಬ ಮತ್ತು ಸಮಾಜದಲ್ಲಿ ಲಿಂಗಾಧಾರಿತ ಶ್ರಮವಿಭಜನೆಯನ್ನೇ ಬೆಂಬಲಿಸುತ್ತವೆ. ಪ್ರಭುತ್ವವು ಮಹಿಳೆಯರಿಗೆ ಅವರ ಗಂಡಂದಿರನ್ನು ಆಶ್ರಯಿಸುವಂತೆ ತನ್ನ ವಿಚಾರಧಾರೆಗಳ ಮೂಲಕ, ಕಾನೂನಿನ ಮೂಲಕ ಮತ್ತು ಸಾರ್ವಜನಿಕ ನೀತಿ-ನಿಯಮಾವಳಿಗಳ ಮೂಲಕ ಒತ್ತಾಯಿಸುತ್ತವೆ. ಕುಟುಂಬದಲ್ಲಿ ಮೊದಲು ಹೆಂಡತಿ ಯಾಗಿ, ಆ ಮೇಲೆ ತಾಯಿಯಾಗಿ, ನಂತರವೇ ಉಳಿದೆಲ್ಲ ಸಂಬಂಧಗಳು ಮುಖ್ಯವಾಗಬೇಕಾಗುತ್ತದೆ. ಆದ್ದರಿಂದಲೇ ಕುಟುಂಬವು ಹೆಣ್ಣಿನ ಶೋಷಣೆಯ ಪ್ರಮುಖ ಸ್ಥಾನವಾಗುತ್ತದೆ. ತಾತ್ವಿಕವಾಗಿ ಈ ಎಲ್ಲ ಚರ್ಚೆಗಳು ಪ್ರಭುತ್ವದ ಕಾರ್ಯಕ್ರಮ ಮತ್ತು ನಿಯಮಾವಳಿಗಳಲ್ಲಿ ಬಂಡವಾಳ ಶಾಹಿಯ ಕ್ರಿಯಾ ರೂಪದ ಪ್ರತಿನಿಧಿಯಾಗಿ ವ್ಯಕ್ತವಾಗುತ್ತಿರುತ್ತವೆ.

"ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆಗೆ ಹೊಂದುವಂತಾಗಬೇಕು ಮತ್ತು ಈ ಮಹಿಳೆಯರು ಅಡುಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲೇ ಮರುಳಾಗಿ ಅಪಮಾನಕ್ಕೆ ಗುರಿಯಾಗುವಂತಿದ್ದು ನಿರಂತರ ದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮ ಚೌಕರಿಯಿಂದ ಮುಕ್ತರಾಗಬೇಕಾದದ್ದು ಅವಶ್ಯಕ" ಎಂದ ಲೆನಿನ್‌ರ ಮಾತುಗಳು ಮಹಿಳೆಯರ ವಿಮೋಚನೆಯೊಡಗಿನ ಹೆಜ್ಜೆಗಳನ್ನು ತೋರಿಸುತ್ತವೆ(ಉದ್ಧೃತ., ಇಂದಿರಾ;೧೯೯೬:೫೬).

ಪಿತೃ ಕುಟುಂಬದಲ್ಲಿ ಮಹಿಳೆಗೆ ಬೇರುಗಳಿಲ್ಲ. ಸಾಂಪ್ರದಾಯಿಕವಾಗಿ ಬ್ರಹ್ಮಚರ್ಯ ಆಶ್ರಮ ದಿಂದ ವಂಚಿತಳಾದ ಶಿಕ್ಷಣ ಪಡೆಯುವ ಅರ್ಹತೆ ಹೊಂದಿಲ್ಲ ಹಾಗೂ ಕೆಲವನ್ನು ಕಾರ್ಯೇಷು ದಾಸಿಯಂತೆ ಪಾಲನೆಯಲ್ಲಿ-ಭೋಜ್ಯೇಷು ತಾಯಿಯಂತೆ, ಶಯನದಲ್ಲಿ-ರಂಭೆಯಂತೆ, ಸಲಹೆಯಲ್ಲಿ-ಮಂತ್ರಿಯಂತೆ, ರೂಪೇಷು ಲಕ್ಷ್ಮೀ, ಕ್ಷಮಯಾಧಾರಿತ್ರಿ ಆರು ಗುಣಗಳನ್ನು ಅವಳಿಗೆ ಆರೋಪಿಸ ಲಾಗಿದೆ. "ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ", "ಸ್ತ್ರೀಯರ ಬುದ್ಧಿ ಮೊಳಕಾಲ ಕೆಳಗೆ"

ಎಂಬ ಗಾದೆಗಳು ಪ್ರಚಲಿತವಾಗಿವೆ. ಸಾಮಾಜಿಕವಾಗಿ ಹಲವು ವಂಚನೆಗೆ ಒಳಗಾದ ಮಹಿಳೆ ಆರ್ಥಿಕ ವಾಗಿಯೂ ಶೋಷಣೆಗೆ ಒಳಗಾಗಿದ್ದಾಳೆಂದು ನಿರ್ವಿವಾದ. ಆದ್ದರಿಂದಲೇ ಆಧುನೀಕರಣದ ಪ್ರವೇಶದೊಂದಿಗೆ ಮಹಿಳಾ ಸ್ವಾತಂತ್ರ್ಯ, ಮಹಿಳಾ ವಿಮೋಚನಾ ಚಳುವಳಿಗಳು ರೂಪಗೊಂಡು 'ಮಹಿಳಾ ವರ್ಷ' 'ಮಹಿಳಾ ದಿನ'ಗಳು ಆಚರಣೆಯಲ್ಲಿ ಪರ್ಯವಸನಗೊಂಡಿವೆ. ಇಂದಿಗೂ ಮಹಿಳೆ ಯರ ಶಿಕ್ಷಣ ಆಕಸ್ಮಿಕವಾಗಿರುವುದಿಲ್ಲ ಹೊರತು ಉದ್ದೇಶಪೂರ್ವಕವಾಗುತ್ತಿದೆ. ಶ್ರಮದ ಹಂಚಿಕೆ ಯನ್ನು ಎರಡು ಪ್ರಕಾರಗಳಲ್ಲಿ ಕಾಣಬಹುದು ಒಂದು ಲಿಂಗಾಧಾರಿತ ಶ್ರಮವಿಭಜನೆ (Sexual Division of Labour) ಇನ್ನೊಂದು ಲಿಂಗ ವ್ಯವಸ್ಥೆ ಆಧಾರಿತ ಶ್ರಮವಿಭಜನೆ (Gender Division of Labour).

ಲಿಂಗಾಧಾರಿತ ಶ್ರಮವಿಭಜನೆಯಲ್ಲಿ ಸ್ತ್ರೀ-ಪುರುಷರ ನಡುವಿನ ಜೈವಿಕ ವ್ಯತ್ಯಾಸಗಳ ಆಧಾರದ ಮೇಲೆ ಶ್ರಮದ ಹಂಚಿಕೆಯಾಗಿದೆ. ಸ್ತ್ರೀಯರ ಸಂತಾನೋತ್ಪತ್ತಿ ಕಾಯವೇ ಲಿಂಗಾಧಾರಿತ ಶ್ರಮ ವಿಭಜನೆಗೆ ಮುಖ್ಯಕಾರಣ ಎಂದು ಹೇಳುತ್ತದೆ. ಶಾರೀರಿಕ ರಚನೆ ಮತ್ತು ಸಂತಾನೋತ್ಪತ್ತಿ ಇವು ಮಹಿಳೆಯರ ಕೆಲಸಗಳು ಯಾವುವು ಎಂಬುದನ್ನು ನಿರ್ಧರಿಸುತ್ತವೆ. ಸಂತಾನೋತ್ಪತ್ತಿಯ ಕಾರ್ಯದಿಂದ ಮಕ್ಕಳನ್ನು ನೋಡಿಕೊಳ್ಳುವ ಮತ್ತು ಮನೆ ಕೆಲಸದ ಕಾರ್ಯಗಳು ಮಹಿಳೆಯರಿಗೆ ಮೀಸಲಾಗುತ್ತಿವೆ. ಆದರಂತೆ ಮಹಿಳೆಯರು ಮನೆ ಕೆಲಸ, ಮಕ್ಕಳು ಹಿರಿಯ ಕಾಯಿಲೆಯವರನ್ನು ನೋಡಿಕೊಂಡು ಪುರುಷರಿಗೆ ಪೂರಕವಾಗಿ ಕೆಲಸ ಮಾಡಬೇಕೆಂದು ನಿರೀಕ್ಷಿಸಲಾಗುತ್ತದೆ. ಸ್ತ್ರೀಯರು ಶಾರೀರಿಕವಾಗಿ ದುರ್ಬಲರಾಗಿರುವುದರಿಂದ ಮನೆಯಿಂದ ಹೊರಗೆ ಹೋಗಿ ಶ್ರಮದಾಯಕ ಕೆಲಸಗಳನ್ನು ಮಾಡಲಾಗುವುದಿಲ್ಲ. ಅವುಗಳನ್ನು ಪುರುಷರೇ ಮಾಡಬೇಕು ಮತ್ತು ಆದಾಯಗಳಿಸಿ ಕುಟುಂಬದ ಆರ್ಥಿಕ ಜವಾಬ್ದಾರಿಯನ್ನು ಹೊರಬೇಕು ಎಂದು ಈ ವ್ಯವಸ್ಥೆ ಹೇಳುತ್ತದೆ. "ಈ ಲಿಂಗಾಧಾರಿತ ಶ್ರಮವಿಭಜನೆ ಮಹಿಳೆಯರ ಉದ್ಯೋಗದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ. ಪುರುಷರಿಗೆ ಭಿನ್ನವಾದ ವೃತ್ತಿಯಲ್ಲಿ ತೊಡಗುವಂತೆ ಮಾಡುತ್ತದೆ. ಸ್ತ್ರೀಯರ ಪರಾಧೀನರನ್ನಾಗಿ ಮಾಡುತ್ತದೆ. ಪುರುಷರು ಮಾಡುವ ಅನೇಕ ಕೆಲಸಗಳನ್ನು ಮಹಿಳೆಯರು ಮಾಡಲು ಸಾಧ್ಯವಿಲ್ಲ, ಮಾಡಬಾರದು ಎಂಬ ಸುಳ್ಳು ಭಾವನೆಯನ್ನು ಮೂಡಿಸುತ್ತದೆ"(ಹೇಮಲತಾ ಎಚ್.ಎಂ;೨೦೦೪:೩೨). ಜೊತೆಗೆ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಅವಕಾಶವನ್ನು ತಪ್ಪಿಸಿ ಅವರ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ ಮತ್ತು ಹೊರ ಪ್ರಪಂಚಕ್ಕೆ ತೆರೆದುಕೊಳ್ಳುವುದನ್ನು ತಡೆಯುತ್ತದೆ.

ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸ್ತ್ರೀ-ಪುರುಷರಿಗೆ ಕೆಲಸಗಳನ್ನು ಹಂಚುವುದನ್ನು

ಲಿಂಗ ವ್ಯವಸ್ಥೆ ಶ್ರಮವಿಭಜನೆ ಎಂದು ಕರೆಯಲಾಗುತ್ತದೆ. ಇಲ್ಲಿ ಪುರುಷ ಪ್ರಧಾನತೆಯಿಂದ ರಚಿತಗೊಂಡಿರುವ ಸಾಮಾಜಿಕ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಅಂಶಗಳು ಹೆಂಗಸು ಮತ್ತು ಗಂಡಸರಿಗೆ ಬೇರೆ ಬೇರೆ ಕೆಲಸಗಳನ್ನು ಹಂಚುತ್ತವೆ ಮತ್ತು ನಿರ್ಧರಿಸುತ್ತವೆ. ಲಿಂಗ ವ್ಯವಸ್ಥೆಯ ಶ್ರಮವಿಭಜನೆಗೆ ಜೈವಿಕತೆ ಕಾರಣವಾಗುವುದಿಲ್ಲ. ಮನೆ ಕ್ಷೇತ್ರವನ್ನು ಸಾರ್ವಜನಿಕ ಕ್ಷೇತ್ರದಿಂದ ಪ್ರತ್ಯೇಕಿಸಿರುವುದೇ ಮುಖ್ಯ ಕಾರಣವೆಂದು ಸ್ತ್ರೀವಾದಿಗಳು ಹೇಳುತ್ತಾರೆ. ಈ ವ್ಯವಸ್ಥೆ ಸ್ತ್ರೀ-ಪುರುಷರಿಗೆ ಸಾಮಾಜಿಕವಾಗಿ ನಿರ್ಧರಿಸಲ್ಪಟ್ಟ ಪಾತ್ರ ಮತ್ತು ಕೆಲಸಗಳನ್ನು ವಿಭಜಿಸುತ್ತದೆ. ಇದು ಇಬ್ಬರಿಗೂ ಬೇರೆ ಬೇರೆ ಕೌಶಲ್ಯ, ಅರ್ಹತೆ ಮತ್ತು ಮನೋಭಾವನೆಗಳನ್ನು ಹೇರಿ ಹೆಂಗಸರು ಕೆಲವು ಕೆಲಸಗಳನ್ನು ಮಾಡ ಬೇಕು. ಇನ್ನು ಕೆಲವು ಕೆಲಸಗಳನ್ನು ಪುರುಷರಷ್ಟೆ ಮಾಡಬೇಕೆಂದು ಹೇಳುತ್ತದೆ. ಉದಾಹರಣೆ ಸ್ತ್ರೀಯರು ಮನೆ ಕೆಲಸದಲ್ಲಿ, ಪುರುಷರು ರಾಜಕೀಯ ಮತ್ತು ಇತರ ಉದ್ಯೋಗಗಳಲ್ಲಿ ತೊಡಗ ಬೇಕೆಂದು ಹೇಳುತ್ತದೆ. ಲಿಂಗ ವ್ಯವಸ್ಥೆ ಶ್ರಮವಿಭಜಯನೆಯಲ್ಲಿ ವ್ಯಕ್ತಿಯ ಸ್ವ-ಇಚ್ಛೆ, ವೈಯಕ್ತಿಕ ಅರ್ಹತೆ ಕೌಶಲ್ಯ, ಆಸಕ್ತಿ ಆಧಾರವಾಗಿರುವುದಿಲ್ಲ ಮತ್ತು ಸಮಾನ ಮೌಲ್ಯವುಳ್ಳದಾಗಿರುವುದಿಲ್ಲ. "ಸ್ತ್ರೀ-ಪುರುಷರು ಒಬ್ಬರನ್ನೊಬ್ಬರು ಅವಲಂಬಿಸುವಂತೆ ಮಾಡಿದರೂ ಸ್ತ್ರೀಯರಿಗೆ ಮಾರಕವಾಗಿ ಪುರುಷರಿಗೆ ಪೂರಕವಾಗಿ ರೂಪಿಸಲ್ಪಟ್ಟಿದೆ. ಅವರಿಬ್ಬರ ನಡುವೆ ಪಾತ್ರ ಘರ್ಷಣೆ ಉಂಟು ಮಾಡುತ್ತದೆ. ಅಸಮಾನ ಮೌಲ್ಯೀಕರಣದಿಂದ ಮಹಿಳೆಯರ ಕೆಲಸಕ್ಕಿಂತ ಪುರುಷರ ಕೆಲಸ ಹೆಚ್ಚಿನ ಪ್ರಾಮುಖ್ಯತೆ ಪಡೆಯುತ್ತದೆ. ಹೆಂಗಸರ ಕೆಲಸ ಕೀಳು, ಗಂಡಸರ ಕೆಲಸ ಶ್ರೇಷ್ಠವೆಂದು ಪರಿಗಣಿ ಸುತ್ತದೆ. ಹೆಚ್ಚು ಶ್ರಮದಾಯಕ, ಕೈ ಮತ್ತು ಬೆರಳುಗಳಿಂದ ಮಾಡುವ, ಆದಾಯತರದ ಅಥವಾ ಕಡಿಮೆ ಆದಾಯ ತರುವ ಕೆಲಸಗಳು ಸ್ತ್ರೀಯರ ಪಾಲಿಗಾದರೆ, ಯಂತ್ರಗಳಿಂದ ಮಾಡಲ್ಪಡುವ, ಶಕ್ತಿ ಪ್ರದರ್ಶನ ತೋರುವ, ಕೌಶಲ್ಯವುಳ್ಳ ಮತ್ತು ಹೆಚ್ಚು ಆದಾಯ ತರುವ ಕೆಲಸಗಳು ಪುರುಷರ ಪಾಲಾಗುತ್ತವೆ"(ಹೇಮಲತಾ ಎಚ್.ಎಂ;೨೦೦೪:೩೪).

ಕೈಗಾರೀಕರಣದ ಗೃಹ ಉತ್ಪಾದನೆಗಳು ಕಾರ್ಖಾನೆಯ ಉತ್ಪಾದನೆಗಳಾಗಿ ಪರಿವರ್ತನೆಗೊಂಡಾಗ ಲಿಂಗ ವ್ಯವಸ್ಥೆಯ ಶ್ರಮವಿಭಜನೆಯ ಸ್ವರೂಪವು ಬದಲಾಯಿತು. ಇದು ಬೇರೆ ಬೇರೆ ಸಮಯ ಮತ್ತು ಸ್ಥಳಗಳಲ್ಲಿ ಬೇರೆ ಬೇರೆ ಅರ್ಥಗಳನ್ನು ಪಡೆದುಕೊಂಡು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಬದಲಾಗುತ್ತಿರುತ್ತದೆ. "ಲಿಂಗಾಧಾರಿತ ಶ್ರಮವಿಭಜನೆಯ ಸ್ವರೂಪ ವಿಶ್ಲೇಷಿಸಿದರೆ ಲ್ಯಾನ್‌ಒಕ್ಲೆ ಅವರು ಇದು ಮಹಿಳೆಯನ್ನು ಮನೆಯೊಳಗೆ ಬಂಧಿಸಿ ಕುಟುಂಬದಲ್ಲಿ ಅವಳ ಪಾತ್ರ ಸ್ವಾಭಾವಿಕವಾದುದು, ಸಾರ್ವತ್ರಿಕವಾದದು ಹಾಗೂ ಅಗತ್ಯ ಕೂಡ. ಎಲ್ಲಾ ಸಮಾಜ

ಗಳಲ್ಲಿ ಸ್ತ್ರೀಯರು ಸ್ವಭಾವತಃ ಗೃಹಿಣಿಯಾಗಿರುತ್ತಾರೆ. ಸಮಾಜದ ಉಳಿವಿಗಾಗಿ ಸ್ತ್ರೀಯರು ಈ ಪಾತ್ರವನ್ನು ಒಪ್ಪಿಕೊಳ್ಳಲೇಬೇಕು ಎಂದು ಲಿಂಗಾಧಾರಿತ ಶ್ರಮವಿಭಜನೆ ಹೇಳುತ್ತದೆ" ಎಂದು ಹೇಳುತ್ತಾರೆ(ಹೇಮಲತಾ ಎಚ್.ಎಂ;೨೦೦೪:೩೫).

ಲಿಂಗಾಧಾರಿತ ಶ್ರಮವಿಭಜನೆಯ ಕಲ್ಪನೆಯನ್ನು ಮೂರು ಪ್ರಕಾರ ತಜ್ಞರು ಈ ರೀತಿ ದೃಢಪಡಿಸುತ್ತಾರೆ. ಕುಲಶಾಸ್ತ್ರಜ್ಞರು ಮಹಿಳೆಯರ ಕೌಟುಂಬಿಕ ಪಾತ್ರವನ್ನು ಸ್ವಾಭಾವಿಕವಾದುದು ಎಂದು ದಾಖಲಿಸಲು ಪ್ರಯತ್ನಿಸುತ್ತಾರೆ. ಮಾನವಶಾಸ್ತ್ರಜ್ಞರು ವಿವಿಧ ಸಮಾಜಗಳಲ್ಲಿರುವ ಲಿಂಗಾಧಾರಿತ ಶ್ರಮವಿಭಜನೆಯ ಸಾರ್ವತ್ರಿಕತೆಯನ್ನು ರುಜುವಾತು ಪಡಿಸಲು ಸಾಕ್ಷ್ಯಧಾರಗಳನ್ನು ಒದಗಿಸುತ್ತಾರೆ. ಸಮಾಜಶಾಸ್ತ್ರಜ್ಞರು ಸಮಾಜದ ಉಳಿವು ಮತ್ತು ನಿರ್ವಹಣೆಗೆ ಅಗತ್ಯವಾಗಿರುವ ಮಹಿಳೆಯರ ಸಾಂಪ್ರದಾಯಿಕ ಪಾತ್ರಕ್ಕೆ ಹೆಚ್ಚು ಒತ್ತು ನೀಡುತ್ತಾರೆ ಎಂಬುದು ಆ್ಯನ್ ಓಕ್ಲೆಯವರ ಅಭಿಪ್ರಾಯ. ಲಿಂಗ ವ್ಯವಸ್ಥೆಯ ಶ್ರಮವಿಭಜನೆಗೆ ಉದಾಹರಣೆಗಳೆಂದರೆ ಗೃಹಕಾರ್ಯಗಳು, ದಾಯಿಯ ಕೆಲಸ, ಮಕ್ಕಳ ಪಾಲನೆ, ಕೃಷಿಯಲ್ಲಿ ಸಸಿನೇಡುವುದು, ನಾಟಿ ಮಾಡುವುದು, ಕಳೆಕೀಳುವುದು ಮಹಿಳೆಯರ ಕೆಲಸವಾಗಿದೆ. ದೊಡ್ಡ ಕೈಗಾರಿಕೆಗಳಲ್ಲಿ, ಸರ್ಕಾರಿ ವಲಯದಲ್ಲಿ ಮತ್ತು ಆಧುನಿಕ ಉದ್ಯಮಗಳಲ್ಲಿ ಪುರುಷರನ್ನೆ ನೇಮಿಸಿಕೊಳ್ಳಲಾಗುತ್ತದೆ. ಗುಮಾಸ್ತ ಕಾರ್ಯದರ್ಶಿ ಹಾಗೂ ಶಿಕ್ಷಕ ವೃತ್ತಿಗಳಲ್ಲಿ ಮಹಿಳೆಯರು ಪ್ರಧಾನವಾಗಿ ಕಂಡುಬಂದರೆ, ಉನ್ನತಮಟ್ಟದ ಆಡಳಿತ ಮತ್ತು ಕಾರ್ಯನಿರ್ವಹಕ ಹುದ್ದೆಗಳಲ್ಲಿ ಪುರುಷರು ಪ್ರಧಾನವಾಗಿ ಕಂಡುಬರುತ್ತದೆ.

ಈ ಲಿಂಗ ವ್ಯವಸ್ಥೆಯ ಶ್ರಮವಿಭಜನೆಯಿಂದ ಹೆಚ್ಚಿನ ಸ್ತ್ರೀಯರು ಕಡಿಮೆ ವೇತನ, ದೀರ್ಘಕಾಲದ ಮತ್ತು ಶ್ರಮದಾಯಕ ಕೆಲಸಗಳಲ್ಲಿ ತೊಡಗುವಂತೆ ಮಾಡುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯೂ ಲಿಂಗ ವ್ಯವಸ್ಥೆಯ ಶ್ರಮವಿಭಜನೆಯನ್ನು ಬೆಂಬಲಿಸಿ ಪುನರ್ ಸ್ಥಾಪಿಸಲು ಪ್ರಯತ್ನಿ ಸುತ್ತದೆ. ಹೆಣ್ಣು ಮಕ್ಕಳನ್ನು ಶಿಕ್ಷಣ ತರಬೇತಿ ಮತ್ತು ಅನೇಕ ಬಗೆಯ ಕೌಶಲ್ಯಗಳನ್ನು ಅಭಿವೃದ್ಧಿ ಯಿಂದ ವಂಚಿಸಿ ವ್ಯವಸ್ಥೆಯ ಶ್ರಮವಿಭಜನೆ ನೀಡುವ ಕೆಲಸ ಮತ್ತು ಅನಿವಾರ್ಯವಾಗಿ ಪಾತ್ರಗಳನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ.

> "ಲಿಂಗಾಧಾರಿತ ಶ್ರಮವಿಭಜನೆ ಎರಡು ಲಿಂಗಗಳ ನಡುವಿನ ಶಾರೀರಿಕ ಮತ್ತು ಮಾನಸಿಕ ವ್ಯತ್ಯಾಸಗಳಿಂದ ರೂಪುಗೊಂಡಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಅದನ್ನು ಕೇವಲ ಜೈವಿಕ ಅಂಶಗಳಿಂದ ಅಷ್ಟೇ ಅಲ್ಲ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳಬೇಕು. ಲಿಂಗ ವ್ಯವಸ್ಥೆಯ ಶ್ರಮ ವಿಭಜನೆಯು ಮಹಿಳೆಯರ ಅಭಿವೃದ್ಧಿಗೆ ಮಾರಕವಾಗಿ ಕೆಲಸ

ಮಾಡಿದರೆ ಅದನ್ನು ಬದಲಾಯಿಸಬೇಕು. ಉದಾಹರಣೆ ಮನೆಕೆಲಸ ಹೆಂಗಸರೇ ಮಾಡಬೇಕೆಂಬ ರೂಢಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಅಥವಾ ಉದ್ಯೋಗಕ್ಕೆ ಅಡ್ಡಿಯಾದರೆ ಮನೆಕೆಲಸವನ್ನು ಪುರುಷರು ಹಂಚಿಕೊಳ್ಳು ವಂತಾಗಬೇಕು" (ಹೇಮಲತಾ ಎಚ್.ಎಂ;೨೦೦೪:೩೪).

ಹೆಣ್ಣು ಮಗು ಚಿಕ್ಕವಳಿರುವಾಗಲೇ ಕುಟುಂಬದಲ್ಲಿಯ ಬೋಧನೆ ಎಂದರೆ ಅಡುಗೆ ಮನೆಯ ಕೆಲಸದಲ್ಲಿ ಹೆಣ್ಣು ಮಗುವಿಗೆ ಸಹಾಯ ಮಾಡಲು ತಿಳಿಸಿದರೆ ಗಂಡು ಮಗುವಿಗೆ ತಂದೆಯ ಜೊತೆಯಲ್ಲಿ ಹೊರಗಿನ ಕೆಲಸವನ್ನು ಮಾಡಲು ತಿಳಿಸಲಾಗುತ್ತದೆ. ಮಹಿಳೆಯರು ಗೃಹಬಂಧನ ದಲ್ಲಿಯೇ ಇರುವಂತೆ ಪಿತೃಪ್ರಧಾನತೆಯೂ ಮಾಡುತ್ತದೆ. ಕೈಗಾರಿಕ ವಲಯಗಳಲ್ಲಿಯೂ ಸಹ ತಾರತಮ್ಯವನ್ನು ಕಾಣಬಹುದಾಗಿದೆ. ಕಡಿಮೆ ಸಾಮರ್ಥ್ಯವಿರುವ ಕೆಲಸಗಳಿಗೆ ಮಹಿಳೆಯರನ್ನು ಸೇರಿಸಿಕೊಳ್ಳುವುದು ಅವರವರ ವ್ಯಕ್ತಿತ್ವವನ್ನು ಗುರುತಿಸುವಂತೆ ಕೆಲಸವನ್ನೇ ನೀಡಲಾಗುತ್ತದೆ. ಕುಟುಂಬ ಮನೆಗಳೆಂಬ ಸರಪಣಿಗಳಿಂದ ಸಾಮಾಜಿಕ ಬಂಧನಕ್ಕೊಳಗಾದ ಹೆಣ್ಣಿನ ಸ್ಥಿತಿಗತಿಗಳು ಸ್ಪಷ್ಟವಾಗಿ ಕಾಣಲಾರಂಭಿಸಿದವು. ಶ್ರಮವಿಭಜನೆಯ ನೆಪದಲ್ಲಿ ಮನೆಯ ಒಳಗಿನ ಸೇವಾ ವಲಯವನ್ನು ಮಹಿಳೆಗೂ, ಮನೆಯ ಹೊರಗಿನ ಉತ್ಪಾದನಾ ವಲಯವನ್ನು ಪುರುಷನಿಗೂ ನಿಗದಿಗೊಳಿಸಿದ ತಂತ್ರದಲ್ಲಿ ಮಹಿಳೆಯ ದುಡಿಮೆಯನ್ನು ಅದೃಶ್ಯವಾಗಿಸಿ ಆ ಸಂಬಂಧದ ಗಳಿಕೆಯನ್ನು ಮಂಗಮಾಯ ಮಾಡಲಾಯಿತು. ಈ ಬಗೆಯ ಶ್ರಮ ವಿಭಜನೆಗಳಿಂದ ಮಹಿಳೆಯನ್ನು ಭೌತಿಕವಾದ ಉತ್ಪಾದನಾ ಚಟುವಟಿಕೆಗಳಿಂದ ಬೇರ್ಪಡಿಸಿದಷ್ಟು ಸುಲಭವಾಗಿ, ನಿಸರ್ಗದತ್ತವಾದ ಅವಳ ಸಂತಾನೋತ್ಪತ್ತಿ ಸಾಮರ್ಥ್ಯವನ್ನು ನಿಯಂತ್ರಿಸಿ ಅಧೀನಪಡಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಉತ್ಪಾದನಾ ಚಟುವಟಿಕೆ ಗಳಿಂದ ಅವಳನ್ನು ಬೇರ್ಪಡಿಸುವುದು ಅಸಾಧ್ಯವೇ ಆದರೆ, ಈ ಸಂಬಂಧದ ಗಳಿಕೆಯನ್ನು ಅವಳಿಗೆ ಧಕ್ಕದಂತೆ ಮಾಡುವ ತಂತ್ರಗಳನ್ನು ಪುರುಷ ಚಿಂತನೆ ಬಹುಬೇಗ ಶೋಧಿಸಿತು. ಸಂತಾನೋತ್ಪತ್ತಿಯ ಮೂಲ ಧನವಾದ ಅವಳ ಲೈಂಗಿಕತೆಯ ಚಟುವಟಿಕೆಗಳನ್ನು ನಿಯಂತ್ರಿಸುವ ನಿಯಮಾವಳಿಗಳನ್ನು ವಿವಾಹ ಎಂಬ ಸಂಸ್ಥೆಯ ಮೂಲಕ ಜಾರಿಗೊಳಿಸಿ, ಕುಟುಂಬ ಮತ್ತು ಮನೆಗಳೆಂಬ ನೆಲೆಗಳಲ್ಲಿ ಸ್ಥಿರಗೊಳಿಸಲಾಯಿತು.

ವಸಾಹತುಶಾಹಿ ಆಡಳಿತ ಸಂದರ್ಭದಲ್ಲಿ ಸ್ವಾತಂತ್ರ್ಯನಂತರವೂ ಮಹಿಳೆ ಶಿಕ್ಷಣ, ಉದ್ಯೋಗ ಗಳಂತಹ ಆಧುನಿಕ ಕ್ಷೇತ್ರಗಳಲ್ಲಿ ಮುಖಾಮುಖಿ ಆಗುವುದನ್ನು ವಿರೋಧಿಸಲಾಯಿತು. ಹೆಣ್ಣನ್ನು ಗೃಹಕೇಂದ್ರಿತವಾಗಿ, ಗಂಡನ್ನು ಸಮಾಜಕೇಂದ್ರಿತವಾಗಿ ಗ್ರಹಿಸುತ ಬಂದಿರುವ ಭಾರತೀಯ ಸಮಾಜಗಳು, ಹೆಣ್ಣು ಸಮಾಜ ಮುಖಿಯಾಗುವುದನ್ನು ಅಪರಾಧ ಎಂದೇ ಪರಿಭಾವಿಸಿವೆ. ಸಮಾಜ

ಸ್ವಾಸ್ಥ್ಯವಾಗಿರಬೇಕಾದರೆ ಹೆಣ್ಣು ಕುಟುಂಬಕ್ಕೆ ಮುಖಾಮುಖಿಯಾಗಿರಬೇಕು. ಗಂಡನ ಮತ್ತು ಆತನ ಕುಟುಂಬದವರ ಸೇವೆ ಹಾಗೂ ಮಕ್ಕಳ ಲಾಲನೆ-ಪಾಲನೆ ಮಾಡಿಕೊಂಡಿರಬೇಕಾದುದು ಹೆಣ್ಣಿನ ಕರ್ತವ್ಯ. ಮಹಿಳೆಯ ಈ ಎಲ್ಲಾ ಸೇವಾ ಕಾರ್ಯಗಳನ್ನು ನೈಸರ್ಗಿಕ ಕ್ರಿಯೆಗಳನ್ನಾಗಿಯೇ ನಿರ್ವಚಿಸ ಲಾಗಿದೆ. ಹೆಣ್ಣು ಸಾಮಾಜಿಕ ವಲಯಕ್ಕೆ ವಿಸ್ತರಿಸಿಕೊಳ್ಳತೊಡಗಿದರೆ ಅವಳ ಕೌಟುಂಬಿಕ ಕಾರ್ಯ ಚಟುವಟಿಕೆಗಳಲ್ಲಿ ವ್ಯತ್ಯಯಗಳು ಉಂಟಾಗಲು ಪ್ರಾರಂಭಿಸುತ್ತದೆ. ಇದರಿಂದಾಗಿ ಕುಟುಂಬ ಹಾಗೂ ಸಾಮಾಜಿಕ ಸ್ವಾಸ್ಥ್ಯಗಳೆರಡೂ ಕೆಟ್ಟು ಹೋಗುತ್ತವೆ ಎಂದು ಭಾವಿಸಲಾಗಿದೆ. ದೇಶ ಸುಸ್ಥಿರವಾಗಿರ ಬೇಕಾದರೆ, ನಾಡು ಭದ್ರವಾಗಿರಬೇಕಾದರೆ, ಕೌಟುಂಬಿಕ ಜೀವನ ಪಲ್ಲಟಗೊಳ್ಳಕೂಡದು, ಪಿತೃಪ್ರಧಾನ ವ್ಯವಸ್ಥೆಯಲ್ಲಿ ತ್ಯಾಗ ಜೀವಿಯೆಂದೆ ನಿರ್ವಚಿಸಲ್ಪಟ್ಟ ಮಹಿಳೆಗೆ ಕುಟುಂಬದ ಹಿತರಕ್ಷಣೆಗಾಗಿ ಶಿಕ್ಷಣ, ಉದ್ಯೋಗದಂತಹ ಕ್ಷೇತ್ರಗಳನ್ನು ಪ್ರವೇಶಿಸುವುದನ್ನು ತ್ಯಾಗ ಮಾಡಬೇಕೆಂದು ಅಪೇಕ್ಷಿಸಲಾಯಿತು. ಆಧುನಿಕತೆಗೆ ಒಳಗಾದ ಹಾಗೂ ಒಳಗಾಗುತ್ತಿರುವ ಮಹಿಳೆಯರಿಂದ, ದೇಶದ ಹಾಗೂ ಸಮಾಜದ ಬಿರುಕಿಗೆ ಕಾರಣವಾದ ಮಹಿಳೆಯ ಮೇಲೆಯೇ, ಅದನ್ನು ಸರಿಪಡಿಸುವ ಜವಾಬ್ದಾರಿಯಿದೆ.

ಹಿಂದಿನ ದಿನಗಳಲ್ಲಿ ಮಹಿಳೆ ಮನೆಯ ಹೊಸ್ತಿಲು ದಾಟಿ ಹೊರಗೆ ಹೋಗದಿದ್ದವಳು ಇಂದು ಮುಂಜಾನೆ ಮನೆಯಿಂದ ಮತ್ತು ಸಂಜೆ ಆಫೀಸಿನಿಂದ ಮನೆಗೆ ಜನಸಂದಣಿಯಲ್ಲಿ, ಬಸ್ಸಿನಲ್ಲಿ ನುಸುಳಿಕೊಂಡು ಪುರುಷನಿಗೆ ಸರಿಸಮಾನಳಾಗಿ ಓಡಾಡುತ್ತಿರುವುದನ್ನು ನೋಡಿ ಇದು ಸಮಾಜದ ಉನ್ನತಿಯ ಸಂಕೇತವೆಂದು ಹೇಳುವವರಿದ್ದಾರೆ. ಆದರೆ ಇದನ್ನು ಭ್ರಾಮಕ ಕಲ್ಪನೆಯಂದೆ ಹೇಳಬೇಕು. ಸಮಾಜದ ಉನ್ನತ ಸ್ಥಾನವಾಗುವುದು ಅದರ ಸರ್ವಾಂಗೀಣ ವಿಕಾಸದಿಂದ ಮತ್ತು ಸರ್ವಾಂಗಿಣ ವಿಕಾಸವಾಗುವುದು ಸ್ವಸ್ಥ ಹಾಗೂ ಸಂತುಷ್ಠ ಪರಿವಾರದಿಂದ ಅಂತಹ ಸ್ವಸ್ಥ, ಸಂತುಷ್ಟ ಕುಟುಂಬಕ್ಕೆ ಸ್ತ್ರೀಯೇ ತಳಪಾಯ. ಈ ದೃಷ್ಟಿಯಿಂದ ನೋಡಿದಾಗ ಉದ್ಯೋಗ ನಿರಂತರವಾಗಿರುವ ಮಹಿಳೆಯರಲ್ಲಿ ಸುಖ, ಸಂತುಷ್ಟಿಗಳಿಂದಿರುವ ಮಹಿಳೆಯರ ಕುರಿತು ಸಮಾಜದ ದೃಷ್ಟಿಕೋನ ಹಾಗೂ ನೌಕರಿ ಮಾಡುವ ಮಹಿಳೆಯ ಪರಿಸ್ಥಿತಿ ತ್ರಿಜನ್ಯ ದೃಷ್ಟಿಕೋನ ಎರಡು ಭಿನ್ನವಾಗಿರುತ್ತವೆ. ನೌಕರಿ ಮಾಡುವ ಮಹಿಳೆಯರನ್ನು ಮೂರು ಶ್ರೇಣಿಗಳಾಗಿ ವಿಭಾಗಿಸಬಹುದು.

ಇಂದಿನ ಆರ್ಥಿಕ ಸಮಸ್ಯೆಗಳಿಂದಾಗಿ ಮತ್ತು ಸ್ಪರ್ಧಾತ್ಮಕ ಧಾವಂತ ಜೀವನದಿಂದಾಗಿ ಮಧ್ಯಮ ವರ್ಗದ ಮಹಿಳೆಯರಿಗೆ ನೌಕರಿ ಮಾಡುವುದು ಅನಿವಾರ್ಯವಾಗಿ ಪರಿಣಮಿಸಿದೆ. ಜೀವನ ನಿರ್ವಹಣೆ ಗಾಗಿ ನೌಕರಿ ಮಾಡುತ್ತಲಿರುವ ಮಹಿಳೆಯರ ಜೀವನ ಪರಿಚಯವಾಗುತ್ತದೆ. ಅವರ ಜೀವನ ಪೂರ್ಣಯಾಂತ್ರಿಕವಾಗಿ ಪರಿಣಮಿಸುತ್ತದೆ. ಟಿ.ಆರ್. ಚಂದ್ರಶೇಖರರವರ ಲೇಖನದ ಪ್ರಕಾರ ಉತ್ಪಾದನೆಯನ್ನು ಮೂರು ರೀತಿಯಲ್ಲಿ ತಿಳಿಸಿದ್ದಾರೆ.

೧. ಉತ್ಪಾದನಾ ದುಡಿಮೆ ೨. ಮನೆಯೊಳಗಿನ ದುಡಿಮೆ ೩. ಸಂತಾನೋತ್ಪತ್ತಿ ದುಡಿಮೆ

"ಹೆಣ್ಣಿನ ಬೇವರ ಹನಿಗಳ ಮೇಲೆ ನಿರತ ಉತ್ಪಾದನೆ, ದುಡಿಮೆ, ಮನೆಯೊಳಗಿನ ಗೋಳಿನ ಕಣ್ಣೀರ ಮೇಲೆ ನಿಂತ ಮನೆಯೊಳಗಿನ ದುಡಿಮೆಯಾದರೆ ರಕ್ತ ಹಂಚಿಕೊಂಡು ಕೆಂಪು ರಕ್ತದ ಹನಿಗಳ ಮೇಲೆ ನಿಂತ ಸಂತಾನೋತ್ಪತ್ತಿಯ ದುಡಿಮೆ ಹೀಗೆ ಮಹಿಳೆಯರ ದುಡಿಮೆ, ಬೇವರ ಹನಿ, ಕಣ್ಣೀರ ಹನಿ ಮತ್ತು ರಕ್ತದ ಅಧಿಕ ಶ್ರಮದಾಯಕವಾಗಿದೆ. ಈ ಮೂರು ಬಗೆಯ ದುಡಿಮೆಯಲ್ಲಿ ಮಹಿಳೆಯರು ದುಡಿಯುತ್ತಿದ್ದಾರೆ. ಆದರೆ ಪ್ರಧಾನ ಧಾರೆಯ ವ್ಯವಸ್ಥೆಯು ಈ ಬಗೆಯ ದುಡಿಮೆಯನ್ನು ಆಕೆ ದುಡಿದಿದ್ದರೂ ಅವಳ ದುಡಿಮೆಯನ್ನು ಅದೃಶ್ಯಗೊಳಿಸಿ ದುಡಿಮೆ ಗಾರರಳಾಗಿ ಪರಿಗಣನೆ ಮಾಡುತ್ತಿಲ್ಲ"(ಚಂದ್ರಶೇಖರ್ ಟಿ.ಆರ್;೨೦೦೧:೨೯).

ಆರ್ಥಿಕತೆಯೆಂಬುದು ಸಮಾಜದ ಒಂದು ಭಾಗವಾಗಿದೆ. ಆರ್ಥಿಕತೆಯೇ ಸಮಾಜವಲ್ಲ. ಆರ್ಥಿಕತೆಯ ಗಡಿಯನ್ನು ಮೀರಿ ದುಡಿಮೆಯ ಚಟುವಟಿಕೆಗಳು ನಡೆಯುತ್ತಿರುತ್ತವೆ. ಸಮಾಜ ಮತ್ತು ಆರ್ಥಿಕತೆಗಳ ನಡುವಿನ ಭಿನ್ನತೆಯೇ ಮಹಿಳೆ ಮತ್ತು ಲಿಂಗ ಸಂಬಂಧಗಳ ದೃಷ್ಟಿಯಿಂದ ಬಹಳ ಮುಖ್ಯವಾಗಿದೆ. ಆರ್ಥಿಕತೆಯ ಗಡಿಯ ಆಚೆಗೆ ಅನೇಕ ಬಗೆಯ ದುಡಿಮೆ ಚಟುವಟಿಕೆಗಳು ನಡೆಯುತ್ತಿರುತ್ತವೆ. ಹೀಗೆ ಆರ್ಥಿಕತೆಯ ಗಡಿಯ ಆಚೆ ಮಹಿಳೆಯರು ತೊಡಗಿಕೊಂಡಿರುತ್ತಾರೆ. ಆರ್ಥಿಕತೆಯ ಗಡಿ ಆಚೆಯಲ್ಲಿ ನಡೆಯುವ ದುಡಿಮೆ ಚಟುವಟಿಕೆಯನ್ನು ಜೈವಿಕವೆಂದು ಪ್ರಾಕೃತಿಕವೆಂದು ಅವುಗಳು ಕೇವಲ ಉಪಯೋಗಿ ಮಹತ್ವ ಹೊಂದಿರುತ್ತವೆಂದು ಹೇಳಲಾಗಿದೆ. ಆರ್ಥಿಕತೆಯ ಚೌಕಟ್ಟಿನಲ್ಲಿ ನಡೆಯುವ ದುಡಿಮೆಯನ್ನು ಆರ್ಥಿಕೋತ್ಪದನೆಯೆಂದು ಆರ್ಥಿಕತೆಯ ಗಡಿಯ ಆಚೆಯಲ್ಲಿ ನಡೆಯುವ ಬಹುಪಾಲು ಚಟುವಟಿಕೆಗಳನ್ನು ಸಂತಾನೋತ್ಪತ್ತಿ ಚಟುವಟಿಕೆಗಳೆಂದು ಪರಿಗಣಿಸಲಾಗಿದೆ. ಆರ್ಥಿಕತೆಯ ಚೌಕಟ್ಟಿನಲ್ಲಿ ನಡೆಯುವ ಚಟುವಟಿಕೆಗಳು ಮಾತ್ರ ಸಂಪತ್ತನ್ನು ಉತ್ಪಾದಿಸಬಲ್ಲವು ಎಂಬ ನಂಬಿಕೆ ಇಲ್ಲಿದೆ. ಆರ್ಥಿಕತೆಯ ಚೌಕಟ್ಟಿನಲ್ಲಿ ನಡೆಯುವ ಚಟುವಟಿಕೆಗಳಿಗೆ ಸಮಾಜ ಮನ್ನಣೆ ನೀಡುತ್ತದೆ. ಸಾಮಾಜಿಕವಾಗಿ ಮನ್ನಣೆಯಿಲ್ಲದ, ಕೇವಲ ಉಪಯೋಗಿ ಮಹತ್ವವುಳ್ಳ ಚಟುವಟಿಕೆಗಳನ್ನೆಲ್ಲಾ ಮಹಿಳೆಯರಿಗೆ ಮುಡುಪಾಗಿಡಲಾಗಿದೆ. ಅತ್ಯಂತ ವಿಶಾಲವಾದ ಅರ್ಥದಲ್ಲಿ ಇಂತಹ ಚಟುವಟಿಕೆಗಳನ್ನು ಸಂತಾನೋತ್ಪತ್ತಿ ಚಟುವಟಿಕೆಗಳು ಎನ್ನಲಾಗಿದೆ. ಹೀಗೆ ಆರ್ಥಿಕತೆ ಎಂಬುದು ಪುರುಷ ಪ್ರಪಂಚವಾಗಿ ಪುರುಷ ಪ್ರಧಾನವಾಗಿ ರೂಪಗೊಂಡು ಬಿಟ್ಟಿದೆ. ಆರ್ಥಿಕತೆಯ ಚೌಕಟ್ಟಿನಲ್ಲಿ ಆರ್ಥಿಕೋತ್ಪಾದನೆಯಲ್ಲಿ ಮಹಿಳೆಯರೂ ಇರುತ್ತಾರೆ. ಅವರು ಆರ್ಥಿಕೋತ್ಪಾದನೆಯಲ್ಲಿ ತೊಡಗಿದ್ದರು ಅವರ ಚಟುವಟಿಕೆಗಳಿಗೆ, ಅವರು ಉತ್ಪಾದಿಸುವ ಸರಕು

ಸೇವೆಗಳಿಗೆ ಉಪಯೋಗಿ ಮಹತ್ವ (use value) ಇರುತ್ತದೆ ವಿನಃ ವಿನಿಮಯ ಮಹತ್ವ (exchange value) ಇರುವುದಿಲ್ಲ.

ಸಾಮಾಜಿಕವಾಗಿ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳೊಂದಿಗೆ ಮಹಿಳೆಯರ ದುಡಿಮೆಯ ಸ್ವರೂಪವು ಬದಲಾಗುತ್ತಾ ಬಂದಿದೆ. ಆದರೆ ದುಡಿಮೆಗಾರ ಎಂಬುದು ಪುರುಷ ವಾಚಿ ನುಡಿಯಾಗಿದೆ. ಇದು ಸ್ತ್ರೀವಾದಿ ನುಡಿಯಾಗುವುದು ಸಾಧ್ಯವೇ ಇಲ್ಲವೆಂದು ಹೇಳಲಾಗುತ್ತಿದೆ. ಪುರುಷಶಾಹಿ ವಿಚಾರ ಪ್ರಣಾಳಿಕೆಯು ಮಹಿಳೆ ದುಡಿಮೆಯನ್ನು ಅತ್ಯಂತ ಸೀಮಿತವಾದ 'ಎಸಿನ್ಸಿಯಲ್ಲಿ ಸ್ಟ್ರೌ' ನೆಲೆಯಲ್ಲಿ ಪರಿಭಾವಿಸಿಕೊಂಡಿದೆ. ಈ ಬಗೆಯ ಮೊಟಕುವಾದಿ (Reduationist) ನಿರ್ವಚನ ದಿಂದಾಗಿ ಮಹಿಳೆಯರಿಗೆ ತೀವ್ರ ಅನ್ಯಾಯವಾಗಿದೆ. ಜ್ಞಾನ ವಿಜ್ಞಾನಗಳು ನಿರ್ವಚಿಕೊಂಡಿರುವ ದುಡಿಮೆ ಯಲ್ಲಿ ಮನೆ ವಾರ್ತೆ ಕುಟುಂಬ ಸಂಬಂಧಿ ದುಡಿಮೆ ಸೇರುವುದಿಲ್ಲ. ಸಾಮಾಜಿಕವಾಗಿ ಆರ್ಥಿಕತೆ ರಾಜಕೀಯವಾಗಿ ಏನೆಲ್ಲಾ ಬದಲಾವಣೆಗಳು ಸಂಭವಿಸಿದರೂ ಮನೆವಾರ್ತೆಯಿಂದ ಮಹಿಳೆಯರಿಗೆ ಬಿಡುಗಡೆ ದೊರೆಯುತ್ತಿಲ್ಲ. ಈ ದೃಷ್ಟಿಯಿಂದ ಮಹಿಳೆಯರ ದುಡಿಮೆಯನ್ನು ಆ ಚಾರಿತ್ರಿಕ (Atristorical)ವೆಂದು ಕರೆಯಬಹುದು. 'ಮಹಿಳೆಯರ ದುಡಿಮೆಯನ್ನುವುದು ಹುಟ್ಟಿನಿಂದಲೆ ನಿರ್ದಿಷ್ಟವಾಗುವ ದುಡಿಮೆಯಾಗಿದೆ. ಮಹಿಳೆಯಾಗಿ ಹುಟ್ಟಿದ ಕಾರಣಕ್ಕಾಗಿ ಅವಳು ಲಿಂಗ ನಿರ್ದಿಷ್ಟ ಕಾರ್ಯಗಳನ್ನು ಮಾಡಬೇಕಾಗಿದೆ ಮತ್ತು ಅವಳ ದುಡಿಮೆಯು ಜ್ಞಾನ ವಿಜ್ಞಾನಗಳಲ್ಲಿ ದುಡಿಮೆಯೆಂದು ಪರಿಗಣಿತವಾಗಿಲ್ಲ.

ಹೆಣ್ಣಿನ ಕೆಲಸದ ಪರಿಕಲ್ಪನೆಯ ಅಧ್ಯಯನಕ್ಕೆ ನಮ್ಮ ಸಾಮಾಜಿಕ ರಚನೆಯ ಮೂಲಭೂತ ಘಟಕವಾದ ಕುಟುಂಬ ಅಧ್ಯಯನ ಮಾಡುವುದರಿಂದ ಹೊಸ ತೀರ್ಮಾನವನ್ನು ತಲುಪುವುದು ಸಾಧ್ಯವಾಗುತ್ತದೆ. ಹೀಗೆ ಹೊರಟಾಗ ಮನೆಯಲ್ಲಿ ಗಂಡ ಹೆಣ್ಣಿನ ಪಾತ್ರ ಏನು? ಅವರ ಕೆಲಸಗಳೇನು? ಈ ಕೆಲಸಗಳ ಬಗೆಗೆ ಹೆಣ್ಣು-ಗಂಡಿನ ಗ್ರಹಿಕೆ ಏನು? ಕೆಲಸದ ಹಂಚಿಕೆಯ ಸ್ವರೂಪ ಮತ್ತು ಪ್ರಮಾಣ ಏನು? ಮತ್ತು ಈ ಶ್ರಮವಿಭಜನೆಯ ಹಿಂದಿನ ತಾತ್ವಿಕತೆ ಏನು? ಎನ್ನುವ ಪ್ರಶ್ನೆಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ಕಾರಣ, ನಮ್ಮ ಸಾಮಾಜಿಕ ರಚನೆಯ ಒಳಗಡೆ ಕೆಲಸದ ಪರಿಕಲ್ಪನೆ ಕೂಡ ಪುರುಷನಿಷ್ಠ ದೃಷ್ಟಿಕೋನದ ಅರ್ಥೈಸುವಿಕೆಯೇ ಆಗಿದೆ. ಹೆಣ್ಣಿನ ವಿವಾಹ, ಲೈಂಗಿಕತೆ, ತಾಯ್ತನ, ಮನೆವಾರ್ತೆ ಯಾವುವೂ ಅವಳ ಸ್ವಂತದ ಆಯ್ಕೆಯ ಪ್ರಸಂಗವಲ್ಲ, ಮಹಿಳೆಯರು ಇಂತಹ ಆಯ್ಕೆ ರಹಿತ ಸ್ಥಿತಿಯನ್ನು ತಲುಪಿದ್ದು ಹೇಗೆ ಕೌಟುಂಬಿಕ ಮೌಲ್ಯಗಳ ಮೂಲ ರಚನೆಯಲ್ಲಿಯೇ ಹೆಣ್ಣಿನ ಈ ಸಮಸ್ಯೆ ಅಡಗಿದೆ. ಎನ್ನುವ ವಾಸ್ತವವನ್ನು ಅರಿಯಬೇಕಾಗಿದೆ.

ಈ ಸ್ತ್ರೀ ಶೋಷಕ ಸಂರಚನೆಗಳು ಎಷ್ಟು ಸೂಕ್ಷ್ಮವಾಗಿವೆ ಎಂದರೆ ಕುಟುಂಬದೊಳಗಿನ ನಡವಳಿಕೆ ಮತ್ತು ನಿರೀಕ್ಷೆಗಳು ಗಂಡನ್ನು 'ಗಂಡಸಾಗು'ವಂತೆ ಪ್ರೋತ್ಸಾಹಿಸಿದರೆ ಹೆಣ್ಣನ್ನು 'ಹೆಂಗಸಾಗು'ವಂತೆ ಒತ್ತಾಯಿಸುತ್ತವೆ. ಹೀಗಾಗಿ ಆಟದ ಪರ್ಯಾದ ಜಗತ್ತಿನಲ್ಲೂ ಹೆಣ್ಣು-ಗಂಡಿನ ಕೆಲಸದ ವಿನ್ಯಾಸಗಳು ವಾಸ್ತವ ರಚನೆಗಳಿಗಿಂತ ಭಿನ್ನವಾಗಿರುವುದು.

ಪಿ.ವಿ.ಎಲ್. ರಮಣ ಮತ್ತು ಕೆ. ರಂಗರಾವ್ ಹೇಳುವಂತೆ "At one level a women's earinings could be viewed as a source of indeependence for her, but in a male dominated value system with a strong religious base, a women's indeependent earings may turn into a source of double explotitation within the home and outside. In such context, discrimination turns into oppresion." (Gender and Society in India, Vol-I, P.264)

ಹೆಂಗಸು ಮನೆಯಲ್ಲಿ, ಹೊಲಗದ್ದೆಗಳಲ್ಲಿ ಎಷ್ಟೇ ದುಡಿಯಲಿ ಆ ದುಡಿಮೆಯನ್ನು ಕುಟುಂಬದ ಪುರುಷ ಸದಸ್ಯರುಪರಿಗಣಿಸುವುದು ತೀರಾ ಅಪರೂಪ. ಮನೆಯ ಯಾವ ಬಗೆಯ ಆದಾಯವಿರಲಿ ಅದರ ವಿನಿಯೋಗದ ಹಕ್ಕಿರುವುದು ಪುರುಷನಿಗೆ ಮಾತ್ರ. ಇಂದು ನಗರಗಳಲ್ಲಿರುವ ಅನೇಕ ಮಧ್ಯಮ ವರ್ಗದ ಕುಟುಂಬಗಳಲ್ಲಿ ಮಹಿಳೆ ಮನೆಯ ಹೊರಗೆ ದುಡಿಯುತ್ತಿದ್ದಾಳೆ. ಈ ಉದ್ಯೋಗ ಪರತೆಯಿಂದ ಮನೆಯಲ್ಲಿ ಪುರುಷನ ಸ್ಥಾನದಲ್ಲಿ ಕೆಲಮಟ್ಟಿನ ವ್ಯತ್ಯಾಸ ಉಂಟಾಗಿದೆ. ಕುಟುಂಬದ ಆರ್ಥಿಕತೆ ತನ್ನನ್ನೇ ಅವಲಂಬಿಸಿದೆ ಎಂದು ಆತ ಬೀಗುವಂತಿಲ್ಲ. ಆ ಮೂಲಕ ಪಡೆಯುತ್ತಿದ್ದ ವಿಶೇಷ ಮನ್ನಣೆಗೆ ತುಸು ಪೆಟ್ಟು, ಬೀಳುತ್ತಿದೆ. ಹೊರಗೆ ದುಡಿಯುವ ಮಹಿಳೆ ಮನೆಯ ಕೆಲಸಗಳಿಗೆ ಗಂಡನ ಸಹಕಾರಬೇಕೆಂದು ದನಿಯೆತ್ತುತ್ತಿದ್ದಾಳೆ.



"It was aiso because of the attitudes of menm women and socieity to wards wome's employment, which was approved mainly as a means of supplementing the family income and not as a means of woman's own development and satisfaction"(Shakuntala C. Sidrams hettar and A.E. Punit - Gender and society in India (Ed.), R. Indira and Deepak Kumar hehera, P. 234) ಎನ್ನುವ ಅಭಿಪ್ರಾಯ ಸಹಿಯಾದುದೇ ಆಗಿದೆ. ಆರ್ಥಿಕ ಸ್ವಾತಂತ್ರ್ಯದೊಂದಿಗೆ ಸಾಮಾಜಿಕ ಧೋರಣೆ, ರಾಜಕೀಯ ವ್ಯವಸ್ಥೆ, ಲಿಂಗಾಧಾರಿತ ದೃಷ್ಟಿಕೋನ ಇವೆಲ್ಲ ಮಾನವ ಬದುಕಿನ ನಿಯಂತ್ರಕಳಾಗಿ ಕೆಲಸ ಮಾಡುವುದರಿಂದ ಇವುಗಳಲ್ಲಿ ಬದಲಾವಣೆಯಾಗಿದೆ ನಿಜವಾದ ಅರ್ಥದಲ್ಲಿ ಮಹಿಳೆ ಆರ್ಥಿಕವಾಗಿ ಸ್ವಾವಲಂಬಿಯಾಗಲು ಸಾಧ್ಯವಾಗದಿರದು. ಮಹಿಳೆಯ ಪಯಣದ ದಾರಿ

ಸುಗಮವಾದುದಲ್ಲ, ಕಲ್ಲು ಮುಳ್ಳುಗಳಿಂದ ಕೂಡಿದುದು ಎನ್ನುವ ಅಂಶವನ್ನು ಅನಾವರಣಗೊಳಿಸಿವೆ. ವಿಜಯಾ ದಬ್ಬೆಯವರು ಹೇಳುವಂತೆ "ಪುರುಷ ಕೇಂದ್ರೀತವಾದ ವ್ಯವಸ್ಥೆ ಮಹಿಳೆಯ ಹೊರಗಿನ ದುಡಿಮೆಯನ್ನು ಅವಳಿಗೆ ಸವಾಲಾಗಿಯೇ ಉಳಿಸಿದೆ.. ಹೊರಗಿನ ದುಡಿತ ಒಂದರಲ್ಲಿಯೇ ಸ್ತ್ರೀ ವಿಮೋಚನೆ ಇದೆಯೆಂದಾಗಲಿ ಹೊರಗೆ ದುಡಿಯುತ್ತಿರುವ ಮಹಿಳೆಯರಿಗೆ ಸಮಸ್ಯೆಗಳೆ ಇಲ್ಲ ವೆಂದಾಗಲೀ ಇದರ ಅರ್ಥವಲ್ಲ. ಆದರೆ ಹೊರಗಿನ ದುಡಿಮೆ, ದುಡಿಮೆಗೆ ತಕ್ಕ ಪ್ರತಿಫಲ ಅವಳ ಹಕ್ಕು ಹಾಗೂ ಸ್ತ್ರೀ ವಿಮೋಚನೆಯ ಅತ್ಯಂತ ಮೂಲಭೂತ ಅಗತ್ಯ. ಆರ್ಥಿಕ ಸ್ವಾಲಂಬನೆ ಯೆಂಬುದು ಕಷ್ಟ ಸಂಗತಿ"(ವಿಜಯದಬ್ಬೆ;೧೯೯೭:೬) ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಮನೆಯ ದುಡಿಮೆಗೆ ಗೌರವ ದೊರೆತಾಗ ಮಹಿಳೆ ನಿರಾಳವಾಗಿ ಬದುಕನ್ನು ಎದುರಿಸಲು ಸಮರ್ಥ ಳಾಗುತ್ತಾಳೆ.

ಮಧ್ಯಮವರ್ಗದ ಹಾಗೂ ಕೆಳವರ್ಗದ ಸ್ತ್ರೀಯರು ಬಹುದೊಡ್ಡ ಸಂಖ್ಯೆಯಲ್ಲಿ ದುಡಿಯು ತ್ತಿರುವುದರ ಪರಿಣಾಮವಾಗಿ ಕುಟುಂಬದ 'ಜೀವನ ಶೈಲಿ'ಯಲ್ಲಿ ಕುಟುಂಬದ ಖರ್ಚುಗಳಲ್ಲಿ, ಕೌಟುಂಬಿಕ ಬಳಕೆಯ ವಸ್ತುಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಕುಟುಂಬದ ಹೊರಗಡೆಯ ಉದ್ಯೋಗ ಸ್ತ್ರೀಯರ ಗೌರವ ಸ್ಥಾನಮಾನವನ್ನು ಹೆಚ್ಚಿಸಿದರೂ ಅವರ ಕೆಲಸದ ಭರವನ್ನು ದುಪ್ಪಟ್ಟ ಗೊಳಿಸಿದೆ. ಪಾಶ್ಚೀಮಾತ್ಯ ದೇಶಗಳಲ್ಲಿಯೂ ಕೂಡ ದುಡಿಯುವ ಪತ್ನಿಯರು ತಮ್ಮ ಕಛೇರಿ ಕೆಲಸಗಳ ಜೊತೆಗೆ ಮನೆಕೆಲಸದ (ಅಡುಗೆಮನೆ, ಮಕ್ಕಳ ಲಾಲನೆ-ಪಾಲನೆ, ಶುಚಿತ್ವ ಕಾಯ್ದುಕೊಳ್ಳುವ) ಹೊರೆಯನ್ನು ಕೂಡ ಹೊರಬೇಕಾದ ಸ್ಥಿತಿಯಿದೆ ಮನೆಗೆಲಸದ ಹೊರೆಯನ್ನು ನಿಭಾಯಿಸುವಲ್ಲಿ ಗಂಡಂದಿರ ಸಹಕಾರ ನಿರೀಕ್ಷೆಯಷ್ಟು ಎಲ್ಲಿಯೂ ಕೂಡ ಸಿಗುತ್ತಿಲ್ಲ. ಇದರಿಂದ ಕುಟುಂಬದ ಕೆಲವೊಂದು 'ಸಜ್ಜನಿಕೆ'ಯನ್ನು ಕೈಬಿಡುವುದು. ಉದಾಹರಣೆ ಬಟ್ಟೆಯನ್ನು ಒಗೆದು ಇಸ್ತ್ರೀ ಮಾಡಲು ದೋಬಿಗಳಿಗೆ ನೀಡುವುದು, ಹೋಟೆಲ್‌ಗಳಿಂದ ಅಂಗಡಿಗಳಿಂದ ಸಿದ್ಧ ಆಹಾರವನ್ನು ತರುವುದು, ಸ್ನೇಹಿತರು ಬಂಧುಗಳು ಬಂದಾಗ ಹೋಟೇಲ್‌ಗಳಿಂದ ಊಟ ತರಿಸುವುದು ಇತ್ಯಾದಿ ಅನಿವಾರ್ಯವಾಗುವುದು. ಈಗಿನ ಬದಲಾದ ಪರಿಸ್ಥಿತಿಯಲ್ಲಿಯೂ ಪಶ್ಚಿಮದ ದೇಶಗಳನ್ನೊಳ ಗೊಂಡಂತೆ ಎಲ್ಲೆಡೆಯಲ್ಲಿಯೂ ಪುರುಷನಿಗೆ ಪ್ರಾಶಸ್ತ್ಯವಿದೆ. ಆದರೂ ಈಗಿನ ಕುಟುಂಬವನ್ನು ಪಿತೃಪ್ರಧಾನವಾದುದೆನನ್ನುವಂತಿಲ್ಲ. "ಅದು ಉಭಯ ಪ್ರಧಾನವಾದುದು" ಎಂಬುದೇ ಹೆಚ್ಚು ಸತ್ಯ. ಕೌಟುಂಬಿಕ ವಿಚಾರಗಳಲ್ಲಿ ಸ್ತ್ರೀಯರ ಮಾತಿಗಂತೂ ಇನ್ನೂ ಹೆಚ್ಚಿನ ಪ್ರಾಮುಖ್ಯತೆವಿದೆ. ವ್ಯಕ್ತಿವಾದದ ಪ್ರಭಾವದಿಂದಾಗಿ ವ್ಯಕ್ತಿಯ ವಯಸ್ಸು ಮತ್ತು ಅಂತಸ್ತಿಗಿಂತ ಮಿಗಿಲಾದ ಸಾಮರ್ಥ್ಯ ಹಾಗೂ

ಸಾಧನೆಗಳಿಗೆ ಮಹತ್ವ ಲಭಿಸುವ ಸ್ಥಿತಿ ಕುಟುಂಬದಲ್ಲಿಯೂ ಇದೆ. ಆದ್ದರಿಂದ ಈಗ ಕಿರಿಯರಿಗೂ ಗೌರವವಿದೆ. ಹಿರಿಯ ಗಂಡಸಿನ 'ಸರ್ವಾಧಿಕಾರೀ ಪ್ರವೃತ್ತಿ'ಗೆ ಈಗ ತಡೆಬಿದ್ದಿದೆ. ಕುಟುಂಬದ ಅಧಿಕಾರ ಈಗ ಹೆಚ್ಚು ಪ್ರಜಾಸತ್ತಾತ್ಮಕ ತತ್ವದ ನೆಲೆಯಲ್ಲಿ ಚಲಾಯಿಸಲ್ಪಡುತ್ತಿದೆ ಎನ್ನಬಹುದು. ಹಿರಿಯರೊಂದಿಗೆ ಮಾತನಾಡುವಾಗ ಹಾಗೂ ವ್ಯವಹರಿಸುವಾಗ ಕಿರಿಯರು ಈಗ ಹೆಚ್ಚು ಧೈರ್ಯವಾಗಿ ಹಿಂಜರಿಕೆಯಿಲ್ಲದೆ ವರ್ತಿಸಬಲ್ಲವರಾಗಿದ್ದಾರೆ. ಆಸ್ತಿಯ ಹಕ್ಕುಗಳ ವಿಷಯದಲ್ಲಿಯೂ ಈಗ ಬಹಳಷ್ಟು ಮಾರ್ಪಾಡುಗಳಾಗಿದ್ದು ಸ್ತ್ರೀಯರೂ ಪುರುಷರಷ್ಟೇ ಸಮಾನ ಹಕ್ಕುಗಳನ್ನು ಹೊಂದಿದವರಾಗಿದ್ದಾರೆ. ಉತ್ತರಾಧಿಕಾರ ಹಾಗೂ ವಾರಸುದಾರಿಕೆಯ ಕಾಯ್ದೆಗಳು ಸ್ತ್ರೀ-ಪುರುಷ ಸಮಾನತೆಗೆ ಪೂರಕವಾಗಿವೆ. ಇದರಿಂದ ಸ್ತ್ರೀಯರ ಆತ್ಮವಿಶ್ವಾಸ ಹಾಗೂ ಪ್ರಾಮುಖ್ಯ ಮತ್ತಷ್ಟು ಹೆಚ್ಚಲು ಅನುಕೂಲವಾಗಿದೆ.

ಪರಂಪರಾಗತ ಕುಟುಂಬವು ಕೆಲವೊಂದು ವಿಷಯಗಳಲ್ಲಿ ಶಿಸ್ತಿಗೆ ಹಾಗೂ ಸಂಪ್ರದಾಯಕ್ಕೆ ಬದ್ಧವಾಗಿದ್ದವು. ಎಲ್ಲವೂ ವ್ಯವಸ್ಥಿತ ಕ್ರಮದಂತೆ, ನಿಗದಿತ ರೀತಿಯಂತೆ, ಸಾಂಪ್ರದಾಯಿಕ ಮಾದರಿ ಯಲ್ಲಿಯೇ ನಡೆಯುವುದು ಅದರ ಕ್ರಮ. ದೈನಂದಿನ ಕುಟುಂಬದ ವ್ಯವಹಾರದಿಂದ ಹಿಡಿದು ಆಸ್ತಿಯನ್ನು ಕೊಡುವ, ಕೊಳ್ಳುವ ಹಾಗೂ ಮಕ್ಕಳಿಗೆ ಶಿಕ್ಷಣ ನೀಡುವ ಇಲ್ಲವೇ ವಿವಾಹ ಮಾಡುವಂತ ಮುಖ್ಯ ವಿಷಯಗಳಲ್ಲಿ ಹಿಂದಿನ ಕಟ್ಟುನಿಟ್ಟು, ಶಿಸ್ತು, ಸಂಪ್ರದಾಯಕತೆ ಅಷ್ಟಾಗಿ ಕಾಣಿಸದು. ಈಗ ಪ್ರಸ್ತುತ ಕೌಟುಂಬಿಕ ಹೊಂದಾಣಿಕೆ, ಸಾಮರಸ್ಯ ವ್ಯಕ್ತಿಯ ಕೌಟುಂಬಿಕ ಸದಸ್ಯತ್ವ, ವಯಸ್ಸು ಮತ್ತು ಲಿಂಗದ ಅಂಶಗಳನ್ನು ಮಾತ್ರ ಅವಲಂಬಿಸಿದ್ದ ಸಾಂಪ್ರದಾಯಿಕ ಮಾರಿಯ 'ಶ್ರಮವಿಭಜನೆಯ ತತ್ವ' ಈಗ ಅಪ್ರಸ್ತುತವಾಗುತ್ತಿದೆ. ವ್ಯಕ್ತಿಗತ ಪ್ರತಿಭೆ ಆಸಕ್ತಿ ಹಾಗೂ ಅಭಿರುಚಿಗೆ ಈಗ ಮಹತ್ವ ಬರುತ್ತಿದೆ. ಇದರಿಂದ ಶಿಕ್ಷಣದಿಂದ ಉದ್ಯೋಗ ಪಡೆದು ಸಂಪಾದನೆಯನ್ನು ಅನುಭವಿಸುವುದರ ಮೂಲಕ ಹಳೆಯ ಮಾದರಿಯ ಬದಲು 'ವ್ಯಕ್ತಿ ಸ್ವಾತಂತ್ರ್ಯ'ದ ಆದರ್ಶವನ್ನು ಪಾಲಿಸುವ ಕಡೆಗೆ ಒಲವು ಮೂಡುತ್ತಿದೆ. ಬೆಳೆಯುತ್ತಿರುವ ಈ ವ್ಯಕ್ತಿ ಸ್ವಾತಂತ್ರ್ಯದ ಹಾಗೂ ಪ್ರಜಾಪ್ರಭುತ್ವದ ಭಾವನೆಗಳು ಕುಟುಂಬದ ಪರಂಪರಾಗತ ನಿಯಮಗಳನ್ನು ದುರ್ಬಲಗೊಳಿಸುವುದರ ಮೂಲಕ ವಿಭಕ್ತಕುಟುಂಬಗಳು ಹೆಚ್ಚಾಗುತ್ತಿವೆ.

ಇಂದು ಪತಿ-ಪತ್ನಿಯರ ನಡುವೆ ಸಾಮಾನ್ಯವಾಗಿ ಇರುವ ಮಾನಸಿಕ ಒತ್ತಡ ಎಲ್ಲರಿಗೂ, ವಿಶೇಷವಾಗಿ ನಗರವಾಸಿಗಳಿಗೆ, ಪರಿಚತವಾದುದೇ ಆಗಿದೆ. ಚಿಕ್ಕಪುಟ್ಟ ವಿಷಯಗಳಿಗಾಗಿಯೂ ಪತಿ-ಪತ್ನಿಯರಲ್ಲಿ ಅತೃಪ್ತಿ, ಮಾತಿಗೆ ಮಾತು ಇತ್ಯಾದಿಗಳಿಂದಾಗಿ ಮನೆಯಲ್ಲಿ ಅಶಾಂತಿಯ ವಾತಾವರಣ ವ್ಯಾಪಿಸಿಕೊಳ್ಳುತ್ತದೆ. ಗಂಡ-ಹೆಂಡಿರ ಜಗಳದಲ್ಲಿ ಸಾಮಾನ್ಯವಾಗಿ ಹೆಂಡತಿಯನ್ನೇ ತಪ್ಪಿತಸ್ಥಳೆಂದು

ಭಾವಿಸಲಾಗಿದೆ. ಏಕೆಂದರೆ ನಮ್ಮದು ಪುರುಷ ಪ್ರಧಾನ ಸಮಾಜ. ಎರಡನೆಯದಾಗಿ, ಅತ್ತೆಮಾವಂದಿರು ಅಂತಹ ಸಂದರ್ಭಗಳಲ್ಲಿ ಹೆಚ್ಚಾಗಿ ತಮ್ಮ ಮಗನ ಪಕ್ಷವನ್ನೇ ವಹಿಸುತ್ತಾರೆ. ಇದೆಲ್ಲವನ್ನು ಸ್ವಲ್ಪಮಟ್ಟಿಗೆ ಪತ್ನಿ ಸಹಿಸಿಕೊಳ್ಳುತ್ತಾಳೆ. ಆದರೆ ಕೆಲವೊಮ್ಮೆ ತನ್ನ ಅಸಮಾಧಾನ, ಅತೃಪ್ತಿಗಳನ್ನು ಅನಿವಾರ್ಯವಾಗಿ ತಂದೆ-ತಾಯಿಗಳಲ್ಲಿ ತೋಡಿಕೊಂಡಾಗ ಅವರು ಸಹ ಮಗಳದ್ದೇ ತಪ್ಪೆಂದು ಹೇಳಿದಾಗ ಆಕೆಗಾಗುವ ಮಾನಸಿಕ ಆಘಾತ ಅಸಹನೀಯವಾದದು. ಈ ರೀತಿಯ ಒತ್ತಡಗಳಿಂದ ಆಕೆ ಅಸಹಾಯಕಳಾಗಿ ಗಂಡನ ಮುಂದೆ ಬಾಗಿ ನಡೆಯುವಂತಹ ಪರಿಸ್ಥಿತಿಗೆ ತುತ್ತಾಗುತ್ತಾಳೆ. ಈ ರೀತಿ ಆಕೆ ತನ್ನ ಮೇಲಾಗುತ್ತಿರುವ ಅತ್ಯಾಚಾರ ಮತ್ತು ಅನಾಚಾರಗಳನ್ನು ಸಹಿಸುತ್ತ ತನ್ನ ವ್ಯಕ್ತಿತ್ವವನ್ನೆ ಕಳೆದುಕೊಳ್ಳುತ್ತಾಳೆ. ಒಳಗೊಳಗೆ ಕೊರಗುತ್ತಿರುವ ಆಕೆಗೆ ದಾಂಪತ್ಯ ಜೀವನ ಒಂದು ಶಾಪವೆಂದು ತೋರತೊಡಗುತ್ತದೆ. ಗಂಡನಾದವನು ತನ್ನ ಇಡೀ ಜೀವನವನ್ನು ಪತ್ನಿಯೊಂದಿಗೆ ಕಳೆಯಬೇಕಾಗಿರುವುದರಿಂದ ಅವಳ ತಂದೆ-ತಾಯಿಗಳ ಕುರಿತು ಸಹ ಗಮನಹರಿಸಬೇಕಾದುದು ಅತ್ಯಗತ್ಯ ಅವರತ್ತ ಲಕ್ಷ್ಯಹರಿಸಿದ್ದರೆ, ಅವರ ಸುಖದುಃಖಗಳನ್ನು ವಿಚಾರಿಸುತ್ತ ಇರದಿದ್ದರೆ, ನಿಮ್ಮ ಪತ್ನಿಯ ಮೇಲೆ ಅದರ ಪ್ರಭಾವವಾಗಿ ದಾಂಪತ್ಯ ಜೀವನದ ಸಾಮರಸ್ಯಕ್ಕೆ ಧಕ್ಕೆ ಬರುವ ಸಂದರ್ಭಗಳು ಇರುತ್ತವೆ. ಆದುದರಿಂದ ಪತ್ನಿಯ ತಂದೆ-ತಾಯಿಗಳತ್ತ ಉಚಿತ ಗಮನಹರಿಸಿ ಅವರನ್ನು ಗೌರವ ದೃಷ್ಟಿಯಿಂದ ವಿಚಾರಿಸುತ್ತಿರಬೇಕು. ಕೆಲವು ಗಂಡಂದಿರು ತಮ್ಮ ಪತ್ನಿಗೆ ವ್ಯವಹಾರದ ಯಾವುದೇ ವಿಷಯವನ್ನು ತಿಳಿಸದೆ ಆಕೆಯಿಂದ ಮುಚ್ಚಿಡುತ್ತಾರೆ. ತಮ್ಮ ಸಂಬಳ, ಸಾಲ, ಮನೆಗೆಲಸದ ಭಾರದಿಂದ ತಾಳ್ಮೆಗೆಟ್ಟೋ ಅಥವಾ ಆಫೀಸು ಮತ್ತು ಮನೆಯ ದ್ವಿಮುಖಿ ಜವಾಬ್ದಾರಿಯಿಂದ ಬೇಸರಗೊಂಡೋ ಚಿಕ್ಕ-ಪುಟ್ಟ ತಪ್ಪುಗಳನ್ನು ಮಾಡುವುದು, ಕಠಿಣ ಮಾತುಗಳನ್ನಾಡುವುದು ಅಸ್ವಾಭಾವಿಕವೆನಲ್ಲ. ಅಂತಹ ಸಂದರ್ಭಗಳಲ್ಲಿ ಪತಿಯಾದವನು ಅವುಗಳನ್ನು ಗಂಭೀರವಾಗಿ ಪರಿಗಣಿಸದೆ ಮುಗುಳುನಗುತ್ತ ವಿನೋದ ದೃಷ್ಟಿಯಿಂದ ಸ್ವೀಕರಿಸಬೇಕು. ಅಲ್ಪಸ್ವಲ್ಪ ಅಡುಗೆಯ ಪರಿಜ್ಞಾನವಿದ್ದರೆ ತುಂಬಾ ಉಪಯೋಗಕ್ಕೆ ಬರುತ್ತದೆ. ನೀವು ಪತ್ನಿಯಿಂದ ದೂರ ಉದ್ಯೋಗದಲ್ಲಿದ್ದಾಗ ಹೋಟೆಲಿಗೆ ಹೋಗಿ ಆರೋಗ್ಯ ಕೆಡಿಸಿಕೊಳ್ಳುವ ಪ್ರಸಂಗ ಬರುವುದಿಲ್ಲ. ಇಬ್ಬರು ಜೊತೆಯಲ್ಲಿದ್ದರೂ ಪತ್ನಿಯು ಸಹ ನೌಕರಿಯಲ್ಲಿದ್ದರೆ ಆಕೆಗೆ ಅಡುಗೆಯಲ್ಲಿ ಒಂದಿಷ್ಟು ಸಹಕರಿಸಿದರೆ ಜೀವನದ ಪ್ರತಿ ಕ್ಷೇತ್ರದಲ್ಲೂ ಗಂಡ ತನ್ನೊಂದಿಗಿದ್ದಾನೆಂಬ ತೃಪ್ತಿ ಆಕೆಗೆ ದೊರೆಯುತ್ತದೆ. ಕೆಲವೊಮ್ಮೆ ಆಕೆ ಅಸ್ವಸ್ಥಳಾದಾಗ ಆಕೆಗೆ ಪೂರ್ಣ ವಿಶ್ರಾಂತಿ ಕೊಡಲು ಸಹ ಇದು ಸಹಕಾರಿಯಾಗುತ್ತದೆ. ಇಲ್ಲವಾದರೆ ಶಾರೀರಿಕ ಅನಾರೋಗ್ಯದಿಂದ ಬಳಲುತ್ತಿರುವ ಆಕೆ ಮಾನಸಿಕ

ವಾಗಿಯೂ ಪೀಡೆಯನ್ನು ಅನುಭವಿಸ ಬೇಕಾಗುತ್ತದೆ. ಪತ್ನಿಯು ಸುಂದರಿಯಾಗಿದ್ದರೆ ಅಥವಾ ಶ್ರೀಮಂತ ಮನೆಯಿಂದ ಬಂದಿದ್ದಾರೆ ಪತಿಯು ಆಕೆಯನ್ನು ಹೊಗಳುತ್ತ, ಪ್ರಸನ್ನಚಿತ್ತಳಾಗಿರಸಲು ಅವಳ ಚಿಕ್ಕಪುಟ ಅಪೇಕ್ಷೆಗಳನ್ನು, ಆಜ್ಞೆಗಳನ್ನು ಸಹ ಪೂರೈಸುತ್ತ ಹೋಗುತ್ತಾನೆ. ಬಯಸಿದ್ದೆಲ್ಲವೂ ಸಿಗುತ್ತದೆಂದಾಗ ಆಕೆಯ ಆತ್ಮಾಭಿಮಾನ ಮಿತಿಯನ್ನು ಮೀರಿ ಆಕೆಯ ಆಸೆಗಳು, ಅಪೇಕ್ಷೆಗಳು ಗರಿಗೆದರಿ ನಿಲುತ್ತದೆ. ಹೆಂಡತಿಯ 'ಛಾಪಿ'ನಿಂದ ಅಸಹಾಯಕನಾದ ಪತಿ ತನ್ನ ವ್ಯಕ್ತಿತ್ವವನ್ನೇ ಕಳೆದುಕೊಳ್ಳುತ್ತಾನೆ. ಹೀಗಾಗದಂತೆ ಪತಿ ಆರಂಭದಿಂದಲೂ ಜಾಗರೂಕನಾಗಿರಬೇಕು. ಇದೇ ರೀತಿ ಪತ್ನಿಯನ್ನು ಸಂತುಷ್ಟಗೊಳಿಸಲಿಕ್ಕಾಗಿ ತಂದೆ-ತಾಯಿ ಮತ್ತು ಮನೆಮಂದಿಯನ್ನು ಎಂದೂ ಕಡೆಗಣಿಸಬಾರದು. ಪ್ರತಿಯೊಂದರಲ್ಲೂ ಪತಿಯು ಪತ್ನಿಯ ಪಕ್ಷವನ್ನೇ ವಹಿಸಿದರೆ ತಂದೆ-ತಾಯಿ ಗಳಿಂದ ಮಗನು ದೂರವಾಗುತ್ತ ಹೋಗುತ್ತಾನೆ. ಆದುದರಿಂದ ಸರಿ-ತಪ್ಪುಗಳನ್ನು ನ್ಯಾಯಾ ನ್ಯಾಯ ಗಳನ್ನು ವಿವೇಚಿಸಿ ಪತ್ನಿ ಹಾಗೂ ಕುಟುಂಬದ ಸದಸ್ಯರಲ್ಲಿ ಹೊಂದಾಣಿಕೆಯಾಗುವಂತೆ ಮಧ್ಯಮ ಮಾರ್ಗವನ್ನು ಅನುಸರಿಸಲು ಪತಿ ಸದಾ ಪ್ರಯತ್ನಶೀಲನಾಗಿರಬೇಕು. ಹೆಂಡತಿಯು ವೈಚಾರಿಕ ಮತ್ತು ವ್ಯವಹಾರಿಕ ಸ್ತರಗಳಲ್ಲಿ ತನಗಿಂತ ಕೀಳಮಟ್ಟದವಳು ಎಂಬ ಭಾವನೆಯೇ ಇದಕ್ಕೆ ಮೂಲ ಕಾರಣ. ಕೆಲವೊಮ್ಮೆ ಹೇಳಿದರೆ ಹೆಂಡತಿ ವಿರೋಧಿಸಬಹುದು ಎಂಬ ದೃಷ್ಟಿಯಿಂದಲೂ ಹಾಗೆ ಮಾಡುವುದಿದೆ. ಆದರೆ ಇದು ಸರಿಯಲ್ಲ. ಗಂಡನ ಈ ರೀತಿಯ ವರ್ತನೆಯಿಂದ ಕೆಲವೊಮ್ಮೆ ಇಡೀ ಕುಟುಂಬವೇ ಆಪಾಯಕ್ಕೆ, ಸಿಲುಕುವ ಸಂದರ್ಭಗಳೂ ಬರುತ್ತವೆ. ಆದುದರಿಂದ ಮನೆ, ವ್ಯವಹಾರ ಇತ್ಯಾದಿಗಳ ಕುರಿತು ಅಗತ್ಯದ ಸಂಗತಿಗಳನ್ನು ಪತ್ನಿಗೆ ತಿಳಿಸಲೇ ಬೇಕು ಮಾತ್ರವಲ್ಲ, ಅವಳ ಅಭಿಪ್ರಾಯಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಪತಿಯು ತನ್ನ ತಂದೆ-ತಾಯಿಗಳನ್ನು ಸಹೋದರ ಸಹೋದರಿಯನ್ನು ಕಂಡಾಗ ಸಂತೋಷಭರಿತನಾಗುತ್ತಾನೆ. ಅವರಿಗೆ ಬೇಕಾದುದನ್ನು ಮಾಡಲು ಸಿದ್ಧನಾಗುತ್ತಾನೆ. ಆದರೆ ಪತ್ನಿಯ ತಂದೆ-ತಾಯಿ, ಅಣ್ಣ-ತಮ್ಮಂದಿರನ್ನು ಕಂಡಾಗ ಅವರ ಕುರಿತು ಅದೇ ರೀತಿಯ ಪ್ರೀತ್ಯಾದರಗಳನ್ನು ತೋರಿಸುವುದಿಲ್ಲ. ಇದರಿಂದಾಗಿ ಪತ್ನಿಯ ಮನಸ್ಸಿನ ಮೇಲೆ ಕೆಟ್ಟ ಪರಣಾಮ ಉಂಟಾಗುತ್ತದೆ. ತನ್ನ ತಂದೆ-ತಾಯಿಗಳನ್ನು ಹತ್ತಿರದವರನ್ನು ಪತ್ನಿ ಚೆನ್ನಾಗಿ ನೋಡಿಕೊಳ್ಳಬೇಕು, ಗೌರವಿಸಬೇಕು ಎಂಬ ಭಾವನೆ ಪತಿಯಲ್ಲಿರುತ್ತದೆ. ತನ್ನ ತಂದೆ ತಾಯಿಗಳ ಕುರಿತು ಸಹ ಪತಿಯ ವರ್ತನೆ ಅದೇ ರೀತಿ ಇರಬೇಕೆಂದು ಪತ್ನಿ ಸಹಜವಾಗಿ ಅಪೇಕ್ಷಿಸುತ್ತಾಳೆ. ಗಂಡನ ವರ್ತನೆ ತದ್ವಿರುದ್ಧವಾದಾಗ ಆಕೆ ಕೊರಗುತ್ತಾಳೆ. ಸಹಿಸುವುದು ಕಷ್ಟವಾದಾಗ ಕೆಲವೊಮ್ಮೆ ತಾಳ್ಮೆಗೆಟ್ಟು ಪ್ರತಿಭಟಿಸುತ್ತಾಳೆ. ಪತಿಯಾದವನು ಇದಕ್ಕೆ ಅವಕಾಶ ಕಲ್ಪಿಸಿಕೊಡದ ರೀತಿಯಲ್ಲಿ ತನ್ನ ವ್ಯವಹಾರ ವನ್ನು ರೂಪಿಸಿಕೊಳ್ಳಬೇಕು.

ಪತ್ನಿಯ ಭಾವನೆಗಳು, ಕನಸುಗಳು ಏನೆಂಬುದನ್ನು ಅರಿಯಲು ಯತ್ನಿಸಿ, ನಿಮ್ಮ ಮತ್ತು ಪತ್ನಿಯ ಕನಸುಗಳಲ್ಲಿ, ಅಭಿಪ್ರಾಯಗಳಲ್ಲಿ ಭೇದವಿದ್ದರೆ ಅದನ್ನು ಸಮನ್ವಯಗೊಳಿಸಲು ಯತ್ನಿಸಿ, ಇದರಿಂದ ಇಬ್ಬರಿಗೂ ಸಮಾಧಾನ, ತೃಪ್ತಿಗಳು ದೊರೆಯುತ್ತವೆ. ಪತ್ನಿಯು ಕೆಲವೊಮ್ಮೆ ಭಾರತೀಯ ನಾರಿಯರಿಗೆ ಎರಡು ಮನೆಗಳನ್ನು ಜೋಡಿಸುವುದು ಮತ್ತು ಕೀರ್ತಿಯನ್ನು ಬೆಳಗುವುದು ವೈಶಿಷ್ಟ್ಯ ವಾಗಿದೆ. ಇಂದಿನ ಮಹಿಳೆಯರ್ಗೆ ಮತ್ತ ಪತಿಗೂ ಮಾತ್ರ ಸಂಬಂಧವಿರುವಂತೆಯೂ ಅತ್ತೆ-ಮಾವ ಮುಂತಾದ ಇತರ ಮನೆ ಮಂದಿಗೂ ಆಕೆಗೂ ಏನು ಸಂಬಂಧವಿಲ್ಲವೆಂಬಂತೆ ವರ್ತಿಸುವುದು ಕಂಡುಬರುತ್ತಿದೆ. ಇದರಿಂದ ಆಕೆ ಅತ್ತೆ, ಮಾವ, ನಾದಿನಿ, ಮೈದುನ ಹೀಗೆ ಎಲ್ಲರಿಂದಲೂ ದೂರವಾಗುತ್ತ ಹೋಗುತ್ತಾಳೆ. ಅದಕ್ಕೆ ಬದಲಾಗಿ ತನ್ನ ತಂದೆ-ತಾಯಿ, ಅಣ್ಣ-ತಮ್ಮಂದಿರನ್ನು ಪ್ರೀತಿಸುವಂತೆ ಅತ್ತೆಯ ಮನೆಯವರನ್ನು ಪ್ರೀತ್ಯಾದರಗಳಿಂದ ಕಂಡರೆ ಸಂಸಾರ ಸುಖಮಯವಾಗುತ್ತದೆ. ಕೆಲವೊಮ್ಮೆ ಗಂಡ ಹೆಂಡಿರಲ್ಲಿ ಜಗಳವಾದಾಗ ತಾನು ಸಹ ಶಿಕ್ಷಿತಳು, ಶ್ರೀಮಂತ ಮನೆಯಿಂದ ಬಂದವಳು ಎಂಬ ದುರಭಿಮಾನಕ್ಕೆ ಸಿಕ್ಕಿ ಒಂದಕ್ಕೆರಡು ಅನ್ನುವ ಪ್ರವೃತ್ತಿಯೂ ಇಂದಿನ ಕೆಲವು ಯುವತಿಯರಲ್ಲಿ ಕಂಡುಬರುತ್ತಿದೆ. ಇದರಿಂದ ಸಂಸಾರದ ಸುಖ ಕೆಡುತ್ತದೆ. ಅದಕ್ಕೆ ಬದಲಾಗಿ ಅಂತಹ ಸಂದರ್ಭಗಳಲ್ಲಿ ಸ್ವಲ್ಪ ತಾಳ್ಮೆ ವಹಿಸಿ ಸುಮ್ಮನಿದ್ದು ಆನಂತರ ಸಮಯೋಚಿತವಾಗಿ ಅದನ್ನು ಪತಿಗೆ ಅಥವಾ ಅತ್ತೆಗೆ ತಿಳಿಸಿದರೆ ಅವರು ಅರಿತುಕೊಳ್ಳಲು ಸಹಾಯವಾಗುತ್ತದೆ. ಮಾತಿನ ಜಗಳವೂ ತಪ್ಪುತ್ತದೆ. ತನ್ನ ತಂದೆ-ತಾಯಿ, ಅಣ್ಣ-ತಮ್ಮಂದಿರನ್ನು ಪ್ರೀತಿಸುವಂತೆ ಅತ್ತೆ, ಮಾವ, ನಾದಿನಿ, ಮೈದುನ ಮುಂತಾದ ಪತಿಗೃಹದ ಸದಸ್ಯರನ್ನು ಪತ್ನಿ ಪ್ರೀತಿಸಬೇಕು. ವಿವಾಹವಾಗಿ ಬಂದಾಗ ಮನೆಯವರು ಆಕೆಯಿಂದ ಬಹಳಷ್ಟು ಅಪೇಕ್ಷಿಸುತ್ತಾರೆ. ಅವರ ಅಪೇಕ್ಷೆಗಳನ್ನೆಲ್ಲ ಪೂರ್ತಿಗೊಳಿ ಸುವುದು ಸಾಧ್ಯವಾಗದಿದ್ದರೂ ಅವರಿಗೆ ಪೂರ್ತಿ ನಿರಾಶೆಯಾಗದಂತೆ ನೋಡಿಕೊಳ್ಳಬೇಕು. ಗಂಡನು ಹೊರಗಿನ ವ್ಯವಹಾರದಲ್ಲಿ ಮಗ್ನನಾಗಿದ್ದು . ಕೆಲವೊಮ್ಮೆ ಮನೆಗೆ ಬರುವಾಗ ಯಾವ್ಯಾವುದೋ ಕಾರಣದಿಂದ ಮಾನಸಿಕ ಅಸ್ವಸ್ಥತೆಗೋ, ಒತ್ತಡಕ್ಕೂ ಒಳಗಾಗಿರಬಹುದು. ಅಂತಹ ಸಂದರ್ಭದಲ್ಲಿ ಅವನಾಡಿದ ಒರಟು ಮಾತು, ತೋರಿದ ಸಿಡುಕುತನ ಇತ್ಯಾದಿಗಳಿಗೆ ಹೆಚ್ಚು ಅರ್ಥ ಕಲ್ಪಿಸದೆ ಅವುಗಳನ್ನು ಸಾಮಾನ್ಯವೆಂಬಂತೆ ಸ್ವೀಕರಿಸಿ ಮರೆತುಬಿಡಬೇಕು.

ಗಂಡ ತಾನು ಹೇಳಿದಂತೆ ಕೇಳಬೇಕು, ತನ್ನ ಭಾವನೆಗಳಿಗೆ, ಆಶೋತ್ತರಗಳಿಗೆ ಪ್ರಥಮ ಪ್ರಾಶಸ್ತ್ಯ ಕೊಡಬೇಕೆಂಬ 'ಅಹಂ' ಕೆಲವು ಪತ್ನಿಯರಲ್ಲಿರುತ್ತದೆ. ಪತಿಯು ಅದೇ ರೀತಿ ವರ್ತಿಸಿದರೆ ಮನೆಮಂದಿಯನ್ನು ಅಲಕ್ಷಿಸಬೇಕಾಗುತ್ತದೆ. ಆಗ ಪತಿಯೇ ಮನೆಯವರಿಂದ ದೂರವಾಗುತ್ತ

ಹೋಗುತ್ತಾನೆ. ಹೀಗಾಗದಂತೆ ನೋಡಿಕೊಳ್ಳುವುದು ಪತ್ನಿಯ ಕರ್ತವ್ಯ. ಪತ್ನಿಯು ನೌಕರಿ ಮಾಡುತ್ತಿದ್ದರೆ ಸಂಬಳವನ್ನು ಮನೆಗೆ ಕೊಡಬೇಕೆಂದು ತಾನು ನೌಕರಿ ಮಾಡುವಾಗ ಸಂಬಳವನ್ನು ಮನೆಗೆ ಕೊಡಬೇಕೆಂದು, ತಾನು ನೌಕರಿ ಮಾಡುವಾಗ ಸಂಬಳವನ್ನು ಮನೆಗೇಕೆ ಕೊಡಬೇಕೆಂದು ವಾದ-ವಿವಾದ, ಜಗಳಗಳಾಗುತ್ತಿರುವುದು ಇಂದು ಮಾಮೂಲಿಯಾಗಿದೆ. ಇಂತಹ ಸಂದರ್ಭದಲ್ಲಿ ವಿಷಯ ವಿಕೋಪಕ್ಕೆ ಹೋಗದಂತೆ ಗಂಡ ಸಮಯೋಚಿತ ಸಲಹೆಯನ್ನಿಯಬೇಕು. ಹೆಂಡತಿಯು ಸಹ ಹಟಮಾರಿತನ ಬಿಟ್ಟು ಗಂಡನೊಂದಿಗೆ ಸಹಕರಿಸಬೇಕು. ವಿವಾಹದ ಬಳಿಕ ಇಡೀ ಜೀವನವನ್ನು ಗಂಡನೊಂದಿಗೆ ಕಳೆಯಬೇಕಾಗಿರುವುದರಿಂದ ಪತಿಯೊಂದಿಗೆ ತುಂಬಾ ಜಾಗರೂಕತೆಯಿಂದಲೂ, ಅನ್ಯೋನ್ಯತೆಯಿಂದಲೂ ವರ್ತಿಸಬೇಕು. ತನ್ನ ಆಸೆ ಆಕಾಂಕ್ಷೆಗಳನ್ನು ಗಂಡನು ಅರಿತು ವರ್ತಿಸಬೇಕೆಂದು ಹೆಂಡತಿ ಹೇಗೆ ಅಪೇಕ್ಷಿಸುತ್ತಾಳೋ ಅದೇ ರೀತಿ ಗಂಡನ ಆಸೆ, ಆಕಾಂಕ್ಷೆ, ಅಪೇಕ್ಷೆಗಳಿಗೆ ಅನುಗುಣವಾಗಿ ತನ್ನನ್ನು ಅಳವಡಿಸಿಕೊಳ್ಳಲು ಅವನಕಾರ್ಯಗಳಲ್ಲಿ ಯಥಾಸಾಧ್ಯ ಸಹಕಾರ ನೀಡಲು ಆಕೆ ಸಾದ ತತ್ಪರಳಾಗಿರಬೇಕು. ವಿವಾಹಕ್ಕೆ ಮೊದಲು ಹೆಣ್ಣು ಹಲವಾರು ಸುಂದರ ಸ್ವಪ್ನಗಳನ್ನು ಕಂಡಿರುತ್ತಾಳೆ. ಅವುಗಳು ಕಾರಣಂತರದಿಂದ ಸಾಕಾರಗೊಳ್ಳದಾಗ ಅದಕ್ಕಾಗಿ ಗಂಡನನ್ನು, ಅತ್ತೆ ಮಾಂವದಿರನ್ನು ದೂಷಿಸುವುದು ಸರಿಯಲ್ಲ. ಹೆಣ್ಣಿನ ಅದೃಷ್ಟವೋ, ವ್ಯವಹಾರವೋ ಅಥವಾ ಇನ್ಯಾವುದೋ ಅದಕ್ಕೆ ಕಾರಣವಾಗಿರಲೂಬಹುದು. ತನ್ನ ಗಂಡನನ್ನಾಗಲಿ, ಗಂಡನ ಮನೆಯವರನ್ನಾಗಲಿ ಇತರರ ಮುಂದೆ ಎಂದೂ ನಿಂದಿಸಬಾರದು. ಅವರ ಮೇಲೆ ದೋಷಾರೋಪಣೆಯನ್ನು ಮಾಡಬಾರದು. ಹಾಗೆ ಮಾಡಿದಾಗ ಇತರರಿಂದ ಕುಟುಂಬದ ಮರ್ಯಾದೆಗೆ ತನ್ಮೂಲಕ ದೂಷಿಸಿದ ಹೆಣ್ಣಿನ ಮಾರ್ಯದೆಗೆ ಧಕ್ಕೆ ಬರುತ್ತದೆ. ಅತ್ತೆ ಮಾವಂದಿರ ಆಚಾರ, ವಿಚಾರ, ವ್ಯವಹಾರಗಳು ಹಿಡಿಸದಿದ್ದಾಗ ಅಥವಾ ತನ್ನ ಸ್ವಾತಂತ್ರ್ಯವೆಂಬ 'ಅಹಂ'ಗೆ ಆಘಾತವಾದಾಗ ಈಗ ಹೆಚ್ಚಿನ ಪತ್ನಿಯರು ಬೇರೆ ಮನೆ ಮಾಡುವಂತೆ ಗಂಡನನ್ನು ಪ್ರೇರೇಪಿಸುತ್ತ ಕೆಲವೊಮ್ಮೆ ಪೀಡಿಸುತ್ತಾರೆ, ಹಟಹಿಡಿಯುತ್ತಾರೆ. ದಾರಿ ಕಾಣದ ಪತಿ ಪ್ರತಿದಿನದ ಘರ್ಷಣೆಯಿಂದ ಬೆಸತ್ತು ಬೇರೆ ಮನೆ ಮಾಡಬೇಕಾಗುತ್ತದೆ. ಆ ಬೇರೆ ಮನೆ ಒಡೆದ ಮನೆಯಾಗುತ್ತದೆ. ಆದುದರಿಂದ ಎಷ್ಟೇ ಕಷ್ಟಬಂದರೂ ಅತ್ಯಂತ ಅನಿವಾರ್ಯದ ಸಂದರ್ಭಗಳನ್ನು ಬಿಟ್ಟು ಇಂತಹ ಭಾವನೆಯಿಂದ, ಕಾರ್ಯದಿಂದ ಪತ್ನಿ ದೂರವಾಗಿರಬೇಕಾದುದು ಇಂದಿನ ಅವಶ್ಯಕತೆಯಾಗಿದೆ. ತಾನೂ ನೌಕರಿ ಮಾಡುತ್ತೇನೆ. ತನಗೂ ಗಂಡಿನಷ್ಟೇ ಸಂಬಳ ಬರುತ್ತದೆ. ಹಾಗಾಗಿ ತಾವಿಬ್ಬರೂ ಸರಿಸಮಾನರು. ಇಬ್ಬರೂ ಕಛೇರಿ ಕೆಲಸ ಮಾಡುವಂತೆ ಮನೆಯಲ್ಲೂ ಕೆಲಸವನ್ನು ಹಂಚಿಕೊಂಡು ಮಾಡಬೇಕು ಎಂಬ ಪ್ರಗತಿಶೀಲ ಭಾವನೆ ಕೆಲವು

ಅತ್ಯಾಧುನಿಕ ಪತ್ನಿಯರಲ್ಲಿ ಆತ್ಮಾಭಿಮಾನದ ಸಂಕೇತವಾಗಿ ಚಿಗುರೊಡೆಯುತ್ತಿರುವುದು ದೌರ್ಭಾಗ್ಯದ ಸಂಗತಿಯಾಗಿದೆ. ಗಂಡನಿಗೆ ಪ್ರಥಮ ಪ್ರಾಶಸ್ತ್ಯವಾಗಿ ಹೊರಗಿನ ವ್ಯವಹಾರದ ಹೊರೆಯೂ ಇರುತ್ತದೆ. ಆದುದರಿಂದ ಅವಕಾಶ ದೊರೆತಾಗ ಒಂದಿಷ್ಟು ಸಹಕರಿಸಿದರೆ ಸಾಕು ಎಂಬ ಭಾವನೆ ಪತ್ನಿಯಲ್ಲಿರಬೇಕು. ತಾನು ಶ್ರೀಮಂತ ಮನೆಯಿಂದ ಬಂದವಳಾದುದರಿಂದ ಮನೆಯ ಕಸ-ಮುಸುರೆ, ಅಡುಗೆ ಇತ್ಯಾದಿ ಯಾವ ಕೆಲಸಗಳೂ ತನಗೆ ಗೊತ್ತೂ ಇಲ್ಲ, ತಾನು ಮಾಡುವುದೂ ಇಲ್ಲ ಎಂದು ಕೆಲವು ಪತ್ನಿಯರು ತಮ್ಮ ಅಂತಸ್ತನ್ನು ಮನೆಯವರಿಗೂ, ಇತರರಿಗೂ ತೋರಿಸಿ ಕೊಡಬಯಸುತ್ತಾರೆ. ಆದರೆ ಆಕೆ 'ಗೃಹಿಣಿ' ಆಗಬೇಕಾದರೆ ಮನೆ, ಮನೆಯ ಆಗುಹೋಗುಗಳು, ಕೆಲಸ ಕಾರ್ಯಗಳು ಹೀಗೆ ಪ್ರತಿಯೊಂದರಲ್ಲೂ ಸಕ್ರಿಯ ಸಹ ಭಾಗಿತ್ವವನ್ನು ಪೊಂದಬೇಕು. ಆಗ ಅದು 'ಸ್ವಗೃಹ' ವಾಗುತ್ತದೆ. ಹೀಗೆ ಪತ್ನಿಯು ಗೃಹವನ್ನು ಸ್ವಗೃಹ ಮಾಡಿಕೊಂಡಾಗ ಆಕೆ ಉತ್ತಮ ಗೃಹಿಣಿಯೆನಿಸುತ್ತಾಳೆ.

"ತಾವೆರೆಯ ಗಿಡ ಹುಟ್ಟಿ ದೇವರಿಗೆ ನೆರಳಾದೆ,
ನಾ ಹುಟ್ಟಿ ಮನೆಗೆ ಎರವಾದೆ
ಹಡೆದವ್ವ ನೀ ಕೊಟ್ಟ ಮನೆಗೆ ಹೆಸರಾದೆ"

ಹುಟ್ಟಿದ ಮನೆಯನ್ನು ಮತ್ತು ಮದುವೆಯಾಗಿ ಹೊದ ಮನೆಯನ್ನು ಬೆಳಗಿಸುವ ಕೆಲಸ ಹೆಣ್ಣಿನ ಪಾಲಿಗೆ ಅತ್ಯಂತ ಮಹತ್ವವಾದುದು. ಒಬ್ಬ ಮಗಳು ಹುಟ್ಟಿ ತಂದೆ-ತಾಯಿಗಳಿಗೆ ಪ್ರೇಮದ ಧಾರೆಯನ್ನು ಹರಿಸುತ್ತಾಳೆ. ತೊದಲ್ನುಡಿಯನ್ನಾಡುತ್ತಾ, ದೊಡ್ಡವಳಾಗುತ್ತಾ, ವಿನೋದಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಮನೆಯವರನ್ನು ನೆರೆಹೊರೆಯವರನ್ನು ನಗಿಸುತ್ತಾ ತಾನೂ ನಗುತ್ತಿರುತ್ತಾಳೆ. ಹೀಗೆ ಸುಮಾರು ೨೦-೨೫ ವರ್ಷಗಳವರೆಗೆ ತಾಯಿ ಮನೆಯನ್ನು ನಂದಲೋಕದಂತೆ ವೈಭವಿಕರಿಸುವ ಕೆಲಸ ಹೆಣ್ಣಿಗೆ. ತನ್ನ ಆಯುಷ್ಯದ ಕೆಲವರುಷಗಳನ್ನು ತಂದೆ-ತಾಯಿ ಮನೆಯಲ್ಲಿ ಕಳೆದ ಸ್ತ್ರೀಗೆ ಗಂಡನ ಮನೆಯ ಬಾಳು ಅಧಿಕ. ಗಂಡನ ಮನೆಗೆ ಕಾಲಿಡುವ ಸಂದರ್ಭದಲ್ಲಿ ಕಷ್ಟ-ಸುಖದ ಬಗ್ಗೆ ಚಿಂತಿಸದೆ "ಏನು ಬಂದರೂ ಸೈ, ಎದುರಿಸುವೆ ಎಂಬ ಧೈರ್ಯದಿಂದ ಗಂಡನ ಮನೆಯನ್ನು ಸೇರುತ್ತಾಳೆ. ಅಲ್ಲಿದ ಹೊಸ ಜೀವನ ಪ್ರಾರಂಭ. ತಾಯಿಯ ಮನೆಯ ವಾತಾವರಣಕ್ಕಿಂತ ತೀರಾ ಭಿನ್ನ. ನಂತರ ಮಕ್ಕಳು, ಸಂಸಾರ ಎಂಬ ಜವಾಬ್ದಾರಿಗಳು ಹುಟ್ಟಿಕೊಳ್ಳುತ್ತವೆ. ಆಕೆ ಗೃಹಿಣಿ ಅನ್ನಿಸಿಕೊಳ್ಳುತ್ತಾಳೆ. ಗೃಹಿಣಿಗೆ ಗಂಡಸಿನ ಅರ್ಧದಷ್ಟು ಜವಾಬ್ದಾರಿ ಇದೆ ಎಂದು ಹೇಳಬಹುದು. ಇದಕ್ಕೆ ಒಂದು ಚಿಕ್ಕ ಉದಾಹರಣೆಯೆಂದರೆ ಒಂದು ಮನೆಯಲ್ಲಿ ಮದುವೆಯೋ, ಮುಂಜಿಯೋ

ನಡೆಯುತ್ತದೆಂದಿಟ್ಟುಕೊಳ್ಳಿ. ಅಂತಹ ಸಂದರ್ಭದಲ್ಲಿ ಮನೆಯ ಯಜಮಾನನ ಕೆಲಸ ಸಮಾರಂಭಕ್ಕೆ ಬೇಕಾದ ಸಾಮನುಗಳನ್ನು ಸಂಗ್ರಹಿಸಿವುದು, ಹಣ, ಒಡವೆಗಳನ್ನು ಮಾಡಿಸುವುದು, ಬಂಧುಗಳನ್ನು ಕರೆಯುವುದು ಹಾಗೂ ಇತರೆ ಕೆಲಸಗಳು ಇಷ್ಟು ಮಾತ್ರವಾಗಿರುತ್ತದೆ. ಅದೆ ಮನೊಯೊಡತಿಯು ಏನೆಲ್ಲಾ ಸಾಮಾನುಗಳನ್ನು ಖರೀದಿಸಬೇಕು. ಹೀಗೆ ಎಷ್ಟು ಖರೀದಿಸಬೇಕು, ಮನೆಯಲ್ಲಿ ಯಾವುದನ್ನು ಯಾವರೀತಿ ಏರ್ಪಾಡುಗಳನ್ನು ಮಾಡಬೇಕು, ಬಂಧುಗಳು ಬಂದಾಗ ಅವರನ್ನು ಉಪಚರಿಸುವ ಕ್ರಮ, ಹೀಗೆ ಹೆಚ್ಚಿನ ಕಾರ್ಯವು ಗೃಹಿಣಿಗೆ. ನಾವು ಒಂದು ಸಂಸಾರವಿರುವ ಮನೆಯನ್ನು ಹೊಕ್ಕು ನೋಡಿದಾಗ ಆ ಮನೆ ಹೇಗಿದೆ ಎಂಬುದನ್ನು ಗೃಹಿಣಿಯ ಮುಖದಿಂದ ತಿಳಿಯಬಹುದು. ಉದಾಹರಣೆಗೆ ಒಂದು ಮನೆಗೆ ನಾವು ಅತಿಥಿಳಾಗಿ ಹೋದಾಗ ಮನೆಯೊಡತಿ ನಮ್ಮನ್ನು ಕರೆದು ಹಸನ್ಮುಖಿಯಾಗಿ ಉಪಚರಿಸಿ ಕಳುಹಿಸಿದರೆ ನಮಗೆಷ್ಟು ಸಂತೋಷವಾಗುವುದಿಲ್ಲ? ಮನೆಯ ಯಾಜಮಾನ ಮಾತನಾಡಿಸದಿದ್ದರೆ ಅಷ್ಟೊಂದು ಗೋಜಿಗೆ ಹೋಗುವುದಿಲ್ಲ. ಮನೆಯಾಕೆಯೇ ಮಾತನಾಡಿಸದೆ ಮುಖ ತಿರುಗಿಸಿ ಒಳಗೆ ಹೋದರೆ ಇನ್ನೊಮ್ಮೆ ಅಲ್ಲಿಗೆ ಹೋಗಬೇಕೆಂದಿಸುವುದಿಲ್ಲ.

ಒಬ್ಬ ಗೃಹಿಣಿ ಒಳ್ಳೆಯವಳು ಎಂದು ಮನೆಯವರಿಂದ ಹೆಳಿಸಿಕೊಳ್ಳುವ ಸಾಮರ್ಥ್ಯವೂ ಅವಳ ಕೈಯಲ್ಲಿದೆ. ರುಚಿ ರುಚಿಯಾದ ಅಡುಗೆ ಮಾಡಿ ಬಡಿಸುವುದು, ಅತ್ತೆ-ಮಾವರೊಡನೆ ಜಗಳವಾಡದೆ ನಗುಮುಖದಿಂದ ಇರುವುದು ಸದ್ಗುಣೆಯ ಲಕ್ಷಣ. ಆಕೆ ಇದ್ದುದರಲ್ಲಿ ಸಮಾಧಾನ ಪಟ್ಟುಕೊಂಡು ಅತಿಯಾಸೆ ಪಡೆದಿರುವುದು ಸಹ ಕ್ಷೇಮೆ. ಮಕ್ಕಳ ಭವಿಷ್ಯವನ್ನು ರೂಪಿಸುವ ಕರ್ತವ್ಯವೂ ಬಹುಪಾಲು ಗೃಹಿಣಿಗೆ. ಮಕ್ಕಳ ಆಭಿರುಚಿ, ಆಸಕ್ತಿಗಳನ್ನು ತಿಳಿಯುವುದು, ಅವರಿಗೆ ಅನೇಕ ಹೊಸ ವಿಷಯಗಳನ್ನು ಬೋಧಿಸುವುದು ಇತ್ಯಾದಿ ಕೆಲಸ ನಿರ್ವಹಿಸುತ್ತಾಳೆ. ಗಂಡನಾದವನು ಹೊರಗೆ ಹೋಗಿ ದುಡಿಯುತ್ತಿರುವ ಕಾರಣ ಮಕ್ಕಳ ಮೇಲೆ ಹೆಚ್ಚುನಿಗಾ ಇಡಲು ಸಮಯ ಇರುವುದಿಲ್ಲ. ಆಗ ಮಕ್ಕಳ ಹೆಚ್ಚಿನ ಜವಾಬ್ದಾರಿ ಗೃಹಿಣಿಯ ಮೇಲೆಯೇ ಬೀಳುತ್ತದೆ.

ಕಾಲ ಸರಿದಂತೆ ಗೃಹಿಣಿಯರು ಅತ್ತೆಯ ಪಾತ್ರವನ್ನು ಸಹಜವಾಗಿ ನಿರ್ವಹಿಸುತ್ತಾರೆ. ಇಲ್ಲಿಯೂ ಸಹ ಗೃಹಿಣಿ ಪಾತ್ರ ದೊಡ್ಡದು. ಮನೆಗೆ ಬಂದ ಸೊಸೆಯನ್ನು ಹೇಗೆ ನಡೆಸಿಕೊಂಡು ಹೋಗಬೇಕೆಂದು ಆಕೆಗೆ ತಿಳಿದಿರಬೇಕು. ವೃದ್ಧಾಪ್ಯದಲ್ಲಿ ಮಕ್ಕಳಿಂದ ಸಹಾಯ ಪಡೆಯುವ ಸ್ಥಿತಿಯಲ್ಲಿರಬೇಕು. ಕೆಲವೊಮ್ಮೆ ಎಷ್ಟೋ ಮಕ್ಕಳಿಗೆ ಸಹಾಯ ಮಾಡಿದರೂ ವೃದ್ಧಾಪ್ಯದಲ್ಲಿ ತಾಯಿಯನ್ನು ನೋಡದಿರುವ ಮಕ್ಕಳಿದ್ದಾರೆ. ಅದು ದುರ್ನೀತಿ.

ಹೀಗೆ ಹುಟ್ಟಿನಿಂದ ಸಾಯುವವರೆಗೆ ಒಬ್ಬ ಸ್ತ್ರೀ ತನ್ನ ಬಾಲ್ಯ, ಯೌವನ, ವೃದ್ಧಾಪ್ಯ ಎಂಬ

ಮೂರು ಹಂತಗಳನ್ನು ದಾಟುತ್ತಾಳೆ. ಇದರಲ್ಲಿ ಗೃಹಿಣಿಯ ಪಾತ್ರ ಅತ್ಯಂತ ಪ್ರಮುಖ ಘಟ್ಟ. ಆದರೆ ಗಂಡಸಿರಿಗೆ ಈ ರೀತಿ ಇರುವುದಿಲ್ಲ. ಗೃಹಿಣಿಯನ್ನು 'ಕ್ಷಮಯಾಧರಿತ್ರಿ', 'ಕುಸುಮಾ ಕೋಮಲೆ', 'ಕರುಣ' ಎಂದು ಕರೆಯುತ್ತಾರೆ. ಯಾಕೆಂದರೆ ಸಂಸಾರದಲ್ಲಿ ಎಷ್ಟೋ ಕಷ್ಟಗಳು, ಸುಖ-ದುಃಖಗಳು ಬಲಿ ಅವುಗಳನ್ನು ಸರಿಸಮಾನವಾಗಿ ನಡೆಸಿಕೊಂಡು ಹೋಗುವ ತಾಳ್ಮೆ ಅವಳೊಬ್ಬ ಳಿಗಿದೆ. "ರಥವಿದ್ದರೂ ಸಾರಥಿಯಿಲ್ಲದಿದ್ದರೆ ಪ್ರಯೋಜನವಿಲ್ಲ" ಎಂಬಂತೆ ಒಂದು ಮನೆಯನ್ನು ನಡೆಸಿಕೊಂಡು ಹೋಗಲು ಅಲ್ಲಿ ಗೃಹಿಣಿಬೇಕು.

ಒಟ್ಟಿನಲ್ಲಿ ಹೇಳುವುದಾದರೆ 'ಸಂತುಷ್ಟ ಗೃಹಿಣಿಯೇ ಮನೆಯ ಲಕ್ಷ್ಮಿ'. ಮಾನವನ ಅಪೂರ್ಣ ಜೀವನವನ್ನು ಪೂರ್ಣ ಮಾಡುವ ಶಕ್ತಿ ಅವಳಿಗಿದೆ. ಗಾಂಧೀಜಿ ಹೇಳಿದ ಮಾತು "ನಾರಿ ನೀನು ದೇವ ಪೂಜೆಗೆ ಯೋಗ್ಯವಾದವಳು" ಎಂಬುದು ಗೃಹಿಣಿಯರಿಗೆ ಸೂಕ್ತವಾದುದು.

ಮಹಿಳೆಯರಿಗೆ ಉದ್ಯೋಗದಿಂದ ಬರಿ ಆದಾಯವಲ್ಲದೆ, ಹಿಂದೆ ಎಂದೂ ಇಲ್ಲದ ಆತ್ಮ ವಿಶ್ವಾಸ ಅಭಿಮಾನ ಉಂಟಾಯಿತು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹೆಣ್ಣು ಏಕೆ ಉದ್ಯೋಗ ಮಾಡಬೇಕು ಎಂಬ ಯಕ್ಷ ಪ್ರಶ್ನೆಯಾಗಿ ಉಳಿದಿಲ್ಲ. ನಮ್ಮ ಸಂವಿಧಾನದ ಪ್ರಕಾರ ಪ್ರತಿಯೊಬ್ಬ ಪ್ರಜೆಗೂ ವಿದ್ಯಾಭ್ಯಾಸ, ಉದ್ಯೋಗಗಳ ಹಕ್ಕು ಇದೆ. ಇದರ ವ್ಯಾಪ್ತಿ ಬರೀ ಕಾಗದದ ಮೇಲೆ ಅಲ್ಲದೇ ನಿಜವಾಗಿ ಜನಜೀವನದಲ್ಲಿ ಇತ್ತೀಚಿಗೆ ಉಂಟಾಗುತ್ತಿದೆ.

ಮಹಿಳೆಯು ಪುರುಷನಿಗಿಂತ ವಿಭಿನ್ನ ಹಾಗೂ ವಿಶಿಷ್ಟವಾಗಿದ್ದಾಳೆ. ಹೇಗೆಂದರೆ ಅವಳು ಪುರುಷನಿಗಿಂತ ಕೀಳು, ಕಡಿಮೆ ಎಂದೇನೂ ಅರ್ಥವಾಗಬೇಕಾಗಿಲ್ಲ. ಅವಳ ಜೈವಿಕ ಹಾಗೂ ದೈಹಿಕ ಸ್ಥಿತಿಗಳು ಮಹಿಳೆಯನ್ನು ಪುರುಷನಿಗಿಂತ ವಿಭಿನ್ನವೆನ್ನುವುದನ್ನು ವ್ಯಕ್ತಪಡಿಸುತ್ತವೆಯೇ ಹೊರತು ಕೀಳು ಎಂಬುದು ಅಲ್ಲ. ಗಂಡು ಹೆಣ್ಣು ಮಕ್ಕಳೆರಡು ಆರೇಳು ವರ್ಷಗಳವರೆಗೆ ಒಂದೇ ತೆರನಾಗಿ ವರ್ತಿಸುತ್ತದೆ. ಆಟ, ಪಾಠ ಹಾಗೂ ಇತರೆ ಕ್ರಿಯೆಗಳಲ್ಲಿ ಸಮನಾಗಿ ಪಾಲ್ಗೊಳ್ಳುತ್ತವೆ. ಆದರೆ ಮುಂದೆ ಹೆತ್ತವರು, ಕುಟುಂಬದ ಇನ್ನಿತರ ವರ್ಗದವರು, ಸಮುದಾಯದ ಜನತೆ ಹಾಗೂ ಸಮಾಜದ ಸದಸ್ಯರು ಈ ಆಟ, ಓಟ, ಭಾವನೆ, ಆಸಕ್ತಿಗಳನ್ನು ಹೆಣ್ಣು-ಗಂಡಿಗೆ ಪರಸ್ಪರ ಭಿನ್ನವೆಂಬುದನ್ನು ಪದೇ ಪದೇ ಪ್ರಸ್ತಾಪಿಸುತ್ತ ಅಳು, ನಗು, ಚಿಂತನೆಗಳನ್ನು ಕೂಡಾ ಸ್ತ್ರೀ-ಪುರುಷರಿಗೆ ಬೇರೆ ಬೇರೆಯಾಗಿ ನಿಗದೀಕರಣಗೊಳಿಸಿ ಮಕ್ಕಳನ್ನು ಬೆಳೆಸುತ್ತಾರೆ. ಹೆಣ್ಣೆಂದರೆ ಸಹನೆ, ತಾಳ್ಮೆ, ಕರುಣೆ, ಉಪಚಾರ, ಹೊಂದಾಣಿಕೆ, ಮೃದು, ಅಂಜುಗುಳಿತನ, ಕೋಮಲ ಎಂಬಂಥ ಪದಗುಚ್ಛಗಳನ್ನು ಪರಿಚಯಿಸಿ ಅವುಗಳನ್ನು ಮೌಲ್ಯಗಳೆಂದು ನಂಬಿಸಿ ಹೆಣ್ಣಿನ ಮೇಲೆ ಹೇರಲಾಗುತ್ತದೆ. 'ಸ್ತ್ರೀ

ಭಾವನಾಮಯಿ' ಅವಳಿಗೆ ಕಣ್ಣೀರು ಸಹಜವೆಂಬುದನ್ನು ಪ್ರತಿಪಾದಿಸಲಾಗುತ್ತದೆ. ಹೆಣ್ಣು ಕೂಡಾ ಒಬ್ಬ ವ್ಯಕ್ತಿ ಆಕೆಗೂ ವ್ಯಕ್ತಿತ್ವವಿದೆ. ಹೊನ್ನು, ಮಣ್ಣು ಇತ್ಯಾದಿ ಸಂಪತ್ತುಗಳ ಜೊತೆಗೆ ಅವಳನ್ನು ಹೋಲಿಕೆ ಮಾಡುವುದು ಅಸಂಬದ್ಧ ಮಹಿಳೆಯನ್ನು ತ್ಯಾಗದ, ದುಡಿಮೆಯ, ಸೇವೆಯ ಅಪರಾವತಾರ ಎಂಬ ಅಪಕಲ್ಪನೆಗಳನ್ನು ತುಂಬಿ ಗಂಡಿನ ಬಳಕೆಗೆ ಕಾಲಾನುಕಾಲದಿಂದ ಸಿದ್ಧಗೊಳಿಸಲಾಗಿದೆ. ಬೌದ್ಧಿಕ ಹಾಗೂ ಶೈಕ್ಷಣಿಕ ವಲಯಗಳು ಪುರುಷ ಹಿತಾಸಕ್ತಿಯ ಗೃಹಿಕೆಯ ಮಾದರಿಯನ್ನು ಸಮಾಜದಲ್ಲಿ ಪ್ರಚುರುಪಡಿಸುತ್ತಿವೆ. ಪುರುಷನಿಗೆ ಅನುಕೂಲವಾಗುವಂತೆ, ಸುಖಕ್ಕೆ, ಬಳಕೆಗೆ ವಸ್ತುವಾಗುವಂತೆ ಸ್ತ್ರೀಯನ್ನು ರೂಪಿಸಲಾಗುತ್ತಿದೆ. ಇದನ್ನು ಔಪಚಾರಿಕ, ಅನೌಪಚಾರಿಕ ಶಿಕ್ಷಣ ಸಂಸ್ಥೆಗಳೆರಡೂ ಒಗ್ಗೂಡಿಯೇ ನಡೆಯುತ್ತವೆ. ಗಂಡು ಎಂದಾಗ, ಅಗಾಧ ಬುದ್ಧಿವಂತೆ, ಧೈರ್ಯಶಾಲಿ, ಮುನ್ನುಗ್ಗುವ ಪ್ರವೃತ್ತಿಯವನೆಂದು ಹಾಗೂ ಹೆಣ್ಣು ಎಂದಾಗ ಭಾವನಾಮಯಿ, ಅಳುಮುಂಜಿ, ಪುಕ್ಕಲು ಎಂಬರ್ಥಗಳ ನಂಬಿಕೆಗಳನ್ನು ವ್ಯಾಪಕವಾಗಿ ಬೆಳೆಸಲಾಗಿದೆ. ವಾಸ್ತವದಲ್ಲಿ, ಋತುಮತಿಯಾಗುವುದು, ಗರ್ಭಧರಿಸುವುದು, ಹೆರುವುದು, ಮಕ್ಕಳಿಗೆ ಹಾಲುಣ್ಣುಸಿವುದು ಇಂಥ ಕೆಲವು ಜೈವಿಕ ಕ್ರಿಯೆಗಳನ್ನು ಹೊರತುಪಡಿಸಿದರೆ ಹೆಣ್ಣು-ಗಂಡುಗಳ ಕೆಲಸ ಕಾರ್ಯಗಳಲ್ಲಿ, ಅಭಿಪ್ರೆ ಆಶಯಗಳಲ್ಲಿ ಯಾವುದೇ ಪ್ರತ್ಯೇಕತೆ ಇಲ್ಲ. ರಾಜಕೀಯ, ಆರ್ಥಿಕತೆ, ಶಿಕ್ಷಣ, ಸಾಹಿತ್ಯ, ಕಲೆ, ಕ್ರೀಡೆ, ವಿಜ್ಞಾನ ಇವುಗಳಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಆಸಕ್ತಿ ಶಕ್ತಿ ಮತ್ತು ಸಾಮರ್ಥ್ಯಗಳೆಲ್ಲ ಪ್ರಕೃತಿ ಸಹಜವಾಗಿರುತ್ತವೆ. ಒಮ್ಮೆ ಹೆಣ್ಣಿನ ಕೆಲಸವನ್ನು ಪುರಷರು ಮಾಡಿದರೆ ಅದು ಅವನ ದೌರ್ಬಲ್ಯವೆಂದೂ ಹೆಡಿತನವನ್ನು ಗಂಡಸ್ಸಿನ ಕೆಲಸಗಳನ್ನು ಹೆಂಗಸು ಮಾಡಿದರೆ ಅದು ಅವಳ ಸಾಹಸವೆಂದು ನಂಬಿಸಲಾಗುತ್ತದೆ. ಹಾಗೆಯೇ ನೋಡಿದರೆ ಎಲ್ಲರೂ ಎಲ್ಲ ಕೆಲಸವನ್ನು ಮಾಡಬಹುದು. ಅಡುಗೆ ಮನೆಗಾಗಿ ಶಿಕ್ಷಣ, ಮಕ್ಕಳ ಪಾಲನೆ ಪೋಷಣೆಗಾಗಿ ಶಿಕ್ಷಣ ಎಂಬಂಥ ನಂಬಿಕೆಗಳು ಪುರುಷ ಪರ ಪಟ್ಟಭದ್ರ ಹಿತಾಸಕ್ತಿಯಿಂದ ಮೂಡಿ ಬಂದಿವೆ. ಯಾವುದೇ ಕೆಲಸ ಕಾರ್ಯಗಳನ್ನು ಒಂದು ನಿರ್ಧಿಷ್ಟ ಜಾತಿ, ವರ್ಣ, ಲಿಂಗಕ್ಕೆ ನಿಗದಿಗೊಳಿಸುವುದು, ಸ್ಥಗಿತ ಸಂಸ್ಕೃತಿಯ ಕೊಳಕುತನವನ್ನು ಪ್ರತಿನಿಧಿಸುತ್ತದೆ. ಹೆಣ್ಣಾಗಲಿ, ಗಂಡಾಗಲಿ ಒಬ್ಬರು ಇನ್ನೊಬ್ಬರ ಬಳಕೆಗೆ ವಸ್ತುವಾಗಬಾರದು. ವಿವಾಹ, ಕುಟುಂಬ, ದಾಂಪತ್ಯ, ಸಂತಾನ, ಸಮಾಜಗಳು ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಅನುಕೂಲಕರವಾಗಿ ಕಟ್ಟಲ್ಪಡಬೇಕು. ಸ್ತ್ರೀ ಸ್ವಾತಂತ್ರ್ಯವೆನ್ನುವುದು ಪುರುಷನ ಸ್ವಾತಂತ್ರ್ಯವನ್ನು ಹೊರತುಪಡಿಸಿದುದಲ್ಲ. ಪರಸ್ಪರರು ಆತ್ಮಾಭಿಮಾನ ಸ್ವಗೌರವವನ್ನು ಹೊಂದಿಬಾಳನ್ನು ನಡೆಸಬೇಕು. ಸಹಧರ್ಮಿಣಿ, ಅನುಕೂಲ, ಸಹಗಮನ, ಅರ್ಧನಾರೀಶ್ವರ ಇತ್ಯಾದಿ ಪರಿಕಲ್ಪನೆಗಳು ಆರೋಗ್ಯ ಪೂರ್ಣ ಸಮಾಜಕ್ಕೆ

ತುಂಬಾ ಅಪಾಯಕಾರಿ. ಮಾತು ಕೇಳದ ಮಕ್ಕಳಿಗೆ ಮಿಠಾಯಿ ಕೊಟ್ಟು ಮನವೊಲಿಸುವಂತೆ ಹೆಣ್ಣನ್ನು ಪ್ರಕೃತಿ, ಭೂಮಾತೆ, ಜಲದೇವತೆ, ಅಂಜನಾದೇವಿ ಎಂದೆಲ್ಲ ಶಿಖರಕ್ಕೆಸುವುದರಲ್ಲಿ ಪುರುಷಪರ ಹಿತಾಸಕ್ತಿ ಇದೆ. ಆದರೆ ಇಂಥ ಮಾತುಗಳಿಂದ ಕೂಡಾ ಸ್ತ್ರೀಯು ನೀರು, ಗಾಳಿ, ನೆಲ, ನಿಸರ್ಗದಷ್ಟೇ ಜೀವನಾವಶ್ಯಕ ಪೋಷಕ ಶಕ್ತಿ ಎಂಬುದು ಸಾಬೀತಾಗುತ್ತಿರುವುದು ಆಕಸ್ಮಿಕವಾದರೂ ನಿಜ ಸಂಗತಿಯಾಗಿದೆ.

ಮಹಿಳೆಯ ಸಂದರ್ಭದಲ್ಲಿ ಬರುವ ಪ್ರಮುಖವಾದ ಅಂಶ ಹಾಗೂ ಸಮಾಜಕಕೆ ಸಮೀಪವಾಗಿ ವಾಸ್ತವವಾಗಿರುವ 'ಕೌಟುಂಬಿಕ ಶ್ರಮ ವಿಭಜನೆ' ಎಂಬ ವಿಷಯವನ್ನು ಗಮನದಲ್ಲಿಟ್ಟುಕೊಂಡು ಆಧುನಿಕ ಕುಟುಂಬಗಳಲ್ಲಿನ ಸ್ತ್ರೀಯ ಶ್ರಮವಿಭಜನೆಯಲ್ಲಿ ಹೊಂದಿರುವ ತನ್ನ ಸ್ವರೂಪವನ್ನು ವಿಶ್ಲೇಷಿಸುವ ಉದ್ದೇಶದಿಂದ ಈ ಅಧ್ಯಯನದ ಬಾಗವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಕೇವಲ ೧೦೦ ಕುಟುಂಬಗಳನ್ನು ಮಾತ್ರ ಸೀಮಿತವಾಗಿಟ್ಟುಕೊಂಡು ಸಂದರ್ಶನವನ್ನು ಕೈಗೊಳ್ಳಲಾಗಿದೆ. ಈ ಕ್ಷೇತ್ರಧಾರಿತ ಮಾಹಿತಿಗಳ ವಿವರವನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಬಹುದಾಗಿದೆ.

**ಗುರುತಿಸಿಕೊಳ್ಳಲಾದ ಪ್ರಶ್ನೆಗಳು ಮತ್ತು ಅವುಗಳ ವಿಶ್ಲೇಷಣೆ**

೧. ಮನೆಯ ಕೆಲಸದಲ್ಲಿ ನಿಮ್ಮ ಗಂಡನ ನೆರವು ಹೇಗಿದೆ?

೨. ಮನೆಯ ಹೊರಗಡೆ ಮಾಡಬೇಕಾದ ಕೆಲಸದ ನೆರವು ಯಾವ ರೀತಿಯಲ್ಲಿದೆ?

೩. ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯ ಜವಾಬ್ದಾರಿಯಾರದು?

೪. ಕಛೇರಿಯ ಕೆಲಸವನ್ನು ಮನೆಯಲ್ಲಿ ಮಾಡುವ ಸಂದರ್ಭದಲ್ಲಿ ಹೊಂದಾಣಿಕೆ ಹೇಗೆ?

೫. ಅಗತ್ಯ ಕೆಲಸಕ್ಕಾಗಿ ನೀವು ಪ್ರಯಾಣ ಕೈಗೊಂಡರೆ ಆಗ ನಿಮ್ಮ ಕುಟುಂಬದ ನಿರ್ವಹಣೆ ಯಾರದು?

೬. ಹೆಣ್ಣು ಮಕ್ಕಳಿಗೆ ಸೂಕ್ತವೆನಿಸುವ ಉದ್ಯೋಗಗಳು ಯಾವ ಬಗೆಯದು?

೭. ಹೆಣ್ಣು ಮಕ್ಕಳಿಗೆ ಈ ಕೆಲಸವೇ ಸೂಕ್ತವೆಂದು ಹೇಳಲು ಕಾರಣವೇನು?




೨.೧ರ ವೃತ್ತಚಿತ್ರವನ್ನು ಗಮನಿಸಿದಾಗ ಮನೆಯ ಕೆಲಸದಲ್ಲಿ ನೇರವು ಕುಟುಂಬದವರಿಂದ ಯಾವರೀತಿಯಲ್ಲಿರಬೇಕು ಎಂದು ಪ್ರಶ್ನಿಸಿದಾಗ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುಟುಂಬಗಳಿಂದ ದೊರೆತಂತಹ ಶೇಕಡುವಾರು ಪ್ರಮಾಣಗಳು ಈ ರೀತಿಯಲ್ಲಿವೆ. ಶೇ. ೪೪ ರಷ್ಟು ಕುಟುಂಬದ ಮಹಿಳೆಯರು ಕುಟುಂಬದವರೆಲ್ಲರ ಸಹಕಾರವು ಬೇಕೆಂದಾರೆ, ಶೇ. ೨೪ ರಷ್ಟು ಕುಟುಂಬದ ಸ್ತ್ರೀಯರು ಗಂಡನ ನೆರವು ಇರಬೇಕಾಗುತ್ತದೆಂದರೆ, ಶೇ. ೧೬ ರಂತೆ ಎರಡು ವರ್ಗದ ಕುಟುಂಬಗಳು ಸ್ವಯಂವಾಗಿ ಹಾಗೂ ಮನೆಯ ಕೆಲಸದವರಿಂದ ನೆರವು ಪಡೆಯುತ್ತೇವೆ ಎಂದು ತಮ್ಮ ಅಭಿಪ್ರಾಯಗಳನ್ನು ತಿಳಿಸಿರುವುದು ನಾವು ವೃತ್ತಚಿತ್ರದಿಂದ ಕಾಣಬಹುದಾಗಿದೆ. ಎಲ್ಲರೂ ಸೇರಿ ಮಾಡಬೇಕೆನ್ನುವುದು ಶೇ. ೪೪ ಜನರ ಅಭಿಪ್ರಾಯವು ತೋರಿಕೆಯಾಗಿದೆ. ಇದು ನಿರ್ದಿಷ್ಟವಾಗಿ ತಿಳಿಸುವುದಿಲ್ಲ. ಆದರೆ ಶೇ. ೨೪ ರಷ್ಟು ಹೇಳಿರುವ ಗಂಡನ ನೆರವಿರಬೇಕು ಎನ್ನುವುದನ್ನು ಶೇ. ೪೪ಕ್ಕೆ ಸೇರಿಸಿದರೆ ಶೇ. ೬೮ ಕುಟುಂಬಗಳು ಗಂಡನು ಮನೆಗೆಲಸಕ್ಕೆ ಕೈಹಾಕಬೇಕೆಂಬುದನ್ನು ಹೇಳುತ್ತವೆ.

ಈ ಎಲ್ಲಾ ಅಂಕಿ-ಸಂಖ್ಯೆಗಳ ಮಾಹಿತಿಗಳಿಂದ ತಿಳಿದು ಬರುವುದೇನೆಂದರೆ ಆಧುನಿಕ ಕುಟುಂಬ ದಲ್ಲಿಯ ಅವಳ ಶ್ರಮದ ಸಮಾನತೆಯನ್ನು ಅರಿತುಕೊಳ್ಳುವುದಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆ ಎಷ್ಟೆಲ್ಲಾ ದುಡಿದರೂ ಅವಳಿಗೆ ಸಾಮಾಜೀಕರಣ ಪ್ರಕ್ರಿಯೆ ಮೂಲಕ ಸಾಂಪ್ರದಾಯಿಕ ಮನೋಭಾವನೆಗಳನ್ನು ಬೆಳೆಸುತ್ತಾ ಬಂದಿರುವುದರಿಂದಾಗಿಯೇ ಮನೆಯ ಕೆಲಸಗಳಲ್ಲಿ ಗಂಡನಿಂದ ನೇರವು ಬಯಸುವುದು ತೀರಾ ಕಡಿಮೆಯಾಗಿದೆ. ಅವಳ ಕೆಲಸದ ನೆರವಿಗಾಗಿಯೇ ಇಲ್ಲಿ ಕೆಲಸ ದವರನ್ನು ನೇಮಕ ಮಾಡಿಕೊಳ್ಳುತ್ತಿರುವುದು ಕಂಡುಬರುತ್ತದೆ. ಗಂಡಂದಿರು ಮನೆಯ ಕೆಲಸದಲ್ಲಿ ಸಹಾಯ ಮಾಡಲು ಬಂದರೆ ಮಹಿಳೆಯೆ ಸ್ವತಃ ನಿರಾಕರಿಸುತ್ತಾಳೆ. ಕಾರಣ ಅವಳು ಮೊದಲಿನಿಂದಲೂ ಮನೆಯ ಕೆಲಸವನ್ನೆಲ್ಲಾ ತನ್ನದೆಂದು ಭಾವಿಸಿಕೊಂಡಿರುತ್ತಾಳೆ. ಹೀಗಾಗಿಯೇ ಆ ಕೆಲಸದಿಂದ ಅವಳು

ಹೊರಬರುತ್ತಿಲ್ಲ. ಹಿಂದಿನ ಕುಟುಂಬಗಳಲ್ಲಿ ಮಹಿಳೆಯು ಕೇವಲ ಮನೆಯಲ್ಲಿ ಇರುವುದರಿಂದಾಗಿಯೇ ಆ ಕೆಲಸವನ್ನೆಲ್ಲಾ ಸಂಪೂರ್ಣತನ್ನದೆಂದು ಅಂದುಕೊಳ್ಳುತ್ತಿದ್ದಳು. ಆದರೆ ಆಧುನಿಕ ಕುಟುಂಬಗಳಲ್ಲಿ ತಾನು ಉದ್ಯೋಗಕ್ಕೆ ಹೋಗಿ ಮನೆಯ ಆರ್ಥಿಕ ಸ್ಥಿತಿ ಸುಧಾರಿಸಲು ಕಷ್ಟಪಡುತ್ತಿದ್ದಾಳೆ. ಹೀಗಾಗಿ ಅವರ ಗಂಡಂದಿರು ಇದನ್ನು ಅರಿತುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದರೆ ಅವರು ಮನೆಯ ಕೆಲಸದಲ್ಲಿ ನೇರವಾಗುತ್ತಿಲ್ಲ. ಬದಲಿಗೆ ಕೆಲಸದವರನ್ನು ನೇಮಕಮಾಡಿಕೊಳ್ಳುತ್ತಾರೆ.

ಮುಂದಿನ ೨.೨ರ ವೃತ್ತಚಿತ್ರದಿಂದ ಕಂಡುಬರುವ ಅಂಶ ಮನೆಯ ಹೊರಗಡೆ ಮಾಡಬೇಕಾದ ಕೆಲಸದಲ್ಲಿ ಗಂಡನ ನೆರವು ಯಾವ ರೀತಿಯಲ್ಲಿರಬೇಕು ಎಂಬುದು ಕುಟುಂಬಗಳ ಸ್ತ್ರೀಯರಿಂದ




ಅಭಿಪ್ರಾವನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದಾಗ ಶೇ. ೪೦ ರಷ್ಟು ಕುಟುಂಬದ ಮಹಿಳೆಯರು ಹೊರಗಡೆ ಕೆಲಸದ ನಿರ್ವಹಣೆಗೆ ಸ್ವಯಂ ತಾವೇ ನಿರ್ವಹಿಸಬಲ್ಲರು ಎಂದಾದರೆ. ಶೇ. ೩೨ ರಷ್ಟು ಕುಟುಂಬದ ಸ್ತ್ರೀಯರು ಕೆಲಸದವರಿಂದ ಇನ್ನೂಳಿದ ಕುಟುಂಬದ ಮಹಿಳೆಯರು ಶೇ. ೨೮ ರಷ್ಟು ಗಂಡನ ನೆರವು ಬೇಕೆನ್ನುವವರಾಗಿರುವುದು ಮಾಹಿತಿಯಿಂದ ತಿಳಿದುಬರುತ್ತದೆ. ಹಾಗೂ ಹಿಂದಿನ ದಿನಗಳಲ್ಲಿ ಪುರುಷರೇ ಮನೆಯ ಕೆಲಸ ಮಹಿಳೆಗೆ ಬಿಟ್ಟು, ಹೊರಗಡೆಯ ಕೆಲಸಗಳಾದ ವಿದ್ಯುತ್ ಬಿಲ್ ಕಟ್ಟುವುದು, ಫೋನ್‌ಬಿಲ್, ತರಕಾರಿ ತರುವುದು, ಬ್ಯಾಂಕಿಗೆ ಹೋಗುವ ಎಲ್ಲಾ ವ್ಯವಹಾರಿಕ ಜ್ಞಾನವನ್ನು ಪಡೆಯುತ್ತಿದ್ದಾಳೆ. ಮನೆಯ ಕೆಲಸದ ನೇರವಿನಲ್ಲಿ ಶೇ. ೨೫ ರಷ್ಟು ಬಿಡುಗಡೆ ಪಡೆಯುತ್ತಿದ್ದರೂ ಹೊರಗಡೆ ಶೇ. ೭೫ ರಷ್ಟು ಕೆಲಸಗಳನ್ನು ಮಹಿಳೆ ಇಂದು ನಿರ್ವಹಿಸುತ್ತಿದ್ದಾಳೆ. ಈ ಕೆಲಸಗಳನ್ನು ಅವಳು ಬಹಳ ಎಚ್ಚರಿಕೆಯಿಂದ ನಿರ್ವಹಿಸಬೇಕಾಗಿದೆ. ಪ್ರತಿಯೊಂದು ಲೆಕ್ಕಚಾರ ವನ್ನು ತಂದು ಮನೆಯ ಯಜಮಾನನಾದ ಗಂಡನಿಗೆ ಒಪ್ಪಿಸಬೇಕು. ಹೊರಗಡೆಯ ಕೆಲಸದ ಹೊರೆಯನ್ನು ಹೆಚ್ಚಿನ ರೀತಿಯಲ್ಲಿ ನಿಭಾಯಿಸುತ್ತಿದ್ದಾಳೆ. ಹಿಂದೆ ಹೊರಗಡೆ ಹೋಗಲು ಮಹಿಳೆಯರು

ಮುಜುಗರ ಪಡುತ್ತಿದ್ದರು. ನಾಚಿಕೆಯ ಸ್ವಭಾವ ಬಹಳಷ್ಟು ಇತ್ತು. ಆದರೆ ಇಂದಿನ ದಿನಗಳಲ್ಲಿ ಹೊರಗಡೆಯ ಕೆಲಸವನ್ನು ತಾನು ನಿರ್ವಹಿಸಬಲ್ಲೇ ಎನ್ನುವ ಧೈರ್ಯ ಪಡೆಯುತ್ತಿದ್ದಾಳೆ. ಪ್ರತಿ ಯೊಂದು ಕೆಲಸ ಗಂಡನ ಆಜ್ಞೆಯ ಮೇರೆಗೆ ನಡೆಯುತ್ತಿತ್ತು. ಇಂದು ಅವಳು ಯೋಚಿಸುವ ಮಟ್ಟಿಗೆ ಹೊರಗಿನ ಜ್ಞಾನ ಪಡೆಯಲು ಇಚ್ಛಿಸುತ್ತಿದ್ದಾಳೆ.

ಈ ಮುಂದಿನ ೨.೩೮ ವೃತ್ತಚಿತ್ರದಿಂದ ತಿಳಿದುಬರುವ ಅಂಶವೆಂದರೆ ಮಕ್ಕಳ ಶೈಕ್ಷಣಿಕ ಅಭಿವೃದ್ಧಿ ಜವಾಬ್ದಾರಿಯನ್ನು ಕುರಿತು ಮಾಹಿತಿಯನ್ನು ಕುಟುಂಬಗಳಿಂದ ಪಡೆದಾಗ ಶೇ. ೫೦ ರಷ್ಟು ಗೃಹಿಣಿಯೇ ಸ್ವತಃ ತಾವೇ ನಿರ್ವಹಿಸುತ್ತಾರೆ ಎಂದಾದರೆ, ಶೇ. ೪೦ ರಷ್ಟು ಗಂಡನದ್ದಾಗಿ ರುತ್ತದೆಂದು ತಿಳಿಸಿದರೆ ಇನ್ನೂಳಿದ ಕುಟುಂಬದ ಮಹಿಳೆಯರು ಶೇ. ೧೦ ರಷ್ಟು ಟ್ಯೂಷನ್ ಮೂಲಕ

ವೃತ್ತಚಿತ್ರ: ೨.೩




ಎನ್ನುವ ಅಭಿಪ್ರಾಯವನ್ನು ಕ್ಷೇತ್ರಕಾರ್ಯದಲ್ಲಿ ಕುಟುಂಬಗಳಿಂದ ತಿಳಿದುಬರುತ್ತದೆ. ಮೊದಲು ಮಕ್ಕಳ ಸಂಪೂರ್ಣ ಜವಾಬ್ದಾರಿ ಪುರುಷ ನಿರ್ವಹಿಸುತ್ತಿದ್ದರು. ಅಂದರೆ ಅವರುಗಳ ಓದಿನ ಕಡೆಯಾಗಲಿ, ಶಾಲೆಗಳಿಗೆ ಭೇಟಿ ನೀಡುವುದು, ಶುಲ್ಕ ಕಟ್ಟುವುದು ಎಲ್ಲಾ ಕೆಲಸಗಳನ್ನು ಪುರುಷನು ನಿರ್ವಹಿಸು ತ್ತಿದ್ದನು. ಆದರೆ ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯು ಸಹ ಮಕ್ಕಳ ಶೈಕ್ಷಣಿಕ ಅಭಿವೃದ್ಧಿ ಜವಾಬ್ದಾರಿ ಪಡೆಯುತ್ತಿದ್ದಾಳೆ. ಮಕ್ಕಳ ಆರೋಗ್ಯದ ವಿಷಯವಾಗಲಿ, ಶಿಕ್ಷಣ ವಿಷಯವಾಗಲಿ ಗಂಡನಿಗಿಂತಲೂ ಹೆಚ್ಚಿನ ಕರ್ತವ್ಯ ನಿಭಾಯಿಸುತ್ತಿದ್ದಾಳೆ. ಇಂದಿನ ದಿನಗಳಲ್ಲಿ ತಂದೆ-ತಾಯಿ ಇಬ್ಬರೂ ಉದ್ಯೋಗದಲ್ಲಿ ತೊಡಗಿಸಿ ಕೊಂಡಿರುವುದರಿಂದಾಗಿ ಮಕ್ಕಳಿಗೆ ಟ್ಯೂಷನ್ ಕಳುಹಿಸುತ್ತಿದ್ದಾರೆ. ತಂದೆ-ತಾಯಿಯವರು ಹೇಳುವುದಕ್ಕಿಂತಲೂ ಶಿಕ್ಷಕರು ಹೇಳುವುದರ ಮೇಲೆ ಮಕ್ಕಳಿಗೆ ಒಲವು ಹೆಚ್ಚಾಗಿ ರುತ್ತದೆ. ಕೆಲವು ಸಂಪ್ರದಾಯಸ್ಥ ಕುಟುಂಬಗಳಲ್ಲಿ ಇಂದಿಗೂ ಹೆಣ್ಣು ಮಕ್ಕಳನ್ನು ಹೊರಗಡೆ ಕಳುಹಿಸಲು ಹಿಂಜರಿಯುತ್ತಾರೆ.




ಮೇಲಿನ ೨.೪ರ ವೃತ್ತಚಿತ್ರದಿಂದ ಕೌಟುಂಬಿಕ ಕೆಲಸಗಳಲ್ಲಿ ನಿಮ್ಮ ಸಂಗಾತಿಯಿಂದ ಬಯಸುವ ನೆರವು ಕುರಿತು ಅಭಿಪ್ರಾಯವನ್ನು ಪಡೆದಾಗ ಶೇ. ೨೫ ರಷ್ಟು ಕುಟುಂಬದ ಮಹಿಳೆಯರು ಗಂಡನ ನೆರವು ಬೇಕು ಎಂದಾದರೆ, ಶೇ. ೪೦ ರಷ್ಟು ಕುಟುಂಬದ ಸ್ತ್ರೀಯರು ಗಂಡನ ನೆರವು ಬೇಡ ಎನ್ನುತ್ತಾರೆ. ಹಾಗೆಯೇ ಶೇ. ೩೫ ರಷ್ಟು ಕುಟುಂಬಗಳು ಸರಿಸಮಾನವಾಗಿರಬೇಕು ಎಂದು ತಿಳಿಸುತ್ತವೆ. ಪ್ರಸ್ತುತ ಕುಟುಂಬಗಳಲ್ಲಿ ಮಹಿಳೆಯು ಪುರುಷನು ನಿರ್ವಹಿಸುವ ಕೆಲಸಗಳನ್ನು ಇಂದು ತಾನು ನಿರ್ವಹಿಸುತ್ತಿದ್ದಾಳೆ. ಕೇಲವು ಕುಟುಂಬಗಳಲ್ಲಿಯಂತೂ ಗಂಡ ಒಂದು ಊರಿನಲ್ಲಿ ಕೆಲಸ ಹೆಂಡತಿ ಇನ್ನೊಂದು ಊರಿನಲ್ಲಿ ಕೆಲಸ ಮಾಡುವಾಗ ಸ್ವಲ್ಪಮಟ್ಟಿನ ಹಣ ಹೆಂಡತಿಯ ಕೈಯಲ್ಲಿ ನೀಡಿ ತಾವು ವಾರಕ್ಕೆ ಒಂದು ಸಲ ಬಂದು ಹೋಗುತ್ತಿರುತ್ತಾರೆ. ಇಂಥ ಸಂದರ್ಭದಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿ ಮಹಿಳೆಯೇ ಹೊರುತ್ತಾಳೆ. ಗಂಡನಿಂದ ನೇರವು ಬೇಕು ಎನ್ನುವವರ ಸಂಖ್ಯೆ ಬಹಳ ಕಡಿಮೆ ಇದೆ. ಇನ್ನೂ ಹೆಚ್ಚಿನ ರೀತಿಯ ಜನರು ಗಂಡನ ನೇರವು ಬೇಡವೆಂದೆ ಹೇಳುತ್ತಾರೆ. ಕಛೇರಿಯ ಕೆಲಸದ ಜೊತೆಗೆ ಮನೆಯ ಕೆಲಸವು ತಾನೆ ನಿಭಾಯಿಸುತ್ತಾಳೆ. ಆ ಸಂದರ್ಭದಲ್ಲಿ ಕೌಟುಂಬಿಕ ನೇರವು ಸರಿಸಮಾನವಾಗಿರಬೇಕು ಎನ್ನುವವರು ಅರಿವಿನ ಜ್ಞಾನ ಪಡೆದು ಕೊಂಡಿರುವವರಾಗಿದ್ದಾರೆ. ಸಮಾಜ ಪುರುಷ ಪ್ರಧಾನವಾಗಿರುವುದರಿಂದಾಗಿ ಬದಲಾವಣೆಯ ಸಂದರ್ಭದಲ್ಲಿಯೂ ಹಿಂದಿನ ರೀತಿ-ನಿಯಮಗಳನ್ನು ಮುಂದವರೆಸಿಕೊಂಡು ಹೋಗುತ್ತಾರೆ. ಕಾರಣ ಅವಳು ಹಿಂದಿನಿಂದಲೂ ಇದನ್ನು ಒಪ್ಪಿಕೊಂಡೆ ಬಂದಿರುತ್ತಾಳೆ.

ಮುಂದಿನ ೨.೫ರ ವೃತ್ತಚಿತ್ರದಿಂದ ಗಮನಿಸಬೇಕಾಗಿರುವುದೇನೆಂದರೆ ಅಗತ್ಯಕ್ಕಾಗಿ ಮನೆಯ ಯಜಮಾನ ಪ್ರಯಾಣ ಕೈಗೊಂಡರೆ ಆಗ ಕುಟುಂಬದ ನಿರ್ವಹಣೆ ಯಾರು ತೆಗೆದುಕೊಂಡು ನಿರ್ವಹಿಸುತ್ತಾರೆ ಎಂಬ ಪ್ರಶ್ನೆಗೆ ಕ್ಷೇತ್ರಕಾರ್ಯದ ಮಾಹಿತಿಯಿಂದ ಶೇ. ೪೧ರಷ್ಟು ಮನೆಯ




ಯಾಜಮನಿಕೆಯನ್ನು ಗಂಡನೆ ನಿರ್ವಹಿಸಬೇಕು ಎಂದಾದರೆ, ಶೇ. ೨೩ ರಷ್ಟು ಮಕ್ಕಳು ನಿರ್ವಹಿಸಬಹುದು ಹಾಗೂ ಶೇ. ೩೬ ರಷ್ಟು ಕುಟುಂಬಗಳು ಮನೆಯ ಇತರರು ಸಹ ಕುಟುಂಬದ ನಿರ್ವಹಣೆಯನ್ನು ಕೈಗೊಳ್ಳ ಬಹುದು ಎಂದು ತಿಳಿಸುತ್ತಾರೆ. ಹಿಂದಿನ ಕುಟುಂಬಗಳಲ್ಲಿ ಮಹಿಳೆಯರು ಹೊರಗಡೆ ಹೋಗುವ ಪರಿಸ್ಥಿತಿ ಬರುತ್ತಿರಲಿಲ್ಲ. ಆದರೆ ಪ್ರಸ್ತುತ ಕುಟುಂಬಗಳಲ್ಲಿ ಅದರಲ್ಲೂ ಉದ್ಯೋಗದಲ್ಲಿ ಹಲವಾರು ರೀತಿ-ನೀತಿ ನಿಯಮಗಳು ಇರುತ್ತವೆ. ಇವುಗಳನ್ನೆಲ್ಲ ತಾನು ಮೀರಬಾರದು ಎಂಬ ಉದ್ದೇಶದಿಂದ ಕೆಲವು ಸಲ ಹೊರಗಡೆಯ ಪ್ರಯಾಣ ಕೈಗೊಳ್ಳುವ ಅನಿವಾರ್ಯತೆ ಸಹಜವಾದುದು. ಇಂಥ ಸಂದರ್ಭದಲ್ಲಿ ಮನೆಯ ಪೂರ್ಣ ಜವಾಬ್ದಾರಿ ಗಂಡನೆ ತೆಗೆದುಕೊಳ್ಳಬೇಕಾಗುತ್ತದೆ. ಮಕ್ಕಳು ದೊಡ್ಡವರಿದ್ದರೆ ಅವರೇ ಮನೆಯ ಕೆಲಸ ನಿರ್ವಹಿಸುತ್ತಾರೆ. ಕೆಲವೊಂದು ಕುಟುಂಬಗಳಲ್ಲಿಯಂತೂ ಅವಳು ಪ್ರಯಾಣ ಕೈಗೊಳ್ಳುವ ಮುಂಚೆ ತನ್ನ ತವರಿನ ಸಹೋದರಿಯರನ್ನು ಮನೆಯಲ್ಲಿ ಬಿಟ್ಟು ಹೋಗುತ್ತಾರೆ. ಇಂದಿಗೂ ತನ್ನ ಗಂಡ ಮನೆಯ ಕೆಲಸ ಮಾಡುವುದಿಲ್ಲವೆಂದಾಗ ಅವಳು ಆತನ ಮನೆಯವರ ಸಹಾಯ ಪಡೆಯದೆ ತನ್ನ ಮನೆಯವರ ಸಹಾಯ ಪಡೆಯುತ್ತಾಳೆ. ಬದಲಾವಣೆಯ ಅರಿವು ಬಂದಿದೆ ಆದರೆ ಹಳೆಯ ಸಂಸ್ಕೃತಿಯೊಂದಿಗೆ ಮುಂದುವರೆಸಿಕೊಂಡು ಹೋಗುವ ಸಂದರ್ಭಗಳನ್ನು ಇಲ್ಲಿ ಕಾಣಬಹುದು.

೨.೬ರ ವೃತ್ತಚಿತ್ರದಲ್ಲಿ ತಿಳಿದುಬರುವಂತೆ ಹೆಣ್ಣು ಮಕ್ಕಳಿಗೆ ಸೂಕ್ತವೆನಿಸುವ ಉದ್ಯೋಗಗಳು ಯಾವುದು ಎಂಬುದರ ಬಗ್ಗೆ ಕುಟುಂಬದ ಮಹಿಳೆಯರಿಗೆ ಪ್ರಶ್ನಿಸಿದಾಗ ಶೇ. ೨೫ ರಷ್ಟು ಕುಟುಂಬದ ಮಹಿಳೆಯರು ಬ್ಯಾಂಕ್, ಪೋಸ್ಟ್ ಆಫಿಸ್ ಎನ್ನುವವರಾದರೆ, ಶೇ. ೬೦ ರಷ್ಟು ಟೀಚರ್‌ಗಳಾಗಲು ಸಮ್ಮತಿಸಿದರೆ ಉಳಿದ ಶೇ. ೧೫ ರಷ್ಟು ಕುಟುಂಬಗಳು ಮಾತ್ರ ಕ್ಷೇತ್ರಕಾರ್ಯ(ಫಿಲ್ಡ್)ದ ಕೆಲಸಗಳನ್ನು




ನಿರ್ವಹಿಸಬೇಕೆನ್ನುತ್ತಾರೆ. ಶೇ. ೬೦ ಹಾಗೂ ಶೇ. ೨೫ ಕುಟುಂಬಗಳ ಮಹಿಳೆಯರು ಒಂದೇ ಸ್ಥಿರವಾಗಿ ಕುಳಿತು ಸಮಯಕ್ಕೆ ಸರಿಯಾಗಿ ಮನೆಗೆ ಹೋಗುವ ಕೆಲಸಗಳನ್ನೇ ನಿರ್ವಹಿಸಲು ಬಯಸುತ್ತಾರೆ. ಮಹಿಳೆ ಇಂದು ಪುರಷನಿಗೆ ಸರಿಸಮಾನವಾಗಿ ಎಲ್ಲಾ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ. ಆದರೂ ಅವರೆಲ್ಲರೂ ಹೇಳಿಕೆ ನೀಡಿರುವುದನ್ನು ಗಮನಿಸಿದರೆ ಸಮಾಜ ಸೇವೆಯಂಥ ಕೆಲಸಗಳು ಅಂದರೆ ಫೀಲ್ಡ್‌ನಲ್ಲಿ ನಿರ್ವಹಿಸುವ ಕೆಲಸ ತಿರಸ್ಕರಿಸುತ್ತಾರೆ. ಕಾರಣವೆಂದರೆ ಹೆಚ್ಚು ಸಮಯ ಹೊರಗಡೆ ಕಳೆಯಬೇಕು. ಜ್ಞಾನ ಹೆಚ್ಚಿಗೆ ಬೆಳೆಯುತ್ತದೆ ಪ್ರತಿ ಯೊಂದನ್ನು ಗಂಡಂದಿರಿಗೆ ಪ್ರಶ್ನಿಸುತ್ತಾರೆ ಎಂಬ ಉದ್ದೇಶದಿಂದಾಗಿಯೇ ಗಂಡಂದಿರು ಹೆಂಡತಿಯರನ್ನು ಫೀಲ್ಡ್‌ನಲ್ಲಿ ಕೆಲಸ ನಿರ್ವಹಿಸುವುದನ್ನು ಇಷ್ಟಪಡುವುದಿಲ್ಲ. ಒಂದು ವೇಳೆ ಅವಳು ಇಷ್ಟಪಟ್ಟು ಹೋದರು ನಿನಗೆ ಕೆಲಸ ಮುಖ್ಯವೋ, ಗಂಡ/ಮಕ್ಕಳು ಮುಖ್ಯವೋ ಎನ್ನುವ ಸಮಸ್ಯೆಗಳನ್ನು ಮಹಿಳೆಗೆ ತಂದೊಡ್ಡುತ್ತಾರೆ. ಇಂಥ ಸಂದರ್ಭದಲ್ಲಿ ಅವಳ ಆಯ್ಕೆ ಕೇವಲ ಶಿಕ್ಷಕಿಯಾಗಿ ಇರಬೇಕು ಎನ್ನುವ ಭಾವನೆ ಬೆಳೆಸಿಕೊಳ್ಳುತ್ತಾಳೆ. ಗಂಡನಿಗಿಂತಲೂ ಹೆಚ್ಚು ಹೊತ್ತು ತಾನು ಹೊರಗಡೆ ಇರಬಾರದು ಬೇಗ ಮನೆಗೆ ಬರಬಹುದು. ಅಲ್ಲದೇ ಬ್ಯಾಂಕ್, ಪೋಸ್ಟ್‌ಆಫೀಸ್ ಈ ಕೆಲಸಗಳನ್ನು ಅರಿಸಿಕೊಳ್ಳಲು ಕಾರಣವೆಂದರೆ ಒಂದೆಡೆ ಸ್ಥಿರವಾಗಿ ಕುಳಿತು ನಿರ್ವಹಿಸುವಂತಹವು ಯಾವುದೇ ರೀತಿ ಗೊಂದಲಗಳಿರುವುದಿಲ್ಲ ಎನ್ನುವ ಅಭಿಪ್ರಾಯಕ್ಕೆ ಬರುತ್ತಾರೆ. ಮೊದಲು ಮನೆಯವರ ಪ್ರೀತಿ, ವಿಶ್ವಾಸ ಪಡೆಯುವುದೇ ಇವಳ ಮುಖ್ಯ ಉದ್ದೇಶವಾಗಿರುತ್ತದೆ. ಅವರಿಗೆ ವಿರೋಧವಾಗಿ ತಾನು ಮುಂದುವರೆಯಲು ಅವರುಗಳು ಬಯಸುತ್ತಿಲ್ಲ.

೨.೭ರ ವೃತ್ತಚಿತ್ರವು ಹಿಂದಿನ ಪ್ರಶ್ನೆಯನ್ನೆ ಮುಂದಿನ ಪ್ರಶ್ನೆಯಾಗಿ ಕೇಳಲು ಕಾರಣವೇನೆಂದು ತಿಳಿದುಕೊಳ್ಳುವ ಉದ್ದೇಶದಿಂದಾಗಿ ಹೆಣ್ಣು ಮಕ್ಕಳಿಗೆ ಈ ಕೆಲಸವೇ ಸೂಕ್ತವೆಂದು ಹೇಳಲು

ವೃತ್ತಚಿತ್ರ: ೨.೭
ಹೆಣ್ಣುಮಕ್ಕಳಿಗೆ ಈ ಕೆಲಸವೇ ಸೂಕ್ತವೆಂದು ಹೇಳಲು ಕಾರಣ




ಕಾರಣ ಎಂಬ ಪ್ರಶ್ನೆಯನ್ನು ಕೇಳಲಾಯಿತು. ಶೇ. ೩೫ ರಷ್ಟು ಕುಟುಂಬದ ಮಹಿಳೆಯರು ಗಂಡನಿಗಿಂತ ಮುಂಚೆ ಮನೆಯಲ್ಲಿರಬೇಕು ಎಂಬ ಅಭಿಪ್ರಾಯವಾಗಿದ್ದರೆ. ಶೇ. ೨೫ ರಷ್ಟು ಕುಟುಂಬದ ಸ್ತ್ರೀಯರು ಸಮಯದ ಅರಿವು ಪಾಲನೆ ಮಾಡಬೇಕು. ಹಾಗೆಯೇ ಶೇ. ೪೦ ರಷ್ಟು ಕುಟುಂಬದ ಮಹಿಳೆಯರು ಗಂಡನಿಗಿಂತ ಉನ್ನತ ಹುದ್ದೆಯಲ್ಲಿರಲು ಇಷ್ಟಪಡುವುದಿಲ್ಲವೆಂದು ಹೇಳುತ್ತಾರೆ. ಈ ಎಲ್ಲಾ ಮಾಹಿತಿಯ ವಿವರಣೆಗಳನ್ನು ಗಮನಿಸಿದಾಗ ಪುರುಷ ಪ್ರಧಾನ ಸಮಾಜದಲ್ಲಿ ಇರುವುದ ರಿಂದಾಗಿಯೆ ಆ ಚೌಕಟ್ಟನ್ನು ಮೀರದೆ ಅವರು ಹೇಳಿಕೊಟ್ಟ ನಿಯಮಗಳನ್ನು ಚಾಚು ತಪ್ಪದೇ ನಿರ್ವಹಿಸುತ್ತಿದ್ದಾಳೆ. ಈ ರೀತಿ ಅವಳು ಹೇಳಲು ಕಾರಣವೆಂದರೆ ಮನೆಯ ಕೆಲಸದ ಸಂಪೂರ್ಣವಾದ ಜವಾಬ್ದಾರಿ ಅವಳದೆ, ಆಗಿರುತ್ತದೆ. ಅಲ್ಲದೆ ಗಂಡನಿಗಿಂತಲೂ ಸ್ವಲ್ಪ ಸಮಯ ತಡವಾಗಿ ಬಂದರೆ ನೂರಾರು ಸಮಸ್ಯೆಗಳನ್ನು ಎದುರಿಸಬೇಕು. ಕೆಲವು ಸಂದರ್ಭದಲ್ಲಿ ವಿಚ್ಛೇದನೆ ಪಡೆಯುವ ಮಟ್ಟಿಗೆ ಜಗಳ ಉಂಟಾಗಬಹುದು ಎಂಬ ಭಯ/ಆತಂಕ ಅವಳಲ್ಲಿ ಮಿಡಿಯುತ್ತಿರುತ್ತದೆ. ಅಲ್ಲದೇ ಸಮಾಜದ ನಿಂದನೆಗೂ ಗಂಡನನ್ನು ಬಿಟ್ಟವಳು ಎಂಬ ಆರೋಪಕ್ಕೆ ಗುರಿಯಾಗಬೇಕು. ತನ್ನದು ಎನ್ನುವ ಬದುಕು ಅವಳಿಗೆ ಇರುವುದಿಲ್ಲ.

## ಆಧಾರಗಳು


೧. ಚ.ವಿ. ಮುಳಗುಂದ, ಎಚ್.ವಿ. ನಾಗೇಶ, (ಸಂ) *ಆಧುನಿಕ ಮಹಿಳೆ ಮತ್ತು ಸಮಾಜ*, ಪ್ರಕಟಣೆ (೨), ಮಾತ್ರೋಶ್ರೀ ಪ್ರಕಾಶನ, ಮುದ್ದೇಬಿಹಾಳ

೨. ಉದ್ಧೃತ., ರಾಮಚಂದ್ರನ್ ಸಿ.ಎಸ್., *ಆಶಯ ಆಕೃತಿ*, ಅಭಿನವ, ರಾಜಾಜಿನಗರ, ಬೆಂಗಳೂರು, ೧೯೯೪

೩. ಉದ್ಧೃತ., ಇಂದಿರಾ, *ಸ್ತ್ರೀವಾದಿ ದಿಕ್ಸೂಚಿ* ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೬

೪. ಹೇಮಲತಾ ಎಚ್.ಎಂ. *ಮಹಿಳಾ ಅಧ್ಯಯನ ಅರ್ಥ, ಹುಟ್ಟು, ಬೆಳವಣಿಗೆ ಪರಿಕಲ್ಪನೆ ಸಿದ್ಧಾಂತಗಳು,* ಡಿ.ವಿ.ಕೆ. ಮೂರ್ತಿ., ಮೈಸೂರು, ೨೦೦೪

೫. ಚಂದ್ರಶೇಖರ ಟಿ.ಆರ್., *ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೬. ವಿಜಯದಬ್ಬೆ., *ನಾರಿ : ಬಾರಿ-ದಿಗಂತ,* ರಚನಾ ಪ್ರಕಾಶನ, ಮೈಸೂರು, ೧೯೯೭

ಮಾನವ ಆಹಾರ ಉತ್ಪಾದನೆಗೆ ತೊಡಗಿದಾಗಿನಿಂದ ಮಹಿಳೆ ಮನೆ ಒಳಗೆ ಹೊರಗೆ ದುಡಿಯುತ್ತಾ ಬಂದಿದ್ದಾಳೆ. ಈ ಹಿಂದಿನ ದಿನಗಳಲ್ಲಿ ಸ್ತ್ರೀಯರು ಉದ್ಯೋಗ ಮಾಡುವ ಅಗತ್ಯತೆ ಇಲ್ಲವೆಂಬ ಭಾವನೆಯಿತ್ತು. ಮೊದಲಿನಿಂದಲೂ ಸ್ತ್ರೀ ಸಂಸಾರದಲ್ಲಿ ಪಾಲ್ಗೊಳ್ಳುತ್ತಿದ್ದಳು ಆದರೆ, ಕೆಲವೇ ವರ್ಷಗಳಿಂದೀಚೆಗೆ ಆರ್ಥಿಕ ಸಮಸ್ಯೆಗಳು ಹೆಚ್ಚಾದಂತೆ ಆಕೆ ಧನ ಸಂಪಾದನೆಗಾಗಿ ಹೊರಗಿನ ಉದ್ಯೋಗ ಮಾಡತೊಗಿದ್ದಾಳೆ ಎನ್ನಬಹುದು. ಇಂದಿನ ಪರಿಸ್ಥಿತಿ ಬದಲಾವಣೆಗಿರುವುದರಿಂದಾಗಿ ಎಲ್ಲರೂ ಉದ್ಯೋಗ ಮಾಡಲು ಮುಂದಾಗುತ್ತಿದ್ದಾರೆ. ಸ್ತ್ರೀ ಉದ್ಯೋಗವನ್ನು ಕನಿಷ್ಠವೆಂದು ಕಾಣುತ್ತಿದ್ದ ದೃಷ್ಟಿಕೋನ ಈಗ ಬದಲಾಗುತ್ತಿದೆ. ಇಂದು ಸ್ತ್ರೀ ಉದ್ಯೋಗವನ್ನು ಪ್ರಗತಿ ಹೆಜ್ಜೆ ಯೆಂದು ಕಾಣುವ ದೃಷ್ಟಿಬಂದಿದೆ. "ಉದ್ಯೋಗಸ್ಥ ಮಹಿಳೆಯ ಸಮಸ್ಯೆಗಳು ಹಲವಾರು. ಈ ಸಮಸ್ಯೆಗಳಾದ-

೧. ಸ್ತ್ರೀಯರ ವೈವಾಹಿಕ ಜೀವನ.

೨. ತರಬೇತಿ ಮತ್ತು ವಿದ್ಯಾಭ್ಯಾಸ.

೩. ಸಮಾಜದ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆ.

೪. ಮನೆತನದ ಆಸಕ್ತಿಗಳು ಇವುಗಳೆಲ್ಲದರ ಮೇಲೆ ಅವಲಂಬಿಸಿರುತ್ತದೆ.

ಬದಲಾಗಿರುವ ಆರ್ಥಿಕ ಪರಿಸ್ಥಿತಿ ಮತ್ತು ಮಾರ್ಪಾಡಾಗಿರುವ ವಿಚಾರದಿಂದಾಗಿ, ಪ್ರಗತಿಪರ ಮತ್ತು ಪ್ರಗತಿಗಾಮಿ ರಾಷ್ಟ್ರಗಳಲ್ಲಿ ಮಹಿಳೆಯೂ ಪುರುಷನೊಡನೆ ದುಡಿದು ಸಂಸಾರದ ಭಾರಕ್ಕೆ ಹೆಗಲು ಕೊಡುವಂತೆ ಆಗಿದೆ. ಮತ್ತೊಂದು ಕೈ ದುಡಿಯುವುದರಿಂದ ಸಂಸಾರದ ಆರ್ಥಿಕ ಮುಗ್ಗಟ್ಟು

ಹಗುರಾಗುತ್ತದೆ ಎಂದು ಪುರುಷನಿಗೂ ಅರಿವಾಗಿದೆ. ಇದರಿಂದ ಮಹಿಳಾ ಉದ್ಯೋಗ ಹೆಚ್ಚು ಪ್ರೋತ್ಸಾಹವನ್ನು ಪಡೆಯುತ್ತಿದೆ. ಮಹಿಳೆ ಉದ್ಯೋಗವನ್ನು ಕಾಲ ನಿರ್ವಹಣೆಗಾಗಿ ಕೈಗೊಂಡು ಗೌಣ ಕಾರ್ಯದಂತೆ ಪರಿಗಣಿಸಿದರೆ, ಆಕೆಗೆ ದುಡಿಮೆಯಲ್ಲಿ ದಕ್ಷತೆ ಪಡೆದು ಪ್ರಗತಿ ಹೊಂದುವ ಆಸಕ್ತಿ ಇರುವುದಿಲ್ಲ. “ದಕ್ಷ ಮತ್ತು ಸಮ ದುಡಿಮೆಗಾರಳಲ್ಲದ ಮಹಿಳೆಗೆ ಹೆಚ್ಚಿನ ತರಬೇತಿಗಾಗಿ ಪ್ರೋತ್ಸಾಹ ದೊರೆಯುವುದಿಲ್ಲ. ಆದ್ದರಿಂದ ಮಹಿಳೆಯರ ಹೆಚ್ಚಿನ ತಾಂತ್ರಿಕ ತರಬೇತಿ ಮತ್ತು ಉನ್ನತ ವಿದ್ಯಾಭ್ಯಾಸಗಳು ವಿರಳವಾಗಿದೆ. ಹಾಗಾಗಿ ಉದ್ಯೋಗಸ್ಥ ಮಹಿಳೆಯರ ಬಹುಪಾಲು ಜನರು ಸಾಮಾನ್ಯ ನೌಕರಿಗಳಲ್ಲಿ ತೃಪ್ತರಾಗುತ್ತಾರೆ”(ಚ.ಬಿ.ಮುಳಗುಂದ, ಹೆಚ್.ವಿ. ನಾಗೇಶ್;೧೯೮೬:೪೭). ಉದ್ಯೋಗಕ್ಕೆ ತೊಡಗಿದ ಮಹಿಳೆ, ದೂರದ ಊರಿನಲ್ಲಿ ೭ಂಟಿಯಾಗಿ ನಿಂತು ಕೆಲಸ ಮಾಡಲು ಧೈರ್ಯ ಮಾಡಬೇಕು. ಹಾಗಿಲ್ಲದಲ್ಲಿ ಮಹಿಳಾ ಉದ್ಯೋಗ ಸಮಸ್ಯೆಯಾಗುತ್ತದೆ. ಒಂಟಿಯಾಗಿ ನಿಂತು ಉದ್ಯೋಗದಲ್ಲಿ ತೊಡಗಿದ ಮಹಿಳೆ ದುಷ್ಟರ ಕೈಯಲ್ಲಿ ತೊಂದರೆಗೊಳಗಾಗಬಹುದು. ಮೇಲಾಧಿಕಾರಿ ಸುಸಂಸ್ಕೃತ ವ್ಯಕ್ತಿ ಇಲ್ಲದಿದ್ದಲ್ಲಿ ಮಹಿಳಾ ಉದ್ಯೋಗದ ಅಗ್ನಿ ಪರೀಕ್ಷೆಯಾಗುತ್ತದೆ. ಹಾಗಾಗಿ ಸ್ತ್ರೀಯರು ಕೆಲವು ಕ್ಷೇಮಕರ ಕ್ಷೇತ್ರಗಳಲ್ಲಿ ಮಾತ್ರ ಉದ್ಯೋಗ ಮಾಡಲು ಇಚ್ಛಿಸುತ್ತಾರೆ. ಇಂತಹ ಆರಿಸಿದ ಉದ್ಯೋಗದಿಂದ ಮಹಿಳಾ ಉದ್ಯೋಗದ ಪ್ರಗತಿ ಕುಂಠಿತವಾಗುತ್ತದೆ.

ಲಿಂಗ ಭೇದವಿಲ್ಲದೆ, ಸಮ ಕೆಲಸಕ್ಕೆ ಸಮ ಸಂಬಂಳವೆಂದು ಸರ್ಕಾರದ ಕಾನೂನು ನೀತಿಯಿದೆ. ಆದರೆ ಹೆಣ್ಣು ಮಕ್ಕಳು ನೌಕರಿ ಮಾಡಲು ಅವರಿಗೆ ವಿಶೇಷ ಸೌಲಭ್ಯಗಳು ಬೇಕಾಗುತ್ತವೆ. ಹೆಣ್ಣು ಮಕ್ಕಳಿಗೆ ಹೆರಿಗೆ ರಜೆ, ರಾತ್ರಿ ಕೆಲಸದಿಂದ ವಿನಾಯಿತಿ, ಹೆಚ್ಚು ಶ್ರಮದಾಯಕ ಕೆಲಸದಿಂದ ವಿನಾಯತಿ, ವಿಶೇಷ ವಸತಿ ಸೌಕರ್ಯ ಮತ್ತು ಮಕ್ಕಳ ಪೋಷಣೆಗೆ ಸೌಕರ್ಯ ಮತ್ತು ಹೆಣ್ಣುಮಕ್ಕಳ ವಸತಿ ನಿಲಯ ಮೊದಲಾದ ಸೌಕರ್ಯಗಳನ್ನು ಕೊಡಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಸ್ತ್ರೀಯರನ್ನು ದುಡಿಮೆಗಾಗಿ ಆರಿಸಿಕೊಳ್ಳುವುದು ಕಡಿಮೆ ಎನ್ನಬಹುದು. ವಿಶೇಷ ಸೌಲಭ್ಯಗಳಿಲ್ಲದೆ ಸ್ತ್ರೀಯರು ದುಡಿಮೆ ಮಾಡುವುದು ಕಷ್ಟವಾಗುತ್ತದೆ. ಹೊಸ ಜಾಗದಲ್ಲಿ ಮಹಿಳಾ ಹಾಸ್ಟಲ್ ಇಲ್ಲದಿದ್ದಲ್ಲಿ ಒಂಟಿಯಾಗಿ ನೌಕರಿ ಮಾಡುವ ಉದ್ಯೋಗಸ್ಥ ಮಹಿಳೆಗೆ ತೊಂದರೆಯಾಗುತ್ತದೆ. ಹೀಗಾಗಿ ವರ್ಗವಾದಾಗ, ಸ್ತ್ರೀಯರು ನೌಕರಿಯನ್ನು ಬಿಡಬಹುದು. ಇದರಿಂದ ಮಹಿಳಾ ಉದ್ಯೋಗದ ಪ್ರಗತಿ ಒಂದೇ ಸಮನವಾಗಿರದೇ ಏರು ಪೇರಾಗುತ್ತದೆ. ಮಹಿಳೆಯು ಪುರುಷನಂತೆ ದುಡಿಯಬೇಕು, ಸಂಪಾದಿಸಬೇಕು ಎನ್ನುವುದು ಸ್ತ್ರೀ ಸಮಾನತೆಯ ಪ್ರಶ್ನೆ ಅಲ್ಲವೇ ಅಲ್ಲ. ಸ್ತ್ರೀ ಸಮಾನತೆ ಎಂದರೆ ವಾರದ ಮೂರು ದಿನ ಗಂಡ ಮನೆ ಕೆಲಸ ನೋಡಿಕೊಂಡರೆ, ಇನ್ನುಳಿದ ದಿನ ಹೆಂಡತಿ ನೋಡಿ ಕೊಳ್ಳುತ್ತಾಳೆ. ಎಂಬ ಪೈಪೋಟಿಯ ಸಂಕುಚಿತ ವಿಚಾರವಲ್ಲ. ಹೆಣ್ಣುಮಕ್ಕಳ ವ್ಯಕ್ತಿತ್ವ ವಿಕಾಸ

ಹೊಂದಿ ಆಕೆ ಸಂಸಾರದ ಒಳಿತಿಗಾಗಿ, ಅದರ ಸಮಸ್ಯೆಗಳನ್ನು ಬಿಡಿಸುವಲ್ಲಿ ಸಮನಾಗಿ ನಿಲ್ಲಬಲ್ಲ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಪಡೆಯುವುದು ಎಂಬ ಅರ್ಥದಲ್ಲಿ ತಿಳಿಯಬೇಕು. "ಸ್ತ್ರೀಯರ ಬುದ್ಧಿ ಮೊಣಕಾಲ ಕೆಳಗೆ" ಎಂಬ ಮಾತು ಸ್ತ್ರೀಯರ ವ್ಯಕ್ತಿತ್ವ ವಿಕಾಸ ಹೊಂದದೆ ಸಾಮಾನ್ಯ ಜಗಳದಲ್ಲಿ ಕಮರಿ ಹೋಗುತ್ತದೆ ಎಂಬುದರ ಸೂಚಕ ಎನ್ನಬಹುದು. ಮನೋರೋಗಕ್ಕೆ ಮದ್ದೆಂದರೆ, ಮನಸ್ಸಿಗೆ ಹರುಷವೆನಿಸುವಂತಹ ಕಾರ್ಯದಲ್ಲಿ ತೊಡಗಿ ಬೇಸರವನ್ನು ದೂರ ಮಾಡಿಕೊಳ್ಳುವುದು. ಆದ್ದರಿಂದ ಮಹಿಳೆಯು ಉದ್ಯೋಗದಲ್ಲಿ ತೊಡಗಿಸುವುದರಿಂದ ಆಕೆಯ ಬುದ್ಧಿ ವಿಕಾಸ ಹೊಂದಿ ವಿಶಾಲ ಮನೋಭಾವಕ್ಕೆ ಆಸ್ಪದವಿದೆ. ಉದ್ಯೋಗ ಸ್ತ್ರೀಯರ ಸ್ವತಂತ್ರ ವ್ಯಕ್ತಿತ್ವವನ್ನು ಪ್ರಕಾಶ ಗೊಳಿಸುತ್ತದೆ.

ಗೃಹಿಣಿಯಾದ ಮಹಿಳೆ ಹೊರಗೆ ದುಡಿಯಲು ಹೋದಾಗ ಹಲವು ಸಮಸ್ಯೆಗಳು ಹುಟ್ಟಿ ಕೊಳ್ಳುತ್ತವೆ. ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯನ್ನು ಹೊರಗೆ ದುಡಿಯಲ್ಲು ಅವಕಾಶ ಕೊಡದೆ ಕೇವಲ ಅವಳನ್ನು ಗೃಹಕೇಂದ್ರಿತ್ವಕ್ಕೆ ಸೀಮಿತಗೊಳಪಡಿಸುತ್ತದೆ. ಒಂದು ವೇಳೆ ದುಡಿಯಲು ಹೊರಟರೆ ಮನೆ, ಗಂಡ, ಮಕ್ಕಳೆಂಬ ನಿರ್ಲಕ್ಷ್ಯ ಮಾಡುವ ಮನೋಭಾವನೆ ಸೃಷ್ಠಿಸುತ್ತದೆ. "ಸ್ತ್ರೀ ಉದ್ಯೋಗಕ್ಕೆ ಪ್ರಾಮುಖ್ಯತೆ ಕೊಟ್ಟು, ಸಂಸಾರದಿಂದ ದೂರ ಹೋಗಿಯಾದರೂ ದುಡಿಯಬೇಕೆ ಅಥವಾ ಸಂಸಾರದ ಸಾಮಿಪ್ಯಕ್ಕೆ ಬೆಲೆಕೊಟ್ಟು ಉದ್ಯೋಗ ಬಿಡಬೇಕೆ ಈ ಪ್ರಶ್ನೆಯನ್ನು ಕೋರ್ಟು ಬಿಡಿಸುವುದಕ್ಕಿಂತ ಪತಿ-ಪತ್ನಿಯರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಗೆಹರಿಸಿಕೊಳ್ಳಲು ಪ್ರಯತ್ನಿಸಬೇಕು. ಹೆಣ್ಣು ಮಗಳು ತನ್ನ ಉದ್ಯೋಗ ಸಂಸಾರ ಮತ್ತು ಮಕ್ಕಳ ಮಧ್ಯೆ ಸಮತೋಲನ ಉಳಿಸಿಕೊಳ್ಳಬೇಕು. ಈ ಅರ್ಥದಲ್ಲಿ ಸ್ತ್ರೀ ಉದ್ಯೋಗ ಸಹನೆಯ ಪರಮಾವಧಿ ಎನ್ನಬಹುದು"(ಚ.ಬಿ.ಮುಳಗುಂದ, ಹೆಚ್.ವಿ. ನಾಗೇಶ್;೧೯೮೬:೪೮). ದುಡಿಯುವ ಪತ್ನಿ ಆರ್ಥಿಕ ಸ್ವಾತಂತ್ರ್ಯವನ್ನು ಪಡೆದು ಅವರೊಂದಿಗೆ ವಿಚಾರ ಸ್ವಾತಂತ್ರವನ್ನು ಚಲಾಯಿಸುತ್ತಾಳೆ. ಇಂತಹ ಸ್ವತಂತ್ರ ಮನೋಭಾವ ಆಕೆಗೂ ಆಕೆಯ ಪತಿಗೂ ಮನಸ್ತಾಪ ತರಬಹುದು. ಸಂಸಾರದಲ್ಲಿ ಅಶಾಂತಿ ಬೇರೂರಬಹುದು. ಆಧುನಿಕ ಯುಗದ ಆದರ್ಶ ಮಹಿಳೆ ಎಂದರೆ ಮನೆತನ ಮತ್ತು ಉದ್ಯೋಗ ಎರಡನ್ನೂ ದಕ್ಷಳಾಗಿ ನಡೆಸಿಕೊಂಡು ಹೋಗಬಲ್ಲ ವ್ಯಕ್ತಿ, ಆರ್ಥಿಕ ಸೌಲಭ್ಯವನ್ನು ಸಂಸಾರಕ್ಕೆ ಒದಗಿಸಿ, ಸೌಮ್ಯವಾಗಿ ನಡೆಯಬಲ್ಲ ಗೃಹಿಣಿ ಎಂಬ ಆದರ್ಶ ಕಲ್ಪನೆ ವಾಸ್ತವದಿಂದ ದೂರವಾದದ್ದು. ಆರ್ಥಿಕ ಮತ್ತು ವಿಚಾರ ಸ್ವಾತಂತ್ರ್ಯ ಒಂದಕ್ಕೊಂದು ಪೋಷಕವಾದರಿಂದ, ಸಂಸಾರದ ನಡವಳಿಕೆ, ವಿಕೋಪಕ್ಕೆ ತಿರುಗದೆ ಸಮತೋಲನವಾಗಿ ಉಳಿಯುವಂತೆ ಮಾಡುವಲ್ಲಿ ಪತಿ-ಪತ್ನಿ ಇಬ್ಬರ ಪಾತ್ರವೂ ಮಹತ್ವವಾದದ್ದು. ಇಲ್ಲದಿದ್ದಲ್ಲಿ ಗಳಿಕೆ ಉದ್ಯೋಗ ಸುಖ ತರದೆ ಕಂಟಕವಾಗಬಹುದು. ಇಂದು ಬದಲಾಗಿರುವ ಸರ್ಕಾರದ ಧೋರಣೆ,

ಕಾಯಿದೆ ಮತ್ತು ಸ್ತ್ರೀ ವಿದ್ಯಾಭ್ಯಾಸ, ಪ್ರೋತ್ಸಾಹಗಳು ವಿದ್ಯಾವತಿಯಾದ ಮಹಿಳೆ ತನ್ನ ಪಾಂಡಿತ್ಯ ಪ್ರತಿಭೆಗಳ ಲಾಭ ಪಡೆಯುವಂತೆ ಪ್ರೋತ್ಸಾಹಿಸುತ್ತವೆ.

ಇವುಗಳು ಮಹಿಳಾ ಉದ್ಯೋಗಕ್ಕೆ ಅನುಕೂಲ ವಾತಾವರಣ ಕಲ್ಪಿಸಿವೆ. ಉದ್ಯೋಗಸ್ಥ ಮಹಿಳೆ ಹೊರ ಪ್ರಪಂಚದ ಅರಿವಿನಿಂದ ಪತಿಯ ನಿಜ ಸಂಗಾತಿಯಾಗುತ್ತಾಳೆ. ಆದ್ದರಿಂದ ಪತ್ನಿಯನ್ನು ಉದ್ಯೋಗ ಮಾಡುವಂತೆ ಪತಿ ಹುರಿದುಂಬಿಸುವುದು ಹೆಚ್ಚಾಗಿ ಕಂಡುಬಂದಿದೆ. ಆದರೂ ಹಿಂದಿನ ನಡವಳಿಕೆ, ನಂಬಿಕೆಗಳಿಂದ ಯಜಮಾನನಾದ ಪತಿ-ಪತ್ನಿಯ ಮನೆ ಕೆಲಸದಲ್ಲಿ ಸಹಕಾರ ನೀಡಲು ಮುಂದಾಗುವುದಿಲ್ಲ. ಹಾಗೆ ಸಹಕಾರ ನೀಡುವುದೆಂದರೆ, ಹೆಂಡತಿಯ ದಾಸರಾದಂತೆ ಎಂಬ ಮನೋಭಾವನೆಯನ್ನು ಕಲ್ಪಿಸಿಕೊಂಡಿದ್ದಾರೆ. ಇಂತಹ ಮೂಢಭಾವನೆ, ಬದಲಾಗಬೇಕು. ಉದ್ಯೋಗಸ್ಥ ಗೃಹಿಣಿ ಮತ್ತು ಸಣ್ಣ ಕುಟುಂಬಗಳು ಒಟ್ಟಾಗಿ ಕಾಣಿಸಿಕೊಳ್ಳುತ್ತವೆ. ಇದಕ್ಕೆ ಕಾರಣವೆಂದರೆ, ಉದ್ಯೋಗಸ್ಥ ಮಹಿಳೆ ತನ್ನ ಕುಟುಂಬವವನ್ನು ಸಮಯೋಚಿತವಾಗಿ ನಿಯಂತ್ರಿಸಬೇಕಾಗುತ್ತದೆ. ಇದರಿಂದ ಕುಟುಂಬ ಯೋಜನೆ ಅನಿವಾರ್ಯವಾಗಿ ನೇರವೇರುತ್ತದೆ. ಉದ್ಯೋಗಸ್ಥ ತಾಯಿಯ ಮಕ್ಕಳು ಅಲಕ್ಷ್ಯಗೊಂಡು ಬೆಳೆಯುತ್ತಾರೆಂಬ ಹೆದರಿಕೆಯಿದೆ. ಆದರೆ ನಿಜವಾಗಿ ಹೀಗೆ ಆಗಬೇಕಾಗಿಲ್ಲ. ಹಾಗೆ ನೋಡಿದರೆ, ಮಕ್ಕಳು ತಾಯಿಯ ಜವಾಬ್ದಾರಿಯ ಭಾರವನ್ನು ಅರಿತುಕೊಂಡು, ಸಹಾನುಭೂತಿ ಸಹಕಾರ ನೀಡುವ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬಹುದು. ಉದ್ಯೋಗಸ್ಥ ತಾಯಿ ಹೊರ ಪ್ರಪಂಚದ ಸಂಪರ್ಕದಿಂದ ಹೆಚ್ಚಿನ ಅರಿವು ಪಡೆಯುತ್ತಾಳೆ. ಆದ್ದರಿಂದ ತನ್ನ ಮಕ್ಕಳ ಬುದ್ಧಿ ಮತ್ತು ಅಭಿಲಾಷೆಗಳನ್ನು ಅನುಸರಿಸಿ ಅವರ ಜೀವನ ಕ್ರಮವನ್ನು ರೂಪಿಸುವಲ್ಲಿ ನೈಜತೆಯಿಂದ ಯೋಚಿಸುತ್ತಾಳೆ. ಭಾವೋದ್ರೇಕವನ್ನು ತಡೆಯುತ್ತಾಳೆ. ಅಂದರೆ ಸತ್ಯಾಸತ್ಯವನ್ನು ತಿಳಿದು ನೈಜ ವಿಚಾರ ಮಾಡುತ್ತಾಳೆ. ಇದರಿಂದ ಮಕ್ಕಳು ತಮ್ಮ ಸಹಜ ಶಕ್ತಿಯಿಂದ ಬೆಳೆಯುತ್ತಾರೆ. ಇಬ್ಬರೂ ದುಡಿಯುವ ಮನೆಯಲ್ಲಿ, ಗಂಡ- ಸರ್ವಾಧಿಕಾರಿ, ಹೆಂಡಂತಿ- ಗುಲಾಮಳು ಎಂಬ ಭಾವನೆ ಬೆಳೆಯುತ್ತದೆ. ಹೊಂದಾಣಿಕೆಯು ಸಂಸಾರಕ್ಕೆ ಪತ್ನಿಯ ಉದ್ಯೋಗ ಮಾರಕ ಎಂಬ ಮಾತು ನಿಜವಲ್ಲ. ಹೊಂದಾಣಿಕೆಯ ಪತಿ-ಪತ್ನಿಯರ ಮೂಲ ಮನೋಭಾವನೆ, ನಡವಳಿಕೆಗಳ ಮೇಲೆ ಅವಲಂಬಿಸಿರುತ್ತದೆಯೇ ಹೊರತು ಪತ್ನಿಯ ಉದ್ಯೋಗ ಮೇಲಲ್ಲ. ಜಗಳಗಂಟರು ಹೇಗಾದರೂ ಜಗಳವಾಡುವವರೇ.

"ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸಿ ತನ್ನ ಕಾರ್ಯ ರಂಗವನ್ನು ವಿಶಾಲ ಮಾಡಿಕೊಳ್ಳಲು ಉದ್ಯೋಗಸ್ಥ ಮಹಿಳೆಗೆ ಹೆಚ್ಚಿನ ಅವಕಾಶವಿದೆ. ಇದರಿಂದ ಸಾಮಾನ್ಯ ಮಹಿಳೆಯ ಹಾಳು ಹರಟೆ ಮತ್ತು ವಸ್ತು ಸಂಗ್ರಹ ದಾಹ ಕಡಿಮೆಯಾಗುತ್ತದೆ. ಇಂತಹ ಬದಲಾದ ಧೋರಣೆಯಿಂದ

ಮಹಿಳೆಯರು ಸಂಘ-ಸಂಸ್ಥೆಗಳನ್ನು ಕಟ್ಟಿ ಸಮಾಜ ಸೇವೆ ಸಲ್ಲಿಸುತ್ತಿರುವುದನ್ನು ಕಾಣುತ್ತೇವೆ. ಒಂದು ಸಮಸ್ಯೆಯನ್ನು ನೋಡುವಾಗ ಮಹಿಳೆ ಮತ್ತು ಪುರುಷ ದೃಷ್ಟಿಕೋನದಲ್ಲಿ ವ್ಯತ್ಯಾಸವಿದೆ. ಆದ್ದರಿಂದ ಹೆಣ್ಣು ಮಗಳು ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿ ಭಾಗವಹಿಸುವುದು ದೇಶದ ಪ್ರಗತಿಯನ್ನು ಸಾಧಿಸುವಲ್ಲಿ ಸಹಾಯಕವಾಗಬಲ್ಲದು"(ಚ.ಬಿ.ಮುಳಗುಂದ, ಹೆಚ್.ವಿ. ನಾಗೇಶ್;೧೯೮೬:೫೦). ಮನೆಯ ಹೊರಗೆ ಉದ್ಯೋಗ ಸಮಾಜ ಸೇವೆ ಮಾಡುವ ಸ್ತ್ರೀಯರ ಗೌರವ ಮತ್ತು ಸೌಲಭ್ಯ ಲಾಭಗಳು, ಮನೆಗೆ ಅಂಟಿ ಕುಳಿತ ಸಾಮಾನ್ಯ ಗೃಹಿಣಿಯನ್ನು ಆಕರ್ಷಿಸಿವೆ. ಉದ್ಯೋಗದಿಂದ ಒದಗುವ ಸ್ವಾತಂತ್ರ್ಯ, ಸೌಲಭ್ಯಗಳು ಅದರ ಅನಾನುಕೂಲತೆಗಳಿಗಿಂತ ಮಿಗಿಲಾದದ್ದು ಎಂಬ ಅರಿವು ಮಹಿಳೆಯರಿಗೆ ಮೂಡಿದೆ. ಆದ್ದರಿಂದ ಮಹಿಳಾ ಉದ್ಯೋಗಸ್ಥರ ಸಂಖ್ಯೆ ಹೆಚ್ಚತೊಡಗಿ ಪುರುಷರಂತೆ ಸ್ತ್ರೀಯರೂ ರಾಷ್ಟ್ರದ ಉನ್ನತಿಗಾಗಿ, ಸ್ಥಾನಮಾನಕ್ಕಾಗಿ ಶ್ರಮಿಸಬೇಕು. ಮಹಿಳೆ ಮನೆಯಲ್ಲೇ ಕುಳಿತು ತಮಗೆ ಬೇಸರವಾಗುತ್ತದೆ ಎಂಬ ಭಾವನೆಯಿಂದ ಉದ್ಯೋಗಕ್ಕೆ ಹೋಗುತ್ತಾಳೆ. ಅವಳು ಉದ್ಯೋಗ ವನ್ನು ಮಾಡುವುದರಿಂದ ತಾನು ಸಂಪನ್ಮೂಲಗಳನ್ನು ಪಡೆಯಲು ಬಯಸುತ್ತಾಳೆ. ಈ ಸಂಪನ್ಮೂಲ ಗಳನ್ನು ಎರಡು ವಿಧಗಳಲ್ಲಿ ಕಾಣಬಹುದು. ಮೊದಲನೆಯದಾಗಿ ಪ್ರೀತಿ, ವಿಶ್ವಾಸ, ಭಾವನಾತ್ಮಕ ಸುರಕ್ಷತೆ ಹಾಗೂ ನಮಗೆ ಆಶ್ರಯ ನೀಡುವಂಥ ಒಂದು ವಾತಾವರಣದ ನಿರ್ಮಾಣ. ಎರಡನೆಯ ದಾಗಿ, ನಮ್ಮ ದಿನ ನಿತ್ಯದ ಜೀವನ ನಿರ್ವಹಣೆಗೆ ಹಾಗೂ ಜೀವನಾಭಿವೃದ್ಧಿಗೆ ತೀರಾ ಅವಶ್ಯವಾದ ಆಹಾರ, ಶಿಕ್ಷಣ, ಆಸರೆ, ಆರೋಗ್ಯ, ರಕ್ಷಣಾ ಸೌಲಭ್ಯಗಳು ಮುಂತಾದವುಗಳನ್ನು ಒದಗಿಸುವಂಥ ಒಂದು ವ್ಯವಸ್ಥೆ. ಈ ಸಂಪನ್ಮೂಲಗಳನ್ನು ಒದಗಿಸುವಲ್ಲಿ ಅನೇಕ ಕುಟುಂಬಗಳಲ್ಲಿ ಲಿಂಗ ತಾರತಮ್ಯವಿದೆ ಎಂದರೆ, ಹೀಗೂ ಉಂಟೆ ಎನ್ನುವವರಿಗೇನೂ ಕಡಿಮೆಯಿಲ್ಲ, ಆದರೆ ಇದು ಸತ್ಯ. ಕುಟುಂಬದಲ್ಲಿ ಹೆಣ್ಣು ಮಕ್ಕಳನ್ನು ಹೊಡೆಯದೆ ಬಡೆಯದೆ ಇರಬಹುದು, ಆದರೆ ಮೇಲೆ ಹೆಸರಿಸಿದ ಸಂಪನ್ಮೂಲಗಳನ್ನು ಹಂಚುವುದರಲ್ಲಿ ಹೆಣ್ಣಿಗೆ ಒಂದು ಅಳತೆ, ಗಂಡಿಗೆ ಮತ್ತೊಂದು ಅಳತೆ ಎಂಬ ತಾರತಮ್ಯವನ್ನು ಆಚರಿಸಿದಾಗ ಅದನ್ನು ಕೂಡ ಕೌಟುಂಬಿಕ ಹಿಂಸೆ ಎಂದೇ ಹೇಳ ಬೇಕಾಗುತ್ತದೆ. "ಆಹಾರ ಹಂಚುವಾಗ ಮಗು ವ್ಯಕ್ತಿಯ ಲಿಂಗವನ್ನು ಆಧಾರವನ್ನಾಗಿಟ್ಟುಕೊಂಡು ಹೆಣ್ಣಾದರೆ ಕಡಿಮೆ ಪ್ರಮಾಣದ, ಕಡಿಮೆ ಪೌಷ್ಟಿಕತೆಯುಳ್ಳ ಆಹಾರವನ್ನು ನೀಡುವುದು. ಪುರುಷರ ಗಂಡುಮಕ್ಕಳ ಭೋಜನಾನಂತರ ಸ್ತ್ರೀಯರಿಗೆ ಉಣಬಡಿಸುವುದು. ಅನೇಕ ಕುಟುಂಬಗಳಲ್ಲಿ ಜಾರಿಯಲ್ಲಿರುವಂಥ ಆಚರಣೆಗಳು. "ಮಗಳನ್ನು ಸಾಕುವುದು ನೆರಮನೆಯ ಗಿಡಕ್ಕೆ ನೀರೆರೆದಂತೆ" ಎಂಬ ತಮಿಳು ಗಾದೆ ಹೆಣ್ಣುಮಕ್ಕಳಿಗೆ ನಮ್ಮ ಸಮಾಜ ನೀಡಿರುವ ಪ್ರಾಶಸ್ತ್ಯಕ್ಕೆ ಒಂದು ನಿದರ್ಶನ"

(ಆರ್. ಇಂದಿರಾ;೨೦೦೨:೧೧). ಹೆಣ್ಣು ಆಗಲಿ, ಗಂಡೇ ಆಗಲಿ, ಆ ವ್ಯಕ್ತಿಯ ಜೀವನಾಭಿವೃದ್ಧಿಗೆ ಅತ್ಯಂತ ಪೂರಕವಾದ ಸಾಧನವೆಂದರೆ ಶಿಕ್ಷಣ. ಸ್ತ್ರೀ ಸ್ವಾತಂತ್ರ್ಯದ ಅತ್ಯಂತ ಪ್ರಬಲ ಸಾಧನವಾದ ಈ ಶಿಕ್ಷಣವನ್ನು ಪಡೆಯಲು ಯಾವ ಹೆಣ್ಣಿಗೂ ಒಂದು ಸೈದ್ಧಾಂತಿಕ ಮಟ್ಟದಲ್ಲಿ, ಅಡ್ಡಿಯೇನಿಲ್ಲ ಆದರೆ ವಾಸ್ತವ್ಯದಲ್ಲಿ, ಹೆಣ್ಣು ಶಾಲೆಗೆ ಹೋಗುತ್ತಾಳೆಯೋ, ಇಲ್ಲವೋ, ಹೋದರೂ ಅಲ್ಲಿ ಎಷ್ಟು ದಿನಗಳು ಉಳಿಯುತ್ತಾಳೆ, ಉಳಿದರೂ ಯಾವ ವಿಷಯದಲ್ಲಿ ಶಿಕ್ಷಣವನ್ನು ಪಡೆಯುತ್ತಾಳೆ ಇವೇ ಮುಂತಾದ ನಿರ್ಧಾರಗಳನ್ನು ತೆಗೆದುಕೊಳ್ಳುವುದು ಆಕೆಯ ಕುಟುಂಬ. "ಶಿಕ್ಷಣ ಕೇವಲ ಜ್ಞಾನಾರ್ಜನೆಯ ಸಾಧನವಲ್ಲ. ಆತ್ಮ ವಿಶ್ವಾಸ ಮತ್ತು ಧೈರ್ಯ ಸಾಹಸ ಪ್ರವೃತ್ತಿಗಳನ್ನೂ ನೀಡ ಬಲ್ಲಂಥ ಶಕ್ತಿಯೂ ಶಿಕ್ಷಣಕ್ಕಿದೆ"(ಆರ್. ಇಂದಿರಾ;೨೦೦೨:೧೨). ಮಹಿಳೆಯ ಜೀವನದ ಪರಮ ಗುರಿ ವಿವಾಹ ಮತ್ತು ತಾಯ್ತನ ಎನ್ನುವ ಕೌಟುಂಬಿಕ ಧೋರಣೆಗಳು ಸ್ತ್ರೀ ಶಿಕ್ಷಣಕ್ಕೆ ಅಡ್ಡಿಯನ್ನು ಒಡ್ಡಿವೆ. ಸ್ವಾವಲಂಬನೆಯ ಬದುಕಿಗೆ ಅವರನ್ನು ತಯಾರಿ ಮಾಡಬಹುದಾಗಿದ್ದ ಶಿಕ್ಷಣದಿಂದ ಹೆಣ್ಣು ಮಕ್ಕಳನ್ನು ವಂಚಿಸಿ; ಅವರ ಬದುಕಿಗೆ ಕೌಟುಂಬಿಕ ಜವಾಬ್ದಾರಿಗಳ ಸಂಕೋಲೆಗಳನ್ನು ಹಾಕುವುದರ ಮೂಲಕ, ಕುಟುಂಬದ ಸ್ವತಃ ಅವರನ್ನು ಹಿಂಸೆಗೆ ಗುರಿಪಡಿಸುವುದೆ ಅಲ್ಲದೆ, ಮುಂದೆ ಅವರ ಮೇಲೆ ನಡೆಯಬಹುದಾದ ಹಿಂಸೆಗಳಿಗೂ ನೇರವಾಗಿ ಜವಾಬ್ದಾರಿಯಾಗುತ್ತದೆ.

ಪುರುಷ ಪ್ರಧಾನ ಕುಟುಂಬದಲ್ಲಿ ಅಧಿಕಾರದ ಚುಕ್ಕಾಣಿ ಇರುವುದು. ಪುರುಷರು ಆತನ ಸಂಬಂಧಿಗಳೆಂಬ ಏಕೈಕ ಕಾರಣಕ್ಕಾಗಿ ಆತನ ತಾಯಿ, ಅಕ್ಕ ತಂಗಿಯರು, ಅತ್ತಿಗೆ ಮತ್ತು ಇತರ ಬಂಧುಗಳ ದೈಹಿಕ ದಂಡನೆ ಯಾವ ಮಾರ್ಗವನ್ನು ಬೇಕಾದರೂ ಅನುಸರಿಸುತ್ತಾರೆ. ಗಂಡನ ಮನೆಯಲ್ಲಿ ಸ್ತ್ರೀಯ ಮೇಲೆ ನಡೆಯುವ ದೌರ್ಜನ್ಯಕ್ಕೆ ಒಂದು ರೀತಿಯ ಪರೋಕ್ಷ ಸಾಮಾಜಿಕ ಅಂಗೀಕಾರವಿದೆ. ವಿವಾಹವಾದನಂತರ ಗಂಡನ ಹಾಗೂ ಆತನ ಮನೆಯವರು ನೀಡಬಹುದಾದ ಕಿರುಕುಳಗಳನ್ನು ಸಹಿಸಿಕೊಳ್ಳಬೇಕು, ಹೆಣ್ಣಾಗಿ ಹುಟ್ಟಿದ ತಪ್ಪಿಗೆ ಆಕೆ ಹೊಂದಾಣಿಕೆಯನ್ನು ಮಾಡಿ ಕೊಳ್ಳಬೇಕು. ಯಾವುದೇ ಸಂದರ್ಭದಲ್ಲಿಯೂ ತನ್ನ ತವರು ಮನೆಗೆ ಕಳಂಕವನ್ನು ತರುವಂಥ ರೀತಿಯಲ್ಲಿ ವರ್ತಿಸಬಾರದು ಎನ್ನುವ ರೀತಿಯಲ್ಲಿ ಮುಂತಾದ ಬೋಧನೆಗಳೆಲ್ಲಾ ಅನೇಕ ಹೆಣ್ಣು ಮಕ್ಕಳಿಗೆ ವಿವಾಹ ಪೂರ್ವದಲ್ಲಿಯೇ ತರಬೇತಿ ಕೊಟ್ಟಿರುವುದರಿಂದ ಹೆಣ್ಣು ಮಗಳಿಗೆ ತಾಯಿ, ಕೊಟ್ಟ ಮೇಲೆ ಹುಟ್ಟಿದ ಮನೆಗೂ ಕೊಟ್ಟಮನೆಗೂ ನೀನು ಹೆಸರು ತರಬೇಕೆಂಬ ಸಲಹೆ ಕೊಡುತ್ತಾ, ಏನೇ ಬಂದರೂ ಸಹಿಸಿಕೊಳ್ಳುವ ಮನೋಭಾವನೆಯನ್ನು ತುಂಬಿಕಳುಹಿಸುತ್ತಾಳೆ. ಅವರು ಆ ದೌರ್ಜನ್ಯವನ್ನು ಮೌನವಾಗಿ ಸಹಿಸುತ್ತಾ ಹೋಗುತ್ತಾರೆ. ಪುರಷ ಶ್ರೇಷ್ಠತೆಯನ್ನು ಪುಷ್ಠೀಕರಿಸುವ

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬದ ಒಳಗೆ ಹೆಣ್ಣು ಅನುಭವಿಸುವ ಹಿಂಸೆಗೆ ವಿಶೇಷವಾದ ಗಮನವನ್ನೇನೂ ಹರಿಸಿಲ್ಲ. ಅದು ದಿನನಿತ್ಯದ ಬದುಕಿಗೆ ಅವಿಭಾಜ್ಯ ಅಂಗವೇನೋ ಎಂಬಂತೆ ಪರಿಗಣಿಸಲ್ಪಟ್ಟಿದೆ. ಸ್ವತಃ ಹಿಂಸೆಯನ್ನು ಅನುಭವಿಸುತ್ತಿರುವವರೇ ಆ ಹಿಂಸೆಯನ್ನು ಸಹಿಸಿ ಅನುಭವಿಸುತ್ತಿರುವಾಗ ಹೊರಗಿನ ವ್ಯವಸ್ಥೆ ಮತ್ತು ನಿಷ್ಕ್ರಿಯವಾಗುತ್ತದೆ.

ಭಾರತದಂಥ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಮಹಿಳೆಗೂ ಪುರುಷನಷ್ಟೇ ಸರಿಸಮಾನವಾಗಿ ಬದುಕಲು ಆಸ್ತಿ ಹಕ್ಕು ತುಂಬಾ ಅವಶ್ಯಕ. ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯರಿಗೂ ಆಸ್ತಿಯ ಹಕ್ಕು ಬೇಕೇ ಬೇಕಾಗಿದೆ. ಜೀವನದಲ್ಲಿ ಸ್ತ್ರೀಯು ತನ್ನ ಕಾಲ ಮೇಲೆ ತಾನು ನಿಂತು ಪರಾವಲಂಬಿಯಾಗಿರದೆ ಅವಳು ತನ್ನ ಜೀವನದಲ್ಲಿ ಯಶಸ್ವಿಯಾಗಿ ಬಾಳಲು ಆಸ್ತಿ ತುಂಬಾ ಅತ್ಯಗತ್ಯ. ತಂದೆಯ ಆಸ್ತಿಯಲ್ಲಿಯೂ ಮಹಿಳೆಗೂ ಸಹ ಸಮಾನ ಪಾಲುದಾರಳು ಎಂಬ ಬೇಡಿಕೆಯಲ್ಲಿ ಯಾವುದೇ ತಪ್ಪು ಇರುವುದಿಲ್ಲ. ಈ ಮೊದಲು ಹಿಂದೂಗಳಲ್ಲಿ ಎರಡು ಪದ್ಧತಿಯ ಆಧಾರದ ಮೇಲೆ ಆಸ್ತಿ ಹಂಚಿಕೆಯನ್ನು ತೀರ್ಮಾನಿಸಲಾಗುತ್ತದೆ. ಒಂದು ಮಿತಾಕ್ಷರ ಪದ್ಧತಿ ಇದೊಂದು ದಯಾಭಾಗ ಪದ್ಧತಿ. ೧೧ನೇ ಶತಮಾನದಲ್ಲಿಯೇ ಮಿತಾಕ್ಷರ ಪದ್ಧತಿಯನ್ನು ಬರೆಯಲಾಗಿದೆಯಂತೆ. ಈ ಪ್ರಕಾರ ಗಂಡ ಮರಣ ಹೊಂದಿದಾಗ ಗಂಡನ ಆಸ್ತಿ ಹೆಂಡತಿಗೆ ಸೇರಬೇಕು. ಇಲ್ಲಿ ಗಂಡ ಮರಣಾಂತರ ಹೆಂಡತಿ ವಯಸ್ಸು ೩೨-೩೫ ಇದ್ದಾಗ ಗಂಡ ಸತ್ತ ನಂತರ ಆಕೆ ಇನ್ನೊಂದು ಮದುವೆಯಾದರೆ ಆ ಗಂಡನ ಆಸ್ತಿ ಅವಳಿಗೆ ಒಟ್ಟಿಗೆ ಸೇರುತ್ತಿರಲಿಲ್ಲ. ಭಾಗ ಪದ್ಧತಿಯಲ್ಲಿ ಮನೆಯ ಎಲ್ಲರೂ ಒಟ್ಟಿಗೆ ಬಾಳುವುದನ್ನು ಮತ್ತು ಮಹಿಳೆಯ ಆಸ್ತಿಯಲ್ಲಿ ಪಾಲನ್ನು ಹೊಂದುವುದನ್ನು ಕಾಣಬಹುದು. ೧೯೩೭ರ ಹಿಂದೂ ಮಹಿಳೆಯ ಆಸ್ತಿ ಹಕ್ಕಿನ ಕಾಯ್ದೆಯು ಹೆಣ್ಣು ಮಕ್ಕಳಿಗೆ ಗಂಡು ಮಗನಷ್ಟೇ ಆಸ್ತಿ ಹಕ್ಕನ್ನು ನೀಡಲಾಗಿದೆ.

"ಆಸ್ತಿಯಲ್ಲಿ ಎರಡು ವಿಧಗಳಿವೆ. ೧. ಸ್ಥಿರಾಸ್ತಿ ೨. ಚರಾಸ್ತಿ ಯಾವುದೇ ರೀತಿಯ ಬದಲಾವಣೆಯಾಗದೆ ಚಲನೆಯಾಗದೇ ಸ್ಥಿರವಾಗಿರುವುದಕ್ಕೆ ಸ್ಥಿರಾಸ್ತಿ ಎನ್ನಲಾಗಿದೆ. ಉದಾ: ಮನೆ, ಭೂಮಿ. ಯಾಜ್ಞವಲ್ಕ್ಯನ ಈ ಒಂದು ಹೇಳಿಕೆ ಪ್ರಕಾರ- "ಮಹಿಳೆಯ ಜೀವನವೇ ಒಂದು ಸ್ಥಿರಾಸ್ತಿ" ಎಂದಿದ್ದಾರೆ. ಕಾಲಕಾಲಕ್ಕೆ ಬದಲಾಗುವುದಕ್ಕೆ ಚರಾಸ್ತಿ ಎಂದು ಕರೆಯುತ್ತಾರೆ. ಉದಾ: ಹಣ.

ವೇದಗಳ ಕಾಲದಲ್ಲಿಯೂ ಅಂದರೆ ಹಿಂದಿನ ದಿನಗಳಲ್ಲಿಯು ಮಹಿಳೆಗೆ ಸ್ವಾತಂತ್ರ್ಯವಿರಲಿಲ್ಲ. ಮಹಿಳೆಯು ಸರ್ವಕಾಲಕ್ಕೂ ಪುರುಷನ ಅಧೀನದಲ್ಲಿರಬೇಕು ಎಂದು ಆ ಸಮೂಹದಲ್ಲಿ ಬಂಧಿಸಲಾಗಿತ್ತು. ಆದರೆ ಈಗಲೂ ಅಂದರೆ ಸುವರ್ಣ ಸ್ವಾತಂತ್ರ್ಯೋತ್ಸವ ಆಚರಿಸಿದ ನಂತರವೂ

ಮಹಿಳೆಯು ಬಂಧನದಲ್ಲಿಯೇ ಇರುವುದನ್ನು ಕಾಣಬಹುದು. ಸಂಪ್ರದಾಯಕ್ಕೆ ಒಳಗಾಗಿರುವವರು ಯಾವುದೇ ವಿಷಯವನ್ನು ನೇರವಾಗಿ ತೆಗೆದುಕೊಳ್ಳುವುದಿಲ್ಲ. ಆದರೆ "ನಾ ಸ್ತ್ರೀ ಸ್ವತಂತ್ರ್ಯ ಮರ್ಹಪಿ" ಎಂಬ ಮಾತನ್ನು ತಳ್ಳಿಹಾಕಿ ಮಹಿಳೆಗೆ ಸ್ವಾತಂತ್ರ್ಯ ನೀಡುವುದು ಅವಶ್ಯಕ"(ಸಮತಾ ಬಿ. ದೇಶಮಾನೆ;೨೦೦೩:೯೪). ೧೯೯೪ರಲ್ಲಿ ಭಾರತದ ಹಿನ್ನೆಲೆಯಲ್ಲಿ ಕುರಿತು ಅದರಲ್ಲಿ ಮಹಿಳೆಯ ಸ್ಥಾನಮಾನ ಕುರಿತು ಒಂದು ವರದಿ ಇದೆ. ಭಾರತದ ಹಿನ್ನೆಲೆಯಲ್ಲಿ ಸ್ಥಾನಮಾನಕ್ಕೆ ಸುಲಭವಾಗಿ ವ್ಯಾಖ್ಯಾಯೊಂದನ್ನು ಒದಗಿಸಲು ಸಾಧ್ಯವಿಲ್ಲ.

- "ಸಾಮಾನ್ಯ ಸಂಪ್ರದಾಯಗಳಾದ ಸಮಾನತೆ, ತಾರತಮ್ಯ, ಕಾನೂನು ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳು, ಅವಲಂಬನೆ, ಸ್ವಾತಂತ್ರ್ಯ ಇವುಗಳು ಎಲ್ಲಾ ವರ್ಗಗಳಿಗೂ ಎಲ್ಲಾ ಕಾಲಕ್ಕೂ ಅನ್ವಯವಾಗುವುದಿಲ್ಲ.
- ಭಾರತ ಸಂವಿಧಾನದ ೧೧ನೇ ವಿಧಿಯ ಪ್ರಕಾರ ಮಹಿಳೆಗೆ ಸಾರ್ವಜನಿಕವಾಗಿ ಉದ್ಯೋಗ, ಹುದ್ದೆಗಳ ಮೀಸಲಾತಿ, ಸಮಾನ ಅವಕಾಶಗಳು ಒದಗಿಸಿಕೊಡಲಾಗಿದೆ. ಭಾರತದ ಸಂವಿಧಾನದ ಪರಿವಿಡಿಯಲ್ಲಿ ಮೂರು ಪದಗಳಿವೆ. ಅವುಗಳೆಂದರೆ ಲಿಂಗಭೇದವಿಲ್ಲ ಮತ್ತು ಎಲ್ಲರಿಗೂ ಸಮಾನ ಅವಕಾಶವಿದೆ.
- ೧೯೫೬ರ ಹಿಂದೂ ಉತ್ತರಾಧಿಕಾರಿ ಕಾಯ್ದೆಯು ಮಹಿಳೆಗೆ ಪುರುಷನಷ್ಟೇ ಆಸ್ತಿ ಸಮಾನವಾಗಿ ಕೊಡಬೇಕು. ಅಲ್ಲದೇ ಹಿಂದೂಗಳು ಸ್ವಾತಂತ್ರ್ಯ ಹಾಗೂ ಸ್ವಂತ ಜೀವನವನ್ನು ನಡೆಸಲು ಅನುವು ಮಾಡಿಕೊಡುತ್ತದೆ. ಮತ್ತು ಮಹಿಳೆಗೆ ದಿಟ್ಟ ಹೆಜ್ಜೆಯನ್ನಿಡಲು ಅವಕಾಶ ಮಾಡಿಕೊಡ ಲಾಗುತ್ತದೆ"(ಸಮತಾ ಬಿ. ದೇಶಮಾನೆ;೨೦೦೩:೯೪).

ಕೇಂದ್ರ ಸರ್ಕಾರವು ಎಲ್ಲಾ ರಾಜ್ಯಗಳಿಗೂ ಸಮಾನಾಗಿ ಅನ್ವಯವಾಗುವಂತೆ ಹೆಣ್ಣು ಮಕ್ಕಳಿಗೂ ಪಿತ್ರಾರ್ಜಿತ ಆಸ್ತಿಯ ಮೇಲೆ ಸಮಾನ ಹಕ್ಕುಗಳನ್ನು ಕಲ್ಪಿಸುವ ಹಿಂದೂ ಉತ್ತರಾಧಿಕಾರ(ತಿದ್ದುಪಡೆ) ಕಾಯ್ದೆ-೨೦೦೪ ಮಸೂದೆಯನ್ನು ಇತ್ತೀಚೆಗೆ ಮಂಡಿಸಿತು. ತಂದೆಯೇ ಸ್ವ-ಇಚ್ಛೆಯಿಂದ ಆಸ್ತಿಯನ್ನು ತನ್ನ ಹೆಣ್ಣು ಮಕ್ಕಳಿಗೆ ಉಯಿಲು ಮಾಡಬಹುದು. ಆದರೆ ಮಹಿಳೆ ತಾನಾಗಿಯೇ ಆಸ್ತಿ ಕೇಳಲು ಹಕ್ಕು ದಾರಳಲ್ಲ. ಒಂದು ವೇಳೆ ತಂದೆಯ ಆಸ್ತಿಯು ಗಂಡು ಮಕ್ಕಳಿಗೆ ವರ್ಗಾವಣೆಯಾಗಿದ್ದರೆ ಆ ಆಸ್ತಿಯಲ್ಲಿ ಮಹಿಳೆ ಕಾನೂನು ಪ್ರಕಾರ ಹಕ್ಕುದಾರಳಾಗುವ ಅವಕಾಶವಿದೆ. ಆದಾಗ್ಯೂ ಈ ಹಕ್ಕು ಪಡೆಯಲು ಮಹಿಳೆ ವಂಚಿತಳಾಗಿದ್ದಾಳೆ. ಇದರ ವಿರುದ್ಧ ಹಲವಾರು ವರ್ಷ ಕೆಲವು ಮಹಿಳೆಯರು ನ್ಯಾಯಲಯದ ಮೆಟ್ಟಿಲು ಹತ್ತಿದ್ದಾರೆ.

ಈ ಮಸೂದೆ ಪಿತ್ರಾರ್ಜಿತ ಆಸ್ತಿಯ ಮೇಲೆ ಹೆಣ್ಣು ಮಕ್ಕಳಿಗಿರುವ ಹಕ್ಕುಗಳ ಸುಧಾರಣೆ ಕುರಿತು ಕಾನೂನು ಆಯೋಗ ಮಾಡಿರುವ ಶಿಫಾರಸ್ಸುಗಳನ್ನು ಅನುಸರಿಸಲಿದೆ. ಹೀಗಾಗಿ ಪಿತ್ರಾರ್ಜಿತ ಆಸ್ತಿಯ ಮೇಲೆ ಕೇವಲ ಗಂಡು ಮಕ್ಕಳಿಗಷ್ಟೇ ಅಧಿಕಾರ ನೀಡಿ, ಹೆಣ್ಣು ಮಕ್ಕಳಿಗೆ ಈ ಹಕ್ಕನ್ನು ನಿರಾಕರಿಸಿರುವ ೧೯೫೬ರ ಹಿಂದೂ ಉತ್ತರಾಧಿಕಾರ ಕಾಯ್ದೆಯ ೬ನೇ (ಕಂ)ಗೆ ತಿದ್ದುಪಡಿ ತರಲು ಉದ್ದೇಶಿಸಲಾಗಿದೆ. ಉತ್ತರಾಧಿಕಾರದ ಹಕ್ಕಿಗೆ ಸಂಬಂಧಪಟ್ಟಂತೆ ಈ ಸಮಗ್ರ ಕಾಯ್ದೆಯು ಕೇವಲ ಹಿಂದೂಗಳಿಗೆ ಮಾತ್ರವಲ್ಲದೆ ಬೌದ್ಧ, ಜೈನ್ ಮತ್ತು ಸಿಖ್ ಸಮಾಜಕ್ಕೂ ಸಮನಾಗಿ ಅನ್ವಯವಾಗುತ್ತದೆ. “ಇಂಥದೊಂದು ಮಸೂದೆ ಬಹಳ ಹಿಂದೆಯೇ ಅಂಗೀಕಾರವಾಗಬೇಕಾಗಿತ್ತು. ಇದರಿಂದ ವರದಕ್ಷಿಣೆ ಸಮಸ್ಯೆ ಕಡಿಮೆಯಾಗುತ್ತದೆ. ಮಹಿಳೆಯರಿಗೆ ಆಸ್ತಿ ದೊರಕಿದರೆ ಅದರಿಂದ ಅವರು ಸ್ವಾವಲಂಬಿಗಳಾಗುತ್ತಾರೆ. ಅಲ್ಲದೆ ಗಂಡಸರಿಗೆ ಹೋಲಿಸಿದರೆ ಹೆಂಗಸು ಆಸ್ತಿಯನ್ನು ಜೋಪಾನ ಮಾಡಿಕೊಳ್ಳುತ್ತಾರೆ” ಎನ್ನುತ್ತಾರೆ. ಖ್ಯಾತ ವಕೀಲೆ ಶೀಲಾ. ಸರ್ಕಾರವೇನೋ ಈ ವಿಧೇಯಕವನ್ನು ಸಂಸತ್ತಿನಲ್ಲಿ ಮಂಡಿಸಿ ಎಲ್ಲಾ ಪಕ್ಷಗಳಿಂದಲೂ ಬೆನ್ನು ತಟ್ಟಿಸಿಕೊಂಡಿದೆ. ಆದರೆ ಈ ವಿಧೇಯಕ ಎಷ್ಟರ ಮಟ್ಟಿಗೆ ಕಾನೂನಾಗಿ ರೂಪುಗೊಳ್ಳುತ್ತವೆ ಎಂಬುದನ್ನು ಮಾತ್ರ ಇನ್ನೂ ನಿಗೂಢ! ಏಕೆಂದರೆ ಈ ಹಿಂದೆ ಮಹಿಳೆಯರಿಗೆ ಶಾಸಕಾಂಗದಲ್ಲಿ ಶೇ. ೩೩ ರಷ್ಟು ಮೀಸಲಾತಿ ನೀಡಬೇಕು ಎಂದು ವಿಧೇಯಕ ಮಂಡಿಸಿದಾಗ ಸರ್ವ ಪಕ್ಷಗಳೂ ಅದನ್ನು ಸ್ವಾಗತಿಸಿದ್ದವು. ಆದರೆ ನಾನಾ ಒತ್ತಡಗಳಿಂದ, ರಾಜಕೀಯಗಳಿಂದ ಈ ಮಸೂದೆ ಅಂಗೀಕಾರವಾಗದೆ ಹಾಗೆಯೇ ಉಳಿದಿದೆ. ಇದಲ್ಲದೆ ಹಿಂದುಳಿದ ಜಾತಿಗಳ ಮಹಿಳೆಯರಿಗೆ ಉಪ-ಕೋಟಾ ಮತಿತ್ತರ ವಿಧೇಯಕಗಳೂ ಧೂಳು ತಿನ್ನುತ್ತಿವೆ.

ಒಟ್ಟಿನಲ್ಲಿ ಇಂಥದೊಂದು ಮಹತ್ವ ನಿರ್ಧಾರ ತೆಗೆದುಕೊಳ್ಳುವ ಅವಕಾಶ ರಾಜಕೀಯ ಪಕ್ಷಗಳ ಮೇಲಿದೆ. ಈ ಹಿಂದೆ ರಾಜಕೀಯ ಪಕ್ಷಗಳು ದಿವ್ಯ ನಿರ್ಲಕ್ಷ್ಯದಿಂದ ಮಹಿಳೆಯರ ಪರವಾದ ಎರಡು ವಿಧೇಯಕಗಳು ಅಂಗೀಕಾರವಾಗದೆ ಹಾಗೆಯೇ ಉಳಿದಿವೆ. ಎಲ್ಲಾ ಪಕ್ಷಗಳೂ ಇಂಥದೊಂದು ವಿಧೇಯಕ್ಕೆ ಹೊರಗಡೆ ಬೆಂಬಲ ಸೂಚಿಸಿದರೂ ಅಂತರ್ಯದಲ್ಲಿ ಬೆಂಬಲ ಸೂಚಿಸುವುದಕ್ಕೆ ಅಳುಕುತ್ತಿವೆ. ಒಟ್ಟಿನಲ್ಲಿ ರಾಜಕೀಯ ಪಕ್ಷಗಳ ಸಹಕಾರದಿಂದ ಈ ವಿಧೇಯಕ ಲೋಕಸಭೆ ಹಾಗೂ ರಾಜ್ಯ ಸಭೆಗಳೆರಡರಲ್ಲೂ ಅಂಗೀಕಾರವಾಗಿ ಮಹಿಳೆಯರಿಗೆ ವರದಾನವಾಗಲಿದೆಯೇ ಎಂಬುದು ಮಾತ್ರ ಯಕ್ಷಪ್ರಶ್ನೆಯಾಗಿಯೇ ಉಳಿದಿದೆ!

“ಈ ವಿಧೇಯಕ ಅಂಗೀಕಾರವಾದರೆ!

* ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳ ಹಾಗೆಯೇ ಜನ್ಮದಿಂದಲೇ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಪಡೆಯಲು ಹಕ್ಕು ಸಿಗುತ್ತದೆ.
* ಆಸ್ತಿ ಪಾಲು ಮಾಡಬೇಕಾದ ಸಂದರ್ಭ ಬಂದರೆ ಗಂಡು ಮಕ್ಕಳಿಗೂ ಹಾಗೂ ಹೆಣ್ಣು ಮಕ್ಕಳಿಗೂ ಸಮನಾಗಿ ಆಸ್ತಿ ದೊರೆಯುತ್ತದೆ.
* ಆಸ್ತಿ ಪಾಲಾಗುವ ಸಂರ್ಗಭದಲ್ಲಿ ಹೆಣ್ಣು ಮಕ್ಕಳು ಹಾಗೂ ಆಕೆಯ ಮಕ್ಕಳು ಬದುಕಿರದಿದ್ದರೆ, ಮೊಮ್ಮಕ್ಕಳಿಗೆ ಆಸ್ತಿ ಸಿಗುತ್ತದೆ.
* ಹೆಣ್ಣು ಮಕ್ಕಳಿಗೂ ತನ್ನ ಪಾಲಿನ ಆಸ್ತಿಯನ್ನು ಉಯಿಲು ಮಾಡಬಹುದು.
* ಹೆಣ್ಣು ಮಕ್ಕಳ ಮಕ್ಕಳೇನಾದರೂ ಆಕೆಯಿಂದ ದೂರವಾದರೆ ಅಂಥವರಿಗೆ ಆಕೆಯ ಆಸ್ತಿಯಲ್ಲಿ ಪಾಲು ಸಿಗುವುದು ಸಾಧ್ಯವಿಲ್ಲ"(ಮಹಿಳಾ ವಿಜಯ;೨೦೦೫).

ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಜನ್ಮಸ್ವತ್ತಾಧಿಕಾರ ನೀಡುವ ಕರ್ನಾಟಕದ ಹೊಸ ಕಾನೂನು ಅವರ ಮೇಲೆ ಮೃತ ತಂದೆಯ ಸಾಲವನ್ನು ತೀರಿಸುವ ಜವಾಬ್ದಾರಿಯನ್ನು ಹೊರಿಸುತ್ತದೆ. ಮದುವೆಯಾದ ಮೇಲೂ ಅವಳನ್ನು ತಂದೆಯ ಕುಟುಂಬದ ಒಂದು ಭಾಗವಾಗಿ ಕಾಣುತ್ತದೆ. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗು" ಎಂದು ಕೈ ತೊಳೆದುಕೊಳ್ಳುವುದನ್ನು ವಿರೋಧಿಸುತ್ತದೆ. ಅವಳೇನೂ ಒಬ್ಬಳು ಪಾಲದಾರಳನ್ನಾಗಿ ಭಾವಿಸಿ, ತಂದೆಯ ಕುಟುಂಬದ ಹಿರಿಯಳಾಗಿ(ಕರ್ತಾ) ವ್ಯವಹರಿಸುವ ಅವಕಾಶವನ್ನು ನೀಡುತ್ತದೆ. ಕಾನೂನಿನ ಪ್ರಕಾರ ಇಂದು ವಿವಾಹದ ನಂತರ ಪತಿಯ ವ್ಯಕ್ತಿತ್ವದಲ್ಲಿ ಪತ್ನಿಯ ವ್ಯಕ್ತಿತ್ವ ಸೇರಿ ಹೋಗುವುದಿಲ್ಲ. ಅವಳು ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ಉಳಿಸಕೊಳ್ಳುತ್ತಾಳೆ. ಕಾನೂನಿನ ದೃಷ್ಟಿಯಲ್ಲಿ ಅವಳು ತವರುಮನೆಯನ್ನು ತೊರೆಯುವುದು ಇಲ್ಲ, ಗಂಡನ ಮನೆಯನ್ನು ಸೇರುವುದೂ ಇಲ್ಲ. ಅದೆಲ್ಲಾ ಮಾನಸಿಕವಾಗಿ ಸಾಮಾಜಿಕವಾಗಿ ನಾವು ಮಾಡಿಕೊಂಡಿರುವ ಕಲ್ಪನೆಗಳು. "ಇಂದು ವಿವಾಹ, ಗಂಡು-ಹೆಣ್ಣಿನ ನಡುವೆ ದಾಂಪತ್ಯ ಜೀವನ ಸುಗಮವಾಗಿ ನಡೆಯದಾದಲ್ಲಿ ಅದನ್ನು ಮುರಿಯಲೂ ಸಾಧ್ಯ. ಅಂದ ಮೇಲೆ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಹೇಗೆ ಆಗುತ್ತಾಳೆ? ಸಾಮಾನ್ಯವಾಗಿ ಆಸ್ತಿ ಹಕ್ಕಿನ ವಿಷಯ ಮಾತನಾಡುವಾಗಲೆಲ್ಲ ವಿವಾಹಿತ ಹೆಣ್ಣು ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ಅದರ ವಿರುದ್ಧ ಮಾತನಾಡಲಾಗುತ್ತದೆ" (ಹೇಮಲತಾ ಮಹರ್ಷಿ;೧೯೯೯:೨೯). ಆದರೆ, ಇಂದು ಮನೆ ಮನೆಯಲ್ಲಿಯೂ ಅವಿವಾಹಿತರಾಗಿ ಉಳಿದ ಹೆಣ್ಣು ಮಕ್ಕಳಿದ್ದಾರೆ, ಪತಿಯಿಂದ ಪರಿತ್ಯಕ್ತ, ವಿಚ್ಛೇಧನ ಪಡೆದ ಹೆಣ್ಣು ಮಕ್ಕಳಿದ್ದಾರೆ. ವಿಧವೆಯರಾಗಿ ಮಕ್ಕಳೊಂದಿಗೆ ಪತಿಗೃಹದಿಂದ ಹೊರಹಾಕಲ್ಪಟ್ಟ ಹೆಣ್ಣು ಮಕ್ಕಳಿದ್ದಾರೆ. ಅಂತಹವರ

ಸಂಖ್ಯೆ ಗಣನೀಯವಾಗಿದೆ. ಅಂತವರ ಭವಿಷ್ಯದ ಬಗ್ಗೆ ಏಕೆ ನಾವು ಮಾತನಾಡುವುದಿಲ್ಲ? ಕೊನೆಯವರೆಗೂ ಅವರು ತಮ್ಮ ಅಣ್ಣ-ತಮ್ಮಂದಿರ ಆಶ್ರಿತರಾಗಿಯೇ ಬೆಳೆಯಬೇಕೇ? ತಂದೆಯ ಆಸ್ತಿ ತಮ್ಮ ಪಾಲನ್ನು ಪಡೆದು ಮಾನವ ಘಟನೆಯಿಂದ, ಗೌರವವಾಗಿ ಸ್ವತಂತ್ರ ಬಾಳು ನಡೆಸುವ ಅವಕಾಶ ಅವರಿಗೆ ಬೇಡವೇ? ಅಣ್ಣ-ತಮ್ಮಂದಿರ 'ಪ್ರೀತಿಯ ಸಿಂಚನ'ದಲ್ಲಿ ಎಷ್ಟು ನೆನದಿದ್ದಾರೆಂಬುದು ಇಂತಹ ಹೆಣ್ಣುಮಕ್ಕಳಿಗೆ ಚೆನ್ನಾಗಿ ಗೊತ್ತಿದೆ. ಹಾಕುವ ಒಂದ್ಹೊತ್ತಿನ ಕೂಳಿಗೆ ಮಾತುಗಳನ್ನು ಕೇಳುತ್ತಾ ಜೀವಮಾನ ಪರ್ಯಂತ ಎಲ್ಲರ ಸೇವೆ ಮಾಡುತ್ತಾ ದೇಹ ಸವೆಸಿ ಅಕಾಲ ಮುಪ್ಪಿನಿಂದ ತತ್ತರಿಸುತ್ತಾ, ಹೆಣ್ಣು ಬಾಳನ್ನು ನಿಂದಿಸುತ್ತಾ, ತನ್ನನ್ನು ಹೆಣ್ಣಾಗಿ ಹುಟ್ಟಿಸಿದ ದೇವರನ್ನು ಪ್ರಶ್ನಿಸುತ್ತಾ ಎಷ್ಟು ಕಾಲ ಈ ಹೆಣ್ಣುಮಕ್ಕಳು ಅಣ್ಣ-ತಮ್ಮಂದಿರ ಪ್ರೀತಿಯ ಸಿಂಚನದ ಮೇಲಷ್ಟೇ ಅವಲಂಬಿಸಿ ಬದುಕಿರಬೇಕು. ಸಮಾಜ ಉತ್ತರ ಹೇಳುವ ಕಾಲ ಈಗ ಬಂದಿದೆ. ಇನ್ನೂ ಹೆಚ್ಚು ಕಾಲ ಉತ್ತರ ಹೇಳದೆ ಮೂಕಳಾಗಿ ಉಳಿಯಲು ಸಾಧ್ಯವಿಲ್ಲ. ಅಲ್ಲದೆ, ಎಷ್ಟೋ ಜನ ಅಣ್ಣ-ತಮ್ಮಂದಿರು ಇಂತಹ ಹೆಣ್ಣುಮಕ್ಕಳನ್ನು ತಮ್ಮ ಕುಟುಂಬದ ಭಾಗವಾಗಿ ಕಾಣುತ್ತಿದ್ದಾರೆ.

ಹಿಂದೆ ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು ಇಲ್ಲದಿದ್ದುದರಿಂದ ವಿವಾಹ ಕಾಲದಲ್ಲಿ ಸ್ತ್ರೀ ಧನವಾಗಿ ಬಂಗಾರ ಇತ್ಯಾದಿಗಳನ್ನು ಕೊಡುವ ಪದ್ಧತಿ ಜಾರಿಗೆ ಬಂದಿತು. ಅದೇ ಮುಂದೆ, ಅವಳಿಗೆ ವಿವಾಹ ಕಡ್ಡಾಯವಾದಾಗ ೮ ವರ್ಷಕ್ಕೆ ಮೊದಲೇ ವಿವಾಹ ಕಾರ್ಯನೆರವೇರಿಸಿ ಜವಾಬ್ದಾರಿಯಿಂದ ಕೈತೊಳೆದುಕೊಳ್ಳಬೇಕಾಗಿಬಂದಾಗ ವರದಕ್ಷಿಣೆಯ ಆಮಿಷವನ್ನು ತೋರಿಸಿ, ಯಾವುದೋ ಒಂದು ಗಂಡಿಗೆ ಅವಳನ್ನು ಗಂಟು ಹಾಕಬೇಕಾದ ಪ್ರಮೇಯ ಬಂದಿತು. ಅದೇ ವಿಚಾರ, ಪದ್ಧತಿ ಇಂದು ಸಮಾಜದ ಮುಂದೆ ವರದಕ್ಷಿಣೆಯ ಭೂತವಾಗಿ ಬೃಹದಾಕಾರವಾಗಿ ಬೆಳೆದಿದೆ. ವಿವಾಹ ವಿಧಿ ಸರಳವಾಗುವುದಿರಲಿ ದಿನೇ ದಿನೇ ವಿವಾಹದ ಖರ್ಚು ವಿಪರಿತ ಬೆಳೆಯುತ್ತಾ ಬಂದಿದೆ. ಮಗಳಿಗೆ ಆಸ್ತಿಯಲ್ಲಿ ಪಾಲು ಕೊಡಲು ಒಲ್ಲದ ತಂದೆ, ಅಣ್ಣ-ತಮ್ಮಂದಿರು ತಮ್ಮ ಅಂತಸ್ತಿನ ಪ್ರದರ್ಶನಕ್ಕಾಗಿ, ವಿವಾಹಕ್ಕಾಗಿ ಲಕ್ಷಾಂತರ ರೂಪಾಯಿ ಖರ್ಚು ಮಾಡಲು ಸಿದ್ಧರಿರುತ್ತಾರೆ. ವರನಿಗೆ ವರದಕ್ಷಿಣೆ ಕೊಡಲು ಮುಂದಾಗುತ್ತಾರೆ. ದಾಂಪತ್ಯ ವಿರಸ ಪ್ರಾರಂಭವಾಗಿ ಹೆಣ್ಣುಮಗಳು ತವರಿಗೆ ಬರಬೇಕಾಗಿ ಬಂದಲ್ಲಿ, ಮದುವೆಗೆ ಮಾಡಿದ ಖರ್ಚು ವ್ಯರ್ಥವಾಗಿರುತ್ತದೆ. ಕೊಟ್ಟ ವರದಕ್ಷಿಣೆ ಗಂಡನ, ಅವನ ತಂದೆತಾಯಿಯರ ಕೈಯಲ್ಲಿರುತ್ತದೆ. ಅದರ ಬಗ್ಗೆ ಯಾವ ಸಾಕ್ಷ್ಯಾಧಾರವೂ ಇರುವುದಿಲ್ಲ. ತವರಿಗೆ ಹಿಂತಿರುಗಿ ಬಂದ ಹೆಣ್ಣುಮಗಳು ತಾನು ತವರಿಗೆ ಭಾರವಾದೆನೆಂದು ಕುಗ್ಗುತ್ತಾಳೆ. ತಳಮಳಿಸುತ್ತಾಳೆ, ವರದಕ್ಷಿಣೆಯ ಬದಲು ಆಸ್ತಿಯಲ್ಲಿ ಒಂದು ಪಾಲನ್ನು ಅವಳಿಗೆ ಕೊಟ್ಟಲ್ಲಿ,

ವಿವಾಹದ ಖರ್ಚನ್ನು ಕಡಿಮೆ ಮಾಡಿಕೊಂಡಲ್ಲಿ ಎಲ್ಲರಿಗೂ ನೆಮ್ಮದಿ ಆಸ್ತಿಪಾಲಿನ ಬದಲು, ಎಷ್ಟೇ ಪ್ರೀತಿಯಿಂದ ವರದಕ್ಷಿಣೆ ಕೊಟ್ಟು ಅದ್ದೂರಿಯಿಂದ ಹೆಣ್ಣು ಮಗಳ ಮದುವೆ ಮಾಡಿ ಕೊಟ್ಟರೂ ಅದರಿಂದ ಅವಳಿಗೇನೂ ಲಾಭವಿಲ್ಲ. ತವರು ಮನೆಯಲ್ಲಾಗಲಿ ಗಂಡನ ಮನೆಯಲ್ಲಾಗಲೀ ಅದರಿಂದ ಅವಳ ಸ್ಥಾನಮಾನವೇನೂ ಬದಲಾಗುವುದಿಲ್ಲ. ಅದೇ ಆಸ್ತಿ ಹಕ್ಕಿದ್ದಲ್ಲಿ, ಆಸ್ತಿಯ ಒಡತಿಯಾದಲ್ಲಿ ತವರಿನಲ್ಲಿಂಗೂ ಬೆಲೆ ಇರುತ್ತದೆ. ಗಂಡನ ಮನೆಯಲ್ಲಿಯೂ ಒಂದು ಸ್ಥಾನ ದೊರಕುತ್ತದೆ. ಇಲ್ಲವಾದಲ್ಲಿ, ಎಲ್ಲಿದ್ದರೂ ಅವಳು ನಿರಾಶ್ರಿತಳೆಂದೇ ಎನಿಸಿಕೊಳ್ಳುತ್ತಾಳೆ. ಯಾವ ಕಾಲಕ್ಕೂ ಅವಳ ಸ್ಥಾನಮಾನದಲ್ಲಿ ಸುಧಾರಣೆಯಾಗುವುದು ಸಾಧ್ಯವಿಲ್ಲ. ವಿವಾಹದ ವ್ಯರ್ಥ ಖರ್ಚು, ವರದಕ್ಷಿಣೆಯ ಬದಲು ಆಸ್ತಿಪಾಲನ್ನು ಮಾತ್ರ ಕೊಡುತ್ತೇನೆನ್ನುವ ತಂದೆ, ಅಣ್ಣ-ತಮ್ಮಂದಿರು ಇದ್ದಲ್ಲಿ ವರದಕ್ಷಿಣೆಯ ಪಿಡುಗು ಕಡಿಮೆಯಾಗುತ್ತದೆ. ಆಗ, ಹೆಣ್ಣು ಮಕ್ಕಳೂ ಅದಕ್ಕಿಂತ ಹೆಚ್ಚಿನದನ್ನು ಬಯಸುತ್ತಾಳೆ. "ಕಾನೂನಿನ ಪ್ರಕಾರ ಹಿಂದೂ ಅವಿಭಕ್ತ ಕುಟುಂಬದ ಯಾವುದೇ ಪುರುಷ ಸದಸ್ಯ ಬೇರೆಯಾಗ ಬಯಸಿದಲ್ಲಿ ಬೇರೆಯಾಗಿ ಬಯಸಿದ ಸದಸ್ಯನಷ್ಟೇ ತನ್ನ ಪಾಲು ಪಡೆದು ಬೇರೆಯಾಗಬಹುದು. ಉಳಿದ ಸದಸ್ಯರು ಅವಿಭಕ್ತ ಕುಟುಂಬವಾಗಿ ಮುಂದುವರೆಯುವ ಅವಕಾಶವಿದ್ದೇ ಇದೆ. ಆದ್ದರಿಂದ ಇಲ್ಲಿ ಹುಳಿಹಿಂಡುವ, ಅವಿಭಕ್ತ ಕುಟುಂಬವನ್ನೇ ಮುರಿಯುವ ಪ್ರಶ್ನೆಯೇ ಇಲ್ಲ"(ಹೇಮಲತಾ ಮಹರ್ಷಿ;೧೯೯೯:೩೦).

ಗಂಡು ಮಕ್ಕಳು ತಮ್ಮ ಸಂಸಾರಕ್ಕಾಗಿ, ವಿಭಕ್ತವಾಗಬಯಸಿದರೆ ಕಾಣದಿರುವ ತಪ್ಪು ಹೆಣ್ಣುಮಕ್ಕಳು ಬಯಸಿದಾಗ ಮಾತ್ರ ತಪ್ಪಾಗಿ ಏಕೆ ಕಾಣಬೇಕು? ಅವರು "ಕೊಟ್ಟ ಹೆಣ್ಣು, ಕುಲಕ್ಕೆ ಹೊರಗಿನ ಹೆಣ್ಣು" ಎಂದು ಭಾವಿಸುವುದರಿಂದ ತಾನೇ? ಅಳಿಯ ಗೌರವಾನ್ವಿತ ಅತಿಥಿಯಾಗಿ ಉಳಿಯಬೇಕೆಂಬ ಜವಾಬ್ದಾರಿಯನ್ನು ಮಗಳು-ಅಳಿಯ ಇಬ್ಬರೂ ತಮ್ಮದೆಂದು ಭಾವಿಸಿ ನಿರ್ವಹಿಸಲು ಸಾಧ್ಯ. ಎಷ್ಟೋ ಮನೆಯಲ್ಲಿ ಅಳಿಯನೇ ಮಗನ ಸ್ಥಾನದಲ್ಲಿ ನಿಂತು ಜವಾಬ್ದಾರಿ ನಿರ್ವಹಿಸುತ್ತಾನೆ. ಅಳಿಯನನ್ನು ಅತಿಥಿಯಾಗಿ ದೂರವಿಡದೇ ಮನೆಯ ಮಗಳೊಂದಿಗೆ ಕುಟುಂಬದ ಭಾಗವಾಗಿ ಕಾಣಬಾರದೆನ್ನುವ ನಿಯಮವೇನೂ ಇಲ್ಲ. ಬದಲಾವಣೆ ಸ್ವಾಗತಾರ್ಹ ಕೂಡಾ. ಇದರಿಂದ ಸಂಪ್ರದಾಯ ಕಲೆಗಿಂತ ಮಾನವ ಮಾನವನ ನಡುವಿನ ಸಂಬಂಧಗಳು ಗಟ್ಟಿಯಾಗಿ ಬೆಸೆದು ಕೊಳ್ಳುತ್ತವೆ. ೧೯೫೬ರಲ್ಲಿಯೇ ಹೆಣ್ಣು ಮಕ್ಕಳಿಗೆ ಸ್ವಯಾರ್ಜಿತ ಆಸ್ತಿಯಲ್ಲಿ ಸಮಪಾಲು ಕೊಟ್ಟಾಗ ಮಾನವ ಆಸ್ತಿ ಕಬಳಿಸಲು ಬಯಸಿದ ಅಳಿಯ ಪಿತ್ರಾರ್ಜಿತ ಆಸ್ತಿಯಲ್ಲಿನ ಹೆಂಡತಿಯ ಪಾಲನ್ನು ಕಬಳಿಸಬಹುದೆಂಬ ಭಯಕ್ಕೆ ಆಧಾರವಿಲ್ಲ.

"ಕರ್ನಾಟಕದ ಹೊಸ ಆಸ್ತಿ ಹಕ್ಕಿನ ಕಾನೂನಿನಲ್ಲಿ ನ್ಯೂನತೆಗಳೇನು ಇಲ್ಲವೆಂದಲ್ಲ. ಹೆಣ್ಣು ಮಕ್ಕಳಿಗೆ ಹುಟ್ಟಿನಿಂದ ಅಧಿಕಾರವನ್ನು ಪಿತ್ರಾರ್ಜಿತ ಆಸ್ತಿಯಲ್ಲಿ ಕೊಟ್ಟಿರುವುದರಿಂದ ಅವಳ ತಾಯಿಯ ಪಾಲು ಕಡಿಮೆಯಾಗುತ್ತದೆ, ನಿಜ. ಆದರೆ, ತಂದೆಯ ಮರಣಾನಂತರ ಅವನ ಪಾಲು ತಾಯಿಗೆ ಹೋಗಬೇಕೆಂದು ತಿದ್ದುಪಡಿ ಮಾಡಿದ್ದಲ್ಲಿ ಈ ನ್ಯೂನತೆಯನ್ನು ಸರಿಪಡಿಸಲು ಸಾಧ್ಯ"(ಹೇಮಲತಾ ಮಹರ್ಷಿ;೧೯೯೯:೩೧). ಅವಳಿಗೆ ಸಮಪಾಲು ಕೊಟ್ಟಿರುವುದರಿಂದ ಉಳಿದ ಕುಟುಂಬದ ಸ್ತ್ರೀಯರ ಸೊಸೆಯಂದಿರ ಪಾಲು ಕಡಿಮೆಯಾಗುತ್ತದೆಂದು ಹೇಳುವುದರಲ್ಲಿ ಅರ್ಥವಿಲ್ಲ. ಅವರ ಶಾಖೆಗೆ ಎಷ್ಟು ಪಾಲು ಕಾನೂನು ಬದ್ಧವಾಗಿ ಕಂಡುಬರುತ್ತದೋ ಅಷ್ಟು ಬಂದೇ ಬರುತ್ತದೆ. ಕೇವಲ ಗಂಡುಮಕ್ಕಳೇ ಪಿತ್ರಾರ್ಜಿತ ಆಸ್ತಿಗೆ ಹಕ್ಕುದಾರರಾಗಿದ್ದಾಗಲೂ ಅವರ ಸಂಖ್ಯೆ ಹೆಚ್ಚಿದಂತೆ ಪಾಲಿನ ಪ್ರಮಾಣ ಕಡಿಮೆಯಾಗಿಯೇ ಆಗುತ್ತದೆ. ಏನಾದರೂ ನ್ಯೂನತೆ ಇದ್ದಲ್ಲಿ ತಿದ್ದುಪಡಿ ಸೂಚಿಸಬೇಕೇ ಹೊರತು ಇಡೀ ಕಾನೂನನ್ನೇ ಆ ಕಾರಣದ ಮೇಲೆ ಖಂಡಿಸಬೇಕಾಗಿಲ್ಲ. ಅಲ್ಲದೆ ಕುಟುಂಬ ಯೋಜನೆಯ ಈ ಕಾಲದಲ್ಲಿ ಮಗ ಮಕ್ಕಳಿಬ್ಬರೇ ಇರುವ ಕುಟುಂಬದಲ್ಲಿ ಅವಿಭಕ್ತ ಕುಟುಂಬವೇನು ಬಂತು?

"ಕ್ರಮೇಣ ಮಾಯವಾಗುತ್ತಿರುವ, ಕಾನೂನಿನ ಪುಸ್ತಕದಲ್ಲಿಯಷ್ಟೇ ಉಳಿದಿರುವ ಅವಿಭಕ್ತ ಕುಟುಂಬದಲ್ಲಿ ಹೊಸ ಕಾನೂನು 'ಹುಳಿ ಹಿಂಡುವ' ಹೋಲಿಕೆ ಸರಿಯಾದುದಲ್ಲ. ಹುಳಿಹಿಂಡಿಯೇ ಹಾಲನ್ನು ಒಡೆಸಿ ರಸಗುಲ್ಲಾ ಮಾಡಬೇಕಾಗುತ್ತದೆ. ತಾನಾಗಿಯೇ ಆಕಸ್ಮಾತ್ತಾಗಿ ಹುಳಿತಾಗಿ ಒಡೆದರೂ ಹಾಲು ವ್ಯರ್ಥವಾಗುತ್ತದೆಂಬ ಭಯವಿಲ್ಲದೆ ಸಿಹಿ ತಿನಿಸಿನಲ್ಲಿ ಉಪಯೋಗಿಸಿಕೊಳ್ಳಬಹುದಾಗಿದೆ. ಆದರೆ, ಇಷ್ಟೆಲ್ಲಾ ವರ್ಷಗಳ ಕಾಲ ಹಿಂದೂ ಕಾನೂನಿನಲ್ಲಿ ನಾನಾ ರೀತಿಯ ತಿದ್ದುಪಡಿಗಳನ್ನು ಮಾಡಿ, ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ದುರ್ಬಲಗೊಳಿಸಿದ ಮೇಲೆ, ಅದು ತಾನಾಗಿಯೇ ಕುಸಿದು ಬೀಳುವುದರ ಬದಲು ಪೂರ್ಣವಾಗಿ ಪಿತ್ರಾರ್ಜಿತ ಆಸ್ತಿಯ, ಜನ್ಮ ಸ್ವತ್ತಾಧಿಕಾರದ ವ್ಯವಸ್ಥೆಯನ್ನೇ ತೆಗೆದು ಹಾಕುವುದು ಒಳ್ಳೆಯದು. ಮುಸ್ಲಿಂ ಕಾನೂನಿನಲ್ಲಿರುವಂತೆ ಆಸ್ತಿಯ ಕೆಲವೊಂದು ಭಾಗವನ್ನು ಬಿಟ್ಟು, ಉಳಿದುದರ ಬಗ್ಗೆ ಪೂರ್ಣಾಧಿಕಾರವನ್ನು ತಂದೆಗೆ ಕೊಡುವುದು ಒಳ್ಳೆಯದು, ಆಗ ಯಾರಿಗೂ ಜನ್ಮಸ್ವತ್ತಾಧಿಕಾರ ಇರುವುದಿಲ್ಲ. ಅದರೊಂದಿಗೆ, ರಾಜ್ಯಗಳಲ್ಲಿ ಮಾತ್ರ ಈ ರೀತಿಯ ಕಾನೂನಿನ ತಿದ್ದುಪಡಿ ಮಾಡದೇ ಕೇಂದ್ರದ ಕಾನೂನಿನಲ್ಲಿಯೇ ತಿದ್ದುಪಡಿ ತಂದು ಇಡೀ ಭಾರತದ ಮಹಿಳೆಯರಿಗೆ ಅನ್ವಯಿಸುವಂತೆ ಮಾಡುವುದು ಒಳ್ಳೇಯದು"(ಹೇಮಲತಾ ಮಹರ್ಷಿ;೧೯೯೯:೩೨). ಒಟ್ಟಿನಲ್ಲಿ, ಸಮಾನತೆಯ ಸಂಸ್ಕೃತಿಯನ್ನು ಬೆಳೆಸುವ, ಮಾನವ ಮಾನವರ

ನಡುವೆ ಯಾವುದೇ ರೀತಿಯ ಭೇದಭಾವದ ಪರ್ಯಾಯ ಸಂಸ್ಕೃತಿಯೊಂದನ್ನು ಕಟ್ಟ ಬಯಸುವ ಪುರುಷ ಸ್ತ್ರೀಯರೆಲ್ಲರೂ ಸ್ವಾಗತಿಸಬೇಕಾದ ಕಾನೂನು ಇದು.

ಸ್ತ್ರೀ ದಾಸ್ಯವು ಇತಿಹಾಸದ ಆರಂಭ ಹಾಗೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಉಗಮ ವನ್ನು ಏಂಗೆಲ್ಸ್ ಖಾಸಗಿ ಆಸ್ತಿಯ ಪರಿಕಲ್ಪನೆಯಲ್ಲಿ ಗುರುತಿಸುತ್ತಾರೆ. ಖಾಸಗಿ ಸಂಪತ್ತಿನ ಕಲ್ಪನೆಗೆ ಮೊದಲು ಆಸ್ತಿಯ ಒಡೆತನವು ಸಮಷ್ಟಿಗೆ ಸೇರಿದ್ದು ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಸ್ಥಾನಮಾನ ವಿತ್ತು. ಮನೆ ಹೊರಗಿನ ಗಂಡಿನ ಬೇಟೆಯ ಕೆಲಸದಷ್ಟೇ ಮನೆಯೊಳಗಿನ ಹೆಣ್ಣಿನ ಕೆಲಸಕ್ಕೂ ಗೌರವವಿತ್ತು. "ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ಚರಾಚರ ಸಂಪತ್ತು ಗಂಡಿನ ಅಧಿಕಾರಕ್ಕೆ ಒಳಪಟ್ಟಿತ್ತು. ಸ್ತ್ರೀಯ ಮನೆಯೊಳಗಿನ ಕೆಲಸ ಅನುತ್ಪಾದಕವೆನಿಸಿ ಆಕೆ ದಾಸ್ಯಕ್ಕೆ ಒಳಗಾದಳು. ಅವರಿಗೆ ಹೆಣ್ಣಿನ ಮೂಲಕ ಹರಿದು ಬರುತ್ತಿದ್ದ ವಂಶ ಹಾಗೂ ಉತ್ತರಾಧಿಕಾರವನ್ನು ಪಿತೃವರ್ಗ ಅಧಿಕಾರಕ್ಕೆ ವರ್ಗಾಯಿಸಲಾಯಿತು. ಲಿಂಗ ಅಸಮಾನತೆಯನ್ನು ಜೈವಿಕತೆ, ಲೈಂಗಿಕತೆ, ಉತ್ಪಾದನಾ ವ್ಯವಸ್ಥೆ, ಸಾಮಾಜೀಕರಣ, ಪಿತೃಪ್ರಧಾನ ಹಾಗೂ ಬಂಡವಾಳಶಾಹಿ ವ್ಯವಸ್ಥೆಗಳೊಂದಿಗೆ ಒಟ್ಟಾಗಿಯೇ ಗ್ರಹಿಸಬೇಕಾಗುತ್ತೆ"(ಹೇಮಲತಾ ಮಹರ್ಷಿ;೧೯೯೯:೩೩). ಕುಟುಂಬ ಎನ್ನುವುದು ಸಹಜ ಸಂಸ್ಥೆ, ಅದು ಖಾಸಗಿ ಜಗತ್ತು ಎನ್ನುವ ಪರಿಕಲ್ಪನಾತ್ಮಕ ಕೋಟೆಯನ್ನು ಭಗ್ನಗೊಳಿಸಿ ಕುಟುಂಬವನ್ನು ಸಾಮಾಜಿಕ ಘಟಕವಾಗಿಸಿತ್ತು. ಇದರಿಂದ ಪ್ರಕೃತಿ ಸಂಸ್ಕೃತಿ, ಖಾಸಗೀ ಸಾರ್ವಜನಿಕ, ವೈಯಕ್ತಿಕ ರಾಜಕೀಯ ಎನ್ನುವ ದ್ವಂದ ವರ್ಗೀಕರಣದ ಪರಿಕಲ್ಪನೆಯನ್ನು ವಿರಚಿಸುವುದು ಸಾಧ್ಯವಾಯಿತು. ಕುಟುಂಬ ಕೂಡ ಲೈಂಗಿಕ ರಾಜಕಾರಣದ ರೂಪವೇ ಆಗಿದೆ. ಪಿತೃಪ್ರಧಾನ ಕುಟುಂಬಗಳಲ್ಲಿ ತಂದೆಯೆ ಕುಟುಂಬದ ಮುಖ್ಯಸ್ಥ. ಮಹಿಳೆಯರ ಅಭಿಪ್ರಾಯಗಳಿಗೆ ಮಾನ್ಯತೆಯಿರಲಿಲ್ಲ. ಸ್ತ್ರೀ ಕೇವಲ ಅಡುಗೆ ಕೆಲಸ, ಮಕ್ಕಳ ಲಾಲನೆ-ಪಾಲನೆಗಳಿಗೆ ಸೀಮಿತವಾಗಿದ್ದಳು. ಗಂಡು ಕುಟುಂಬದ ಹೊರಗಡೆಯ ಕಾರ್ಯಗಳಲ್ಲಿ ತಲ್ಲೀನನ್ನಾಗಿದ್ದರೆ, ಅವನ ಕೃಷಿ ಪಶುಪಾಲನೆ ಮೊದಲಾದ ಕಾರ್ಯಗಳಲ್ಲಿ ಇವಳು ಸಹಾಯಕಳಾಗಿದ್ದಳು.

ಹೆಂಡತಿಯಾದವಳು ಗಂಡನ ಲೈಂಗಿಕ ಆಕರ್ಷಣೆಯನ್ನು ಕಾಯ್ದುಕೊಳ್ಳಬೇಕು. ಮಾನಸಿಕ ನೆಮ್ಮದಿಯನ್ನು ಕಾಪಾಡಬೇಕು. ಗಂಡನಿಗೆ ತಕ್ಕಂತೆ ಹೊಂದಿಕೊಂಡಾಗ ಮಾತ್ರ ಹೆಂಡತಿ ಪರಿಪೂರ್ಣ ವಾಗಲು ಸಾಧ್ಯ. ಹೆಂಡತಿ ಗಂಡ ಹೇಳಿದನ್ನು ಕೇಳಬೇಕೆಂಬ ಭಾವನೆ ಪಿತೃಪ್ರಧಾನ ವ್ಯವಸ್ಥೆ ಭಾವಿಸುತ್ತದೆ. ಹೆಂಡತಿ ಗಂಡನ ಒಲವನ್ನು ಕಾಯ್ದುಕೊಳ್ಳಬೇಕಾದರೆ ಬಹಳ ತೂಕ ಬದ್ಧವಾಗಿ ಗಂಡನೊಂದಿಗೆ ವರ್ತಿಸಬೇಕಾಗುತ್ತದೆ. ಕುಟುಂಬದೊಳಗಿನ ಸಮಸ್ಯೆಗಳನ್ನು ಆತನಿಗೆ ಹೇಳಕೂಡದು,

ಇದರಿಂದಾಗಿ ಆತನ ಮಾನಸಿಕ ನೆಮ್ಮದಿ ಹಾಳಾಗುತ್ತದೆ. ಕುಟುಂಬದ ಒಳಗಿನ ಹಾಗೂ ಹೊರಗಿನ ಜವಾಬ್ದಾರಿಯನ್ನು ನಿಭಾಯಿಸಬೇಕಾದ ಗಂಡನ ಮೇಲೆ ತೀವ್ರವಾದ ಮಾನಸಿಕ ಕೌಟುಂಬಿಕ ಹಾಗೂ ಸಾಮಾಜಿಕ ಒತ್ತಡಗಳಿರುತ್ತವೆ. ಸಿಟ್ಟು ಮಾಡಿಕೊಂಡರೂ ಶಾಂತಿಯುತವಾಗಿ ಪ್ರತಿಕ್ರಿಯಿಸುತ್ತಾ ಆತನಿಗೆ ಹಿತವಾಗುವಂತೆ ನಡೆದುಕೊಳ್ಳಬೇಕು. ಎಲ್ಲ ಕಡೆಯಿಂದ ಎದುರಾಗುವ ನೋವುಗಳನ್ನು, ಅಪಮಾನ ಗಳನ್ನು, ದುಃಖ ದುಮ್ಮಾನಗಳನ್ನು ತನ್ನೊಳಗೆ ನುಂಗಿಕೊಂಡು ನಗುತ್ತ ಗಂಡನನ್ನು ಉಪಚರಿಸಬೇಕು. ಇಲ್ಲದೆ ಹೋದರೆ 'ಮನೆಗೆ ಹೋದರೆ ಇದೇ ರಗಳೆ' ಎಂದು ಗಂಡನು ಹೆಂಡತಿಯಿಂದ, ಕುಟುಂಬ ದಿಂದ ವಿಮುಖನಾಗುತ್ತಾ ಹೋಗುವನು. ಆತನಿಗೆ ಆಕರ್ಷಿತವಾಗುವಂತೆ, ಸಂತೋಷವಾಗುವಂತೆ ಅಲಂಕರಿಸಿಕೊಳ್ಳಬೇಕು. ಗಂಡ ಬಯಸಿದಾಗ ಹಾಸಿಗೆ ಸುಖವನ್ನು ನೀಡಬೇಕು. ಲವಲವಿಕೆಯಿಂದ ನಡೆದುಕೊಳ್ಳುತ್ತ ಗಂಡನ ಭೋಗಾಸಕ್ತಿಗಳನ್ನು ಪೂರೈಸಬೇಕು. ಹೀಗಿದ್ದಾಗ ಗಂಡಸು ಅನ್ಯ ಸ್ತ್ರೀಯತ್ತ ದೃಷ್ಟಿ ಹಾಕುವುದಿಲ್ಲ. ಹೀಗೆ ಪುರುಷ ಪ್ರಧಾನ ಸಮಾಜವು ಗಂಡನ ವಿಷಯ ಲಂಪಟನತವನ್ನು ಹೆಂಡತಿಯ ನಡವಳಿಕೆಯೊಂದಿಗೆ ತಳಕು ಹಾಕುತ್ತದೆ. ಒಳ್ಳೆಯ ಹೆಂಡತಿಯಾಗಬೇಕಾದರೆ ತನ್ನ ಬದುಕಿನ ಸಂಪೂರ್ಣ ಅವಧಿಯನ್ನು ಗಂಡನ ಸೇವೆಗೆ ಮೀಸಲಿರಿಸಬೇಕು. ಸಮಾಜದ ಈ ಅಪೇಕ್ಷೆಯು ಹೆಣ್ಣಿನ ಪೂರ್ವ ಭವಿಷ್ಯವನ್ನೇ ನಿರಾಕರಿಸುತ್ತದೆ. ತನ್ನೊಳಗಿನ ಭಾವನೆಗಳನ್ನು, ಬಯಕೆಗಳನ್ನು ಹಾಗೂ ಆಸಕ್ತಿಗಳನ್ನು ಅದಮಿಟ್ಟು, ಗಂಡನು ತನ್ನ ಮೇಲೆ ಎಸಗುವ ದೌರ್ಜನ್ಯ ಗಳನ್ನು, ಅಪಮಾನಗಳನ್ನು ನುಂಗಿಕೊಳ್ಳುತ್ತಾಳೆ. ಆತನ ನಿಲುವುಗಳಿಗೆ ಅನುಸರಿಸಿ ನಡೆಯಬೇಕಾದ ಹೆಂಡತಿಯ ಪಾತ್ರವು ಗುಲಾಮ ಸ್ಥಿತಿಯಲ್ಲಿರುವುದನ್ನೇ ಹೇಳುತ್ತದೆ.

"ಹೆಂಡತಿಯು ತನ್ನ ಕತೃತ್ವದ ಮೂಲಕ ಕುಟುಂಬದಲ್ಲಿ, ಮಾನ್ಯತೆಯನ್ನು ಪಡೆದಿರುವಳೆ? ಅಥವಾ ಅವಳ ಗೌರವಕ್ಕೂ ಆಕೆಯ ಗಂಡನ ಸ್ಥಾನಮಾನಗಳಿಗೂ ಸಂಬಂಧ ಕಲ್ಪಿಸಲಾಗಿದೆಯಾ? ಎನ್ನುವುದನ್ನು ಕೆಳಗಿನ ತ್ರಿಪದಿಯ ಮೂಲಕ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ತಿಂದೋಡಿ ನಿನಗಂಡ ತಿಂದೇನು ಮಾಡಂದ
ತಿಂದೇಳು ಮನೆಯ ತಿರುಗೆಂದ | ಉಟ್ಟಸೀರಿ
ಉಂಗಟಗ ಹಾಕಿ ಹರಿಯಂದ ||

ಕಟ್ಟಿಕೊಂಡ ಗಂಡನು ಬುದ್ಧಿಹೀನ ಮತ್ತು ಸಂಪದನಾ ರಹಿತನಾಗಿದ್ದರೆ ಅವನ ಹೆಂಡತಿಯು ಕುಟುಂಬದವರ, ಸಮಾಜದವರ ತಿರಸ್ಕಾರಕ್ಕೆ ಒಳಗಾಗಬೇಕಾಗುತ್ತದೆ. "ಹೆಂಡತಿ ಹೆಗ್ಗಡತಿಯಾದರೆ ಗಂಡ ಮೂಳೆನಾಯಿಗಿಂತ ಕಡೆ" ಎನ್ನುವ ಗಾದೆ ಮಾತು ಹೆಣ್ಣನ್ನು ನಿರಾಕರಿಸುತ್ತದೆ. ಕುಟುಂಬ

ದಲ್ಲಾಗಲಿ, ಸಮಾಜದಲ್ಲಾಗಲಿ ಹೆಂಡತಿಯು ಗಂಡನ ಹೆಸರಿನಲ್ಲಿ ಗುರುತಿಸಿಕೊಳ್ಳುತ್ತಾಳೆ ವಿನಃ, ವ್ಯಕ್ತಿಗತ ಸ್ವತಂತ್ರ ನೆಲೆಯಲ್ಲಿ ಅಲ್ಲ. ಹೆಂಡತಿ ತನ್ನ ಕರ್ತೃತ್ವದ ಮೂಲಕ ಕುಟುಂಬದಲ್ಲಿ ಸಮಾಜದಲ್ಲಿ ಗುರುತಿಸಿಕೊಳ್ಳುವು ದೆಂದರೆ ಆತನ ಸ್ಥಾನವನ್ನು ಮತ್ತು ಅಧಿಕಾರವನ್ನು ಕಸಿದು ಕೊಳ್ಳುವುದೇ ಆಗಿದೆ. ಹೆಂಡತಿಯಾದವಳ ಕ್ರಿಯಾಶೀಲತೆಯು ಅವಳಿಗೆ ಮಾನ-ಸನ್ಮಾನಗಳನ್ನು ತಂದು ಕೊಡುತ್ತದೆ. ಗಂಡನು ಕುಟುಂಬದಲ್ಲಿ, ಸಮಾಜದಲ್ಲಿ ಎಷ್ಟು ಪ್ರಬಲನಾಗಿರುವನು ಎನ್ನುವುದರ ಮೇಲೆ ಅವಳಿಗೆ ಮಾನಮರ್ಯಾದೆಗಳು ನಿರ್ಧಾರಿತವಾಗುತ್ತವೆ. ಹೆಂಡತಿ ತೆಗೆದುಕೊಳ್ಳುವ ಆಹಾರಕ್ಕೂ, ಮಾಡಿಕೊಳ್ಳುವ ಅಲಂಕಾರಕ್ಕೂ ಪಿತೃಪ್ರಧಾನ ವ್ಯವಸ್ಥೆಯೂ ಯಾವ ನೀತಿ ನಿಯಮಗಳನ್ನು ಸೃಷ್ಟಿಸಿದೆ ಎನ್ನುವುದು ತಿಳಿದುಕೊಳ್ಳಬೇಕಾಗಿದೆ. ಈ ಕೆಳಗಿನ ತ್ರಿಪದಿಗಳ ಮೂಲಕ ಆಹಾರ ಮತ್ತು ಅಲಂಕಾರದ ವಿಷಯದಲ್ಲಿ ಹೆಂಡತಿ ಹೇಗೆ ಪ್ರತಿನಿಧಿಕರಿಲ್ಪಟ್ಟಿರುವಳು ಎನ್ನುವುದನ್ನು ವಿಶ್ಲೇಷಿಸಲಾಗಿದೆ.

ಯಾಲಕ್ಕಿ ಕಾಯ್ ಸುಲಿದು ಯಾವಡಗಿ ಮಾಡಲಿ
ಊರಿಗ್ಹೋದಾರ ರಾಯರು | ಬಾರದೆ
ಯ್ಯಾವಡಗಿ ಮಾಡಿ ಫಲವೇನು ||

ವಾರೀಗಿ ರಾಯರು ಊರೀಗಿ ಹೋದರೆ
ಸೇರ ಬಂಗಾರ ತಗೆದ್ಹಂಗ | ಮಲ್ಲಿಗಿ
ಮುಡಿದು ಅಂಗಳಕ ಒಗೆದ್ಹಂಗ ||

ಮಹಿಳೆ ಹೇಳಿದ ಈ ಮೇಲಿನ ಹಾಡುಗಳನ್ನು ಮಹಿಳಾ ಅಪೇಕ್ಷೆಗಳು ಎಂದು ಹೇಳಲಾಗುವುದಿಲ್ಲ. ಗಂಡನಿಲ್ಲದ ವೇಳೆಯಲ್ಲಿ ಹೆಂಡತಿಯಾದವಳು ಒಳ್ಳೆಯ ಅಡಿಗೆ ಮಾಡಿ ಉಣ್ಣಕೂಡದು ಎನ್ನುವುದು ಸಮಾಜದ ಸಾಮಾನ್ಯ ನಂಬಿಕೆ. ಪುರುಷನ ದುಡಿಮೆಯು ಉತ್ಪಾದನಾ ನೆಲೆಯಲ್ಲಿ ಗುರುತಿಸಲ್ಪಟ್ಟಿದ್ದರಿಂದ, ಅದು ಶ್ರಮದ ಕೆಲಸವಾಗಿ ಪರಿಗಣಿಸಲ್ಪಟ್ಟಿದೆ. ಮಹಿಳೆ ಮಾಡುವ ಕೆಲಸಕ್ಕೆ ಅನುತ್ಪಾದಕ ನೆಲೆಯಲ್ಲಿ ಗುರುತಿಸಲ್ಪಟ್ಟಿದ್ದರಿಂದ ಸುಲಭದ ಕೆಲಸವಾಗಿ ನಿರ್ವಂಚಿತವಾಗಿದೆ. ಮಹಿಳೆಯರು ನಿಭಾಯಿಸುವ ಕೆಲಸವು ಸರಳ ಹಾಗೂ ಸುಲಭವಾಗಿದ್ದರಿಂದ, ಅದಕ್ಕೆ ಬೌದ್ಧಿಕ ಹಾಗೂ ದೈಹಿಕ ಶ್ರಮದ ಅಗತ್ಯವೇನೂ ಇಲ್ಲ ಎನ್ನುವ ಹುಸಿ ಚಿಂತನೆಗೆ ಪುರುಷ ಪ್ರಧಾನ ಸಮಾಜವು ಭಾರಿ ಮಾನ್ಯತೆಯನ್ನು ನೀಡಿದೆ. ಹೆಣ್ಣು ಮಕ್ಕಳು ಹೊತ್ತಿದ್ದು ತಿನಬೇಕು. "ಹೊತ್ತಿದ್ದು ತಿಂದರೆ ಹೊತ್ತು ಬಂದ ಹಾಗೆ ನಡೆಯುತ್ತಾರೆ" ಎಂದು ಅಜ್ಜಿಯವರು ಹೇಳುತ್ತಿದ್ದುದು ನೆನಪು"(ಎಚ್.ಎಸ್. ಶ್ರೀಮತಿ;೨೦೦೬:೬೦೫). ಮಾವಂದಿರು ಉಂಡು ಹೋದಬಳಿಕ, ಉಳಿದ ಆಹಾರ

ವನ್ನು ಅಜ್ಜಿ ಮತ್ತು ಅತ್ತೆಯವರು ಊಟ ಮಾಡಿದ್ದನ್ನು ನೋಡಿದ್ದೇವೆ. ಸೀದು ಹೋದ, ಕರಕಲಾದ ಆಹಾರವನ್ನು ಅವರು ತೆಗೆದುಕೊಂಡದ್ದನ್ನು ನೋಡುತ್ತಿದ್ದೇವೆ. ಆಹಾರ ಹಂಚಿಕೆಯಲ್ಲಿ ಲಿಂಗ ಅಸಮಾನತೆಯಿದೆ. ಗಂಡನಿದ್ದ ವೇಳೆಯಲ್ಲಿಯೇ ಆತನು ಬಿಟ್ಟಿರುವ ಎಂಜಲನ್ನು, ಉಳಿದ ಬೀಕಲು ಪದಾರ್ಥವನ್ನು ಹೆಂಡತಿಯು, ಆತನ ಗೈರು ಹಾಜರಿಯಲ್ಲಿ ಎಂಥಾ ಆಹಾರವನ್ನು ಸೇವಿಸಿಯಾರು ಗಂಡನಿಲ್ಲದ ವೇಳೆಯಲ್ಲಿ ಹೆಂಡತಿಯು ಉತ್ತಮ ಹಾಗೂ ವಿಶೇಷ ಆಹಾರ ತೆಗೆದುಕೊಳ್ಳುವುದನ್ನು ಭಾವನಾತ್ಮಕವಾಗಿ ಅವಳೇ ಸ್ವತಃ ಒಪ್ಪಿಕೊಳ್ಳುವ ಸ್ಥಿತಿಯನ್ನು ಪುರುಷಶಾಹಿ ವ್ಯವಸ್ಥೆ ತಂದೊಡ್ಡಿದೆ. ಅಡುಗೆಯ ಹಾಗೆ ಅಂದವಾದ ಉಡುಗೆ-ತೊಡಗೆಗಳನ್ನು ಕೂಡ ಗಂಡನಿಲ್ಲದ ವೇಳೆಯಲ್ಲಿ ಧರಿಸಲು ಇಷ್ಟಪಡುವುದಿಲ್ಲ. ಪುರುಷ ಪ್ರಧಾನ ಸಮಾಜವು ಹೆಣ್ಣು ಮಾಡಿಕೊಳ್ಳುವ ಅಲಂಕಾರಕ್ಕೂ ಗಂಡನ ಸಂತೋಷಕ್ಕೂ ಸಂಬಂಧ ಕಲ್ಪಿಸಿದೆ. ಅವನಿಲ್ಲದ ವೇಳೆಯಲ್ಲಿ ಮಾಡಿಕೊಳ್ಳುವ ಅಲಂಕಾರವು ವ್ಯರ್ಥವಾಗಿಯೇ ಪರಿಗಣಿಸಲ್ಪಟ್ಟಿದೆ. ಗಂಡನ ಚಿತ್ತಾಕರ್ಷಣೆಯನ್ನು ಸೆಳೆದುಕೊಂಡು ಅವನನ್ನು ಅನ್ಯ ಸ್ತ್ರೀಯತ್ತ ವಾಲದಂತೆ ಅವಳ ಅಲಂಕಾರವು ನೋಡಿಕೊಳ್ಳುತ್ತದೆ. ಗಂಡನ ಲೌಕಿಕ ಆಸಕ್ತಿಗಳನ್ನು ಪೋಷಿಸುವ ಉದ್ದೇಶ ಹೆಣ್ಣಿನ ಅಲಂಕಾರಿಕ ಕ್ರಿಯೆಯಲ್ಲಿದೆ. ಹೆಣ್ಣಿನ ಅಪೇಕ್ಷೆಗಳಾಗಿಯೆ ನಿರೂಪಿಸಲ್ಪಡುವ ಈ ಬಗೆಯ ಸಂಗತಿಗಳು, ವಾಸ್ತವದಲ್ಲಿ ಪುರುಷ ಪ್ರಧಾನ ಸಮಾಜವು ಹೇರಿದ ಒತ್ತಡಗಳಾಗಿವೆ.

ಅತ್ತೆ ಮನೆಯು ನೇತ್ಯಾತ್ಮಕ ನೆಲೆಯಲ್ಲಿ ಗುರುತಿಸಿಕೊಂಡಿದೆ. ಯಾವುದನ್ನು 'ಅತ್ತೆಮನೆ' ಎಂದು ಕರೆಯಲಾಗುತ್ತದೆಯೋ, ವಾಸ್ತವದಲ್ಲಿ ಅವಳು ಆ ಮನಗೆ ಹಕ್ಕುದಾರಳು ಆಗಿರುವುದೇ ಇಲ್ಲ. ಅಂದರೆ ಮನೆಯಲ್ಲಿರುವ ಸಂಪತ್ತು ಮತ್ತು ಮನೆತನಕ್ಕೆ ಸಂಬಂಧಿಸಿದ ಆಸ್ತಿಗೆ ಅವಳು ಒಡತಿಯಾಗಿರುವುದಿಲ್ಲ. ಅವುಗಳು ಆ ಮನೆತನದ ಪುರುಷರ ಒಡೆತನದ ನಿಯಂತ್ರಣದಲ್ಲಿ ಇರುತ್ತಾಳೆ. ಪುರುಷ ಪ್ರಭುತ್ವದಲ್ಲಿರುವ ಸ್ಥಿರಾಸ್ತಿಯನ್ನು ಕಾಪಾಡುವ ಮೇಲ್ವಿಚಾರಕಿಯ ಸ್ವರೂಪದಲ್ಲಿ ಅತ್ತೆಯಾದವಳು ಪ್ರತಿನಿಧೀಕರಣ ಗೊಂಡಿರುವಳು. ಪುರುಷ ಪ್ರಧಾನ ವ್ಯವಸ್ಥೆಯು ಕಟ್ಟಿಕೊಟ್ಟ ಮೌಲ್ಯಗಳನ್ನು ನಿಷ್ಠೆಯಿಂದ ಸಂರಕ್ಷಿಸುತ್ತಾ, ಅವುಗಳನ್ನು ಯಥಾಸ್ಥಿತಿಯಲ್ಲಿಡಲು ಅತ್ತೆಯಾದವಳು ಪ್ರಯತ್ನಿಸುತ್ತಿರುತ್ತಾಳೆ. ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯದ ಸ್ಥಳವನ್ನು 'ಅತ್ತೆಮನೆ' ಎಂದು ಗುರುತಿಸಲಾಗಿದೆ. 'ಅತ್ತೆಮನೆ' ಎನ್ನುವುದು ಮೇಲ್ನೋಟಕ್ಕೆ ಸ್ತ್ರೀವಾಚಕ ಪದವಾಗಿ ಕಂಡುಬಂದರೂ ಅದು ಪುರುಷ ನಿಷ್ಠ ವ್ಯವಸ್ಥೆಯನ್ನು ಸಮರ್ಥಿಸುವ ಪದವಾಗಿದೆ. "ಪಿತೃಸ್ಥಾನೀಯ ವ್ಯವಸ್ಥೆಯನ್ನು ಅಂದರೆ ಗಂಡನ ಮನೆಗೆ ವಧು ಹೋಗುವ ವ್ಯವಸ್ಥೆಯನ್ನು ಈ ಸಮಾಜದಲ್ಲಿ ರೂಢಿಸಲಾಗಿದೆ. ಆದರೂ ಹಿಂಸೆಯ ವಿಷಯ ಬಂದಾಗ ಅದು 'ಗಂಡನ ಮನೆ' ಅಥವಾ 'ಮಾವನ ಮನೆ'

ಆಗದೆ ಸಾಮಾನ್ಯವಾಗಿ ಅತ್ತೆ ಮನೆಯಾಗುವುದು ಕುತೂಹಲಕಾರಿಯಾಗಿದೆ. ಆ ಮನೆಯಲ್ಲಿ ಸೊಸೆಯಾಗಿ ಹೋಗುವವಳು ದೃಷ್ಟಿಯಿಂದ ಅತ್ತೆಯ ಸ್ಥಾನದಲ್ಲಿರುವ ವ್ಯಕ್ತಿ ಬಹುಮುಖ್ಯ ಹಾಗೂ ನಿರ್ಣಾಯಕ ಪಾತ್ರವನ್ನು ಸೊಸೆಯ ಜೀವನದಲ್ಲಿ ಆಕೆ ವಹಿಸುತ್ತಾಳೆ ಎಂಬುದೂ ಕೂಡ ಈ ಅತ್ತೆಮನೆ ಎಂಬ ಪ್ರಯೋಗದಲ್ಲಿ ಸೂಚಿತವಾಗಿದೆ.

> " 'ಅತ್ತೆಮನಿ' ಎಷ್ಟೇ ಕಷ್ಟವಾದರೂ ಹೆಂಡತಿಯಾದವಳು ತವರು ಮನೆಗೆ ಬಂದರೆ ಹೆಣ್ಣಿಗೆ ಗಂಡ ಬಿಟ್ಟವಳು ಎನ್ನುತ್ತದೆ ವಿನಃ ಗಂಡನಿಗೆ ಯಾವ ಮಾತು ಹೇಳುವುದಿಲ್ಲ. ಇಗ್ಗರ ಭಾಳ ಇರಲಾರೆ" ಎನಿಸಿದರೂ ಅವಳು ಅದನ್ನು ತೋರೆದರೆ ಅತ್ತೆ-ಸೊಸೆಯರ ಸಂಬಂಧ ಅತ್ಯಂತ ಸಂಕೀರ್ಣವಾದದ್ದು, ಅದರ ಘರ್ಷಣೇ ಅತ್ಯಂತ ಪುರಾತನವಾದದ್ದು, ಇತಿಹಾಸದುದ್ದಕ್ಕೂ ಕಡಮೆ ಗೊಳಿಸುತ್ತಾ ಹತ್ತಿಕ್ಕಲ್ಪಡುತ್ತಾ ಬಂದ ಹೆಣ್ಣಿನ ಬದುಕು ವಿಕೃತಗೊಂಡ ಅತ್ತೆಯರ ಬದುಕಿನಲ್ಲಿ ಪ್ರತಿಫಲಿತವಾದ ಹಾಗೆ ಮತ್ತೆಲ್ಲಿಯೂ ಆಗಿಲ್ಲವೋ ಏನೋ ಬೇರೆವ ಅಭಿವ್ಯಕ್ತಿ, ಹಕ್ಕಿನ ಕ್ಷೇತ್ರವಾಗಲಿ, ಆಸಕ್ತಿಗಳ ರೂಢಿಯಾಗಲಿ, ಕಾರ್ಯಕ್ಷೇತ್ರವಾಗಲಿ ಇಲ್ಲದೇ ಮದುವೆ ಮಕ್ಕಳಿಗೆ ಅಂಟಿಕೊಂಡ ಬದುಕು ಗಂಡುಮಕ್ಕಳ ಬದುಕಿನೊಂದಿಗೆ ಅನಾರೋಗ್ಯಕರವಾಗಿ, ಮಿತಿಮೀರಿ ಹತ್ತಿ ಕೊಂಡಿದ್ದರ ಫಲವನ್ನು ಘರ್ಷಣೆಯಲ್ಲಿ ಕಾಣಬಹುದು. ಈ ಅದುಮುವಿಕೆ, ತುಳಿತದ ಫಲ ಮತ್ತೊಂದು ಹೆಣ್ಣನ್ನೇ ಬಲಿಯಾಗಿಸಿಕೊಳ್ಳುವುದು ದುರಂತ ವಿಷಯವಾಗಿದೆ. (ವಿಜಯಾದಬ್ಬೆ, ೧೯೯೭, ೧೭೨) ಕುಟುಂಬಗಳು ಹೆಣ್ಣಿಗೆ, ಗಂಡನ ಸಂಬಂಧ ಹಾಗೂ ಸಂಪರ್ಕಕ್ಕಿಂತಲೂ ಗಂಡನ ಮೊದಲ ರಕ್ತ ಸಂಬಂಧಿಗಳ ಸಂಪರ್ಕ ಮತ್ತು ಸಂಬಂಧಗಳು ಪ್ರಧಾನವಾಗಿರಬೇಕೆಂದು ಒತಾಯಿಸುತ್ತವೆ" (ಎಚ್.ಎಸ್. ಶ್ರೀಮತಿ;೨೦೦೬:೬೯).

ಗಂಡನಿಗೆ ವಯಸ್ಸಿಗೆ ಬಂದ ಅಣ್ಣ-ತಂಗಿಯರಿರಬಾರದು, ಇಲ್ಲವೆ ತಾರುಣ್ಯಕ್ಕೆ ಕಾಲಿಟ್ಟ ಅಣ್ಣ-ತಮ್ಮಂದಿರ ಮಕ್ಕಳಿರಬಹುದು, ಇಂಥವರೆದುರಿಗೆ ಹೊಸದಾಗಿ ದಾಂಪತ್ಯಕ್ಕೆ ಕಾಲಿಟ್ಟ ಗಂಡ-ಹೆಂಡತಿಯರು ಸರಿಸಮವಾಗಿರುವಂತಿಲ್ಲ. ಗಂಡನು ತನ್ನ ತಂದೆ-ತಾಯಿ, ಅಕ್ಕ-ತಂಗಿಯರು ಹಾಗೂ ಅಣ್ಣ-ತಮ್ಮಂದಿರೆದುರು ಹೆಂಡತಿಯ ಜೊತೆ ಧೀರ್ಘ ಅವಧಿಯವರೆಗೆ ಕಾಲ ಕಳೆಯುವುದನ್ನು ಕುಟುಂಬದವರಿಗೆ ಅಗೌರವ ತೋರಿದ ನೆಲೆಯಲ್ಲಿಯೇ ಅರ್ಥೈಸಲ್ಪಟ್ಟಿದೆ. "ಅತ್ತಿಯ ಮನಿಯಾಗ ಮತ್ತಾಗಿ ಇರಬೇಕು, ಹೊತ್ತಾಗಿ ನೀಡದರೆ ಉಣಬೇಕು".ಅತ್ತೆ ಮಾವರಿಗಂಜಿ ಮತ್ತೆ ನಾದುನಿಯರಿಗಂಜಿ ನಡೆಯಬೇಕು", "ಗಂಡನ ಪಾದ ದೇವರೆಂದೆರಗಿಕೊ" ಎನ್ನುವ ಸಾಂಪ್ರದಾಯಿಕ ಮಾನಸಿಕ ತರಬೇತಿಗಳನ್ನು ತವರಿನಲ್ಲಿಯೇ ಪಡೆದುಕೊಂಡು ಬಂದ ಹೆಣ್ಣು ಗಂಡಿನ ಮನೆಯಲ್ಲಿ ಪ್ರಯೋಗಕ್ಕೆ ಒಳಪಡುತ್ತಾಳೆ. "ಅತ್ತೆ ಕೈಯಾಗ ಅರಿಯಬೇಕು, ನಾದಿನಿ ಕೈಯಾಗ ನುರಿಬೇಕು"

ಎನ್ನುವ ಗಾದೆ ಮಾತು, ಮಹಿಳೆ ಮಹಿಳೆಯರಿಂದಲೇ ಅನುಭವಿಸುವ ಕಷ್ಟಗಳನ್ನು ಬಲಪಡಿಸುತ್ತದೆ. ಸೊಸೆಯಾದವಳು ಅನುಭವಿಸುವ ಹಿಂಸೆಗಳಿಗೆ ನೇರವಾಗಿ ಅತ್ತೆ-ನಾದಿನಿಯರು ಕಾರಣರು ಎನ್ನುವುದು ಮೇಲ್ನೋಟಕ್ಕೆ ಕಂಡುಬಂದರೂ ಆಳದಲ್ಲಿ ಅದು ಬೇರೆಯದೇ ಸತ್ಯಗಳನ್ನು ಮುಚ್ಚಿಟ್ಟುಕೊಂಡಿರುತ್ತದೆ. ಗಂಡನ ಮನೆಯು ಪಿತೃಪ್ರಧಾನ ವ್ಯವಸ್ಥೆಗೆ ಹೆಣ್ಣನ್ನು ಪಳಗಿಸುವ ಗರಡಿ ಮನೆಯಾಗಿದೆ" (ಎಚ್.ಎಸ್. ಶ್ರೀಮತಿ;೨೦೦೬:೬೨೪).

ಆರ್ಥಿಕ ಅಸುರಕ್ಷತೆಯಲ್ಲಿ ಹಾಯ್ದಾಡುವ ಅತ್ತೆಗಾಗಲಿ, ಸೊಸೆಗಾಗಲಿ ಕುಟುಂಬದ ಯಾವ ಆಸ್ತಿಯ ಮೇಲೂ ಅವರ ಹಕ್ಕಿರುವುದಿಲ್ಲ. ಆಸ್ತಿ ಹಕ್ಕಿನ ಒಡೆತನವಿಲ್ಲದ ಹಾಗೂ ಆರ್ಥಿಕ ಉತ್ಪಾದನೆಯಿಲ್ಲದ ಅತ್ತೆ-ಸೊಸೆಯರಿಗೆ ಕುಟುಂಬ ಸಂಬಂಧದಲ್ಲಿ ಯಾವ ಅಧಿಕಾರವಿಲ್ಲದಾದರೂ ಪರೋಕ್ಷವಾಗಿ ಅದನ್ನು ಚಲಾಯಿಸಲು ಇಷ್ಟಪಡುತ್ತಾರೆ. ಅತ್ತೆಸೊಸೆಯರಲ್ಲಿಯ ಈ ಧೋರಣೆಗಳು ಅವರಲ್ಲಿ ಸ್ಪರ್ಧೆಯನ್ನು ಬೆಳೆಸುತ್ತವೆ. ಸೊಸೆಯನ್ನು ಅನ್ಯವಾಗಿಯೇ ಪರಿಗಣಿಸುವ ಅತ್ತೆಯೂ ಸೊಸೆಯಾಗಿದ್ದಾಗ ತಾನು ಅನುಭವಿಸಿದ ಸಂಕಷ್ಟಗಳನ್ನು ಹಾಗೂ ಹಿಂಸೆಗಳನ್ನು ತನ್ನ ಸೊಸೆಗೆ ವರ್ಗಾಯಿಸುತ್ತಾಳೆ. ಅತ್ತೆ ಸೇಡಿನಲ್ಲಿ ಪುರುಷ ಶಾಹಿ ಪರಂಪರೆಯ ಸಾತತ್ವವನ್ನು ರಕ್ಷಿಸುವ ಗುಣವೇ ಪ್ರಧಾನವಾಗಿ ಕಂಡುಬರುತ್ತದೆ. ಹೆಣ್ಣಿನ ಕೆಲಸಗಳೆಂದೇ ಗುರುತಿಸಲ್ಪಟ್ಟ ಮನೆಗೆಲಸಗಳನ್ನು, ಹೊಲಗೆಲಸಗಳನ್ನು ತನ್ನ ಹೆಣ್ಣು ಮಕ್ಕಳಿಂದ ಹಾಗೂ ಸೊಸೆಯಂದಿರಿಂದ ಮಾಡಿಸುವುದನ್ನು ಮತ್ತು ಪಿತೃಪ್ರಧಾನ ವ್ಯವಸ್ಥೆಗೆ ವಿಧೇಯವಾಗಿರುವಂತೆ ತರಬೇತಿ ನೀಡುವುದನ್ನು ಅತ್ತೆಯಾದವಳು, ತಾಯಿ ಯಾದವಳು ಮಾಡುತ್ತಿರುತ್ತಾರೆ. ಪಿತೃಪ್ರಧಾನ ಮೌಲ್ಯಗಳು ಹೆಣ್ಣಿಗೆ ಸೃಷ್ಟಿಸಿದ ಆರ್ಥಿಕ ಅಭದ್ರತೆ ಹಾಗೂ ಸಾಂಸ್ಕೃತಿಕ ಕೀಳರಿಮೆಗಳೆ ಪ್ರಧಾನ ಕಾರಣಗಳು. ವಿವಾಹದ ಬಳಿಕವೂ ಗಂಡು ಸ್ವ-ಕುಟುಂಬದಲ್ಲಿ ಉಳಿಯುತ್ತಾನೆ. ಆರ್ಥಿಕ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಗಂಡು ಸ್ವ-ಕುಟುಂಬಗಳಲ್ಲಿಯೇ ಇರುವುದರಿಂದ ಅವನು ತನ್ನ ಹೆಂಡತಿಯಂತೆ ಸಮಸ್ಯೆಗಳನ್ನು ಎದುರಿಸಬೇಕಾಗಿ ಬರುವುದಿಲ್ಲ. ಗಂಡನ ಮನೆಯವರಿಗೆ ಸೊಸೆಯು ಅಪರಿಚಿತಳಾಗಿರುವಂತೆ ಸೊಸೆಗೆ ಗಂಡ ಮತ್ತು ಆತನ ಕುಟುಂಬದವರು ಅಪರಿಚಿತರಾಗಿರುತ್ತಾರೆ. ಹೀಗಾಗಿ ಒಬ್ಬರನ್ನೊಬ್ಬರು ಪರಸ್ಪರ ಸಂಶಯಿಸುವುದು, ವಿಶ್ವಾಸದಿಂದ ನೋಡುವುದು ಪ್ರಾರಂಭವಾಗುತ್ತವೆ. ಇದು ಅತ್ತೆ-ಸೊಸೆಯರು, ಅತ್ತಿಗೆ-ನಾದಿನಿಯರ ಮನಸ್ತಾಪಕ್ಕೆ ಕಾರಣವಾಗುತ್ತದೆ. ಆವಾಗ ಒಬ್ಬರಿಗೊಬ್ಬರು ದೋಷಿಸಲು ಪ್ರಾರಂಭಿಸುತ್ತಾರೆ. ಪಿತೃಪ್ರಧಾನ ಸಮಾಜವು ಹೆಣ್ಣನ್ನು ಗಂಡಿನ ಪ್ರತಿಸ್ಪರ್ಧಿಯಾಗಿ ಪರಿಗಣಿಸುವುದಿಲ್ಲ. ಗಂಡು ಶ್ರೇಷ್ಠವಾಗಿದ್ದುದರಿಂದ ಹೆಣ್ಣು ಕನಿಷ್ಠವಾಗಿದ್ದುದರಿಂದ ಇವರಿಬ್ಬರ ಮಧ್ಯೆ ಪರಸ್ಪರ ಸ್ಪರ್ಧೆ ಏರ್ಪಡುವುದು ಹೇಗೆ ಸಾಧ್ಯ? ಕುಟುಂಬದಲ್ಲಿ ಯಜಮಾನನು ಬಹಳ ಪ್ರಬಲನಾಗಿರುತ್ತಾನೆ.

ಕುಟುಂಬದ ಆಗು-ಹೋಗುಗಳ ಕುರಿತು ಅಂತಿಮ ತೀರ್ಮಾನ ತೆಗೆದುಕೊಳ್ಳುವವನು ಅವನೇ ಆಗಿರುತ್ತಾನೆ. "ತವರಿನ ಮೇಲಿನ ಹಕ್ಕನ್ನು ಕಳೆದುಕೊಂಡು ಗಂಡನ ಮನೆಯಲ್ಲಿ ಅತಂತ್ರವಾಗಿ ಹಾಗೂ ಅತ್ಯಂತ ಕುಬ್ಜವಾಗಿ ಬದುಕುತ್ತಿರುವ ಚಿಕ್ಕವಯಸ್ಸಿನ ಸೊಸೆಯನ್ನು, ಕೌಟುಂಬಿಕ ಅಧಿಕಾರದ ಬೃಹತ್ ಸ್ವರೂಪಿಯಾಗಿ ಗುರುತಿಸಲ್ಪಡುವ ಯಜಮಾನನು ಹೇಗೆ ಪ್ರತಿಸ್ಪರ್ಧಿಯಾಗುವನು? ಇಂತಹ ಅಸಾಧ್ಯವೆನಿಸಿದ ವಸ್ತು ವಿಷಯಕ್ಕಾಗಿ ತಡಕಾಡುವುದು ಮೂರ್ಖತನವಾಗುತ್ತದೆ. ಮತ್ತೊಂದು ಗಮನಿಸಬೇಕಾದ ಸಂಗತಿಯೆಂದರೆ ಅತ್ತೆಯಾಗಲಿ, ಸೊಸೆಯಾಗಲಿ ಯಾವುದನ್ನು ಅಧಿಕಾರ, ಯಜಮಾನಿಕೆ ಎಂದು ಪರಿಭಾವಿಸಿಕೊಂಡಿರುತ್ತಾರೋ, ಮೂಲಭೂತವಾಗಿ ಅದು ಪುರುಷಧಿಕಾರ ನಿರ್ವಚಿಸಿದ ಅಧಿಕಾರದ ಯಜಮಾನಿಕೆಯಾಗಿರುವುದಿಲ್ಲ. ಇವರಿಬ್ಬರೂ ಯಜಮಾನಿಕೆ ಎಂದು ಭಾವಿಸಿಕೊಂಡಿರುವುದು Super wiser ಕೆಲಸವಾಗಿರುತ್ತದೆ. Super wiser ಮೇಲೆ ನಿಗಾ ಇಡಲು, ಮಾರ್ಗದರ್ಶನ ಮಾಡಲು ಹಾಗೂ ಅವರ ಕೆಲಸಗಳನ್ನು ನಿಯಂತ್ರಣದಲ್ಲಿಡಲು ಕುಟುಂಬದ ಯಜಮಾನನಿರುತ್ತಾನೆ"(ಎಚ್.ಎಸ್. ಶ್ರೀಮತಿ;೨೦೦೬:೬೩೦). ವಿವಾಹವಾದೊಡನೆ "ಅತ್ತೆಯ ಮನೆಯಲ್ಲಿ ತೊತ್ತಾಗಿ" ದುಡಿಯಲು ಹೆಣ್ಣು ಸಿದ್ಧವಾಗಬೇಕಾಗುತ್ತದೆ. ವಿವಾಹವಾದೊಡನೆ ಪತಿಯ ಹೆಸರನ್ನು, ಮನೆತನದ ಹೆಸರನ್ನು ಅಂಟಿಸಿಕೊಂಡು, ತವರಿನ 'ಹಂಗು' ತೊರೆಯುತ್ತಾಳೆ. ಹುಡುಗಿಯ ಹೆಸರನ್ನೂ ಬದಲಿಸಿ, ಅವಳ ವಿವಾಹ ಪೂರ್ವದ ಇಡೀ ಅಸ್ತಿತ್ವವನ್ನೇ ಅಳಿಸಿ ಹಾಕುವ ಸಂಪ್ರದಾಯ ಇನ್ನೂ ಕೆಲವೆಡೆ ರೂಢಿಯಲ್ಲಿದೆ.

ವಿವಾಹವಾದನಂತರ ಸಮಸ್ಯೆಗಳು ಇನ್ನಷ್ಟು ಸಂಕೀರ್ಣ ಸ್ವರೂಪದವು. ಮನೆಯನ್ನು ತೂಗಿಸಿ ಕೊಂಡು ಹೋಗುವ ಸಂಪೂರ್ಣ ಜವಾಬ್ದಾರಿ ಮಹಿಳೆಯದೆನ್ನುವ ಸಾಂಪ್ರದಾಯಿಕ ಮನೋಭಾವದಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಆಕೆ ಹೊರಗಿನ ದುಡಿಮೆಗೆ ಹೋಗುವವಳಾಗಿದ್ದರೆ ಇಬ್ಬಗೆಯ ಕೆಲಸವನ್ನು ನಿರ್ವಹಿಸಬೇಕಾಗುತ್ತದೆ. ಅವಳು ಸುಶಿಕ್ಷಿತಳಾದ ಕಾರಣ ಮಕ್ಕಳ ಪಾಲನೆಯೊಂದಿಗೆ ಅವಳ ಶಿಕ್ಷಣದ ಜವಾಬ್ದಾರಿ ಅವಳ ಹೆಗಲಿಗಿದೆ. 'ಆಧುನಿಕ ಮಹಿಳೆ' ಆಗಿರುವುದರಿಂದ ಶಾಲೆಗೆ ಮಕ್ಕಳನ್ನು ಬಿಡುವ ಕರೆತರುವ ಹೆಚ್ಚಿನ ಹೊಣೆ ಅವಳದಾಗಿದೆ. ಹೊರಗಿನ ದುಡಿಮೆಗೆ ಹೋಗು ವವರು ಮನೆಗೆ ಬರುವ ಅತಿಥಿಗಳನ್ನು ನೆಂಟರನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲವೆನ್ನುವ ಆಪಾದನೆ ಹೊರಬೇಕಾಗುತ್ತದೆ. ಮನೆ, ಗಂಡ, ಮಕ್ಕಳಕಡೆ ಸಾಕಷ್ಟು ಗಮನಕೊಡಲಾಗುತ್ತಿವೆನ್ನುವ ಆತಂಕ ಲವಳನ್ನು ಆವರಿಸಿರುವುದುಂಟು. ಮಕ್ಕಳಿಗೆ ಅನ್ಯಾಯವಾಗುತ್ತಿದೆಯೇನೋ ಎನ್ನುವ ಮನೋಕ್ಲೇಶಕ್ಕೆ ಅವಳು ಒಳಗಾಗುವುದಿದೆ. ಆರ್ಥಿಕವಾಗಿ ಸಬಲಳಾಗಿದ್ದಲ್ಲಿ ಕುಟುಂಬದ ಸಂಪೂರ್ಣ ಆರ್ಥಿಕ ಹೊಣೆಗಾರಿಕೆ ಅವಳ ಪಾಲಿಗಿದೆ. ಅವಳ ಕೆಲಸದ ವೇಳೆಗೆ ಅನುಸಾರವಾಗಿ ಮನೆಯಿಂದ ಹೊರಡ

ಬೇಕು. ತಿರುಗಿ ಮನೆಗೆ ಬರಬೇಕೆನ್ನುವ ನಿಯಮವನ್ನು ಕಡ್ಡಾಯವಾಗಿ ಪಾಲಿಸಬೇಕಾಗುತ್ತದೆ. ಎಲ್ಲಿಗೆ ಹೋಗಬೇಕು, ಯಾರನ್ನು ಕರೆಯಬೇಕು, ಯಾರೊಂದಿಗೆ ಸ್ನೆಹವಿರಬೇಕು ಎನ್ನುವುದನ್ನು ನಿರ್ಧರಿಸುವ ಹಕ್ಕು ಎಲ್ಲ ಮಹಿಳೆಯರಿಗೂ ದೊರೆತಿರುವುದಿಲ್ಲ. ಉದ್ಯೋಗದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ಒಂದು ಬಗೆಯದಾದರೆ ಕೆಲಸಕ್ಕೆ ಹೋಗುವಾಗ ಬರುವಾಗ ಎದುರಿಸುವ ಕಿರುಕುಳ ಇನ್ನೊಂದು ಬಗೆಯದು. ಅಸಭ್ಯವಾಗಿ ವರ್ತಿಸುವುದು, ಮಾತಾಡಿಸಲು ಪ್ರಯತ್ನಿಸುವುದು, ದ್ವಂದ್ವಾರ್ಥ ಬರುವಂತೆ ಮಾತಾಡುವುದು ಇತ್ಯಾದಿ. ಉದ್ಯೋಗದ ವಿಷಯದಲ್ಲಿ ಮಹಿಳೆ ಎನ್ನುವ ಅಲಕ್ಷ್ಯ ಭಾವ ಸಾಮಾನ್ಯವಾದದ್ದು. ಬಡ್ತಿ ಇನ್ನಿತರ ಸೌಲಭ್ಯದ ಸಂದರ್ಭದಲ್ಲಿ ಮಹಿಳೆಯರಿಗೆ ಕೊಟ್ಟರೆ ಪ್ರಯೋಜನವಿಲ್ಲ ಎನ್ನುವ ಅಪಹಾಸ್ಯದ ಮಾತು ಅಪರೂಪವಲ್ಲ. ಕೆಲವು ಪುರುಷರು ಮಹಿಳಾ ಸಹೋದ್ಯೋಗಿಗಳನ್ನು ಲಘುವಾಗಿ ಕಾಣುವುದನ್ನು ಅವರ ವಿಷಯದಲ್ಲಿ ಅಪಪ್ರಚಾರ ಮಾಡುವುದನ್ನು ತಮ್ಮ ಕೆಲಸದ ಒಂದು ಭಾಗವೆಂದು ತಿಳಿದುರುವುದು ಇದೆ. ಇದನ್ನು ಶ್ರೀಮಂತ ಮಹಿಳೆಯರ ಸ್ಥಿತಿ. ಅವರ ಬದುಕು ಚಿನ್ನದ ಪಂಜರದಲ್ಲಿ ಬಂಧಿತವಾಗಿರುತ್ತದೆ. ಅವರು ಮನಗೆ ಅಲಂಕಾರದಂತೆ ಇರಬೇಕಾಗುತ್ತದೆ. ತಮಗೆ ಬೇಕಾದ ವಸ್ತುವಿನ ಆಯ್ಕೆಗೆ ಅವಕಾಶವಿರುವುದು ತೀರಾ ಅಪರೂಪ. ಹಿರಿಯರು ಪುರುಷರು ತಂದ ವಸ್ತುವನ್ನು ಒಪ್ಪಿಕೊಳ್ಳುವ ಅನಿವಾರ್ಯತೆ ಅವರದು.

ವಿವಾಹಿತ ಹೆಣ್ಣೊಬ್ಬಳು ಪರಪುರುಷನನ್ನು ಕಣ್ಣೆತ್ತಿ ನೋಡುವುದು ಅಪರಾಧವೆಂದು ಪರಿಗಣಿಸುತ್ತಿದ್ದ ಸಮಾಜದಲ್ಲಿ ಅದೇ ಮಹಿಳೆ ಇಂದು ಆರ್ಥಿಕ ಸ್ವಾವಲಂಬನೆಗಾಗಿ, ಕುಟುಂಬದ ಆರ್ಥಿಕ ಸ್ಥಿತಿಯ ಸುಧಾರಣೆಗಾಗಿ ಪರಪುರುಷರ ಮಧ್ಯವೇ ಉದ್ಯೋಗದಲ್ಲಿರುತ್ತಾಳೆ. ತನ್ನ ಭಾವನೆ ಗಳಿಗೆ ಸ್ಪಂದಿಸುವರೊಂದಿಗೆ ಸ್ನೇಹದಿಂದಿರುತ್ತಾರೆ. ಆ ಕಾರಣ ಗುಸುಗುಸು ಮಾತುಗಳನ್ನು ಎದುರಿ ಸುವುದು ಮುಂದುವರಿದ ಸಮಾಜದಲ್ಲೂ ಮುಂದುವರೆದಿದೆ. ಹಿಂದಿದ್ದ ನೈತಿಕ ಬಂಧನಗಳು ಸಡಿಲುಗೊಂಡಿದ್ದರಿಂದ ವೈವಾಹಿಕ ಸಂಬಂಧಗಳಲ್ಲಿ ತಾಕಲಾಟಗಳು ಏರ್ಪಡುತ್ತಿವೆ. ವಿವಾಹಿತ ಮಧ್ಯಮ ವರ್ಗದ ಮಹಿಳೆಯ ಸಮಸ್ಯೆಗಳಿಗೆ ಕೊನೆಯಿಲ್ಲ. ಸಂಸಾರ ನಿರ್ವಹಣೆ ಒಂದೆಡೆಯಾದರೆ, ಮತ್ತೊಂದೆಡೆ ದುಡಿಮೆಯ ಗೋಳು, ಮಾನಸಿಕ ದೈಹಿಕ ಒತ್ತಡಗಳ ಮಧ್ಯೆ ಆಕೆ ನಲುಗಿ ಹೋಗುತ್ತಿದ್ದಾಳೆ. ಸಮಾನತೆ, ಸ್ವಾತಂತ್ರ್ಯಗಳ ಹೆಸರಿನಲ್ಲಿ ತಾಳಿ ರಹಿತ ವಿವಾಹದ ಚರ್ಚೆಗಳು ಧಾರಾಳವಾಗಿ ನಡೆಯುತ್ತಿವೆ. ತಾಳಿ ಶೋಷಣೆಯ ಸಂಕೇತವೆಂಬುದು ಕೆಲವರ ಅಭಿಪ್ರಾಯವಾದರೆ, ಅದು ಪರಸ್ಪರ ವೈವಾಹಿಕ ಬಾಂಧವ್ಯದ ಸಂಕೇತವೆಂಬುದಾಗಿ ಕೆಲವರು ವಾದಿಸುತ್ತಾರೆ. ಇಂದಿಗೂ ಆಧುನಿಕ ಮಹಿಳೆಯರೆಲ್ಲ ಅನೇಕರು ಭಾರತೀಯ ಸಂಸ್ಕೃತಿಯನ್ನೊಪ್ಪಿಕೊಂಡು ಪರಂಪರಾಗತ

ವೈವಾಹಿಕ, ಕೌಟುಂಬಿಕ ಜೀವನವನ್ನು ಮುಂದುವರೆಸಿಕೊಂಡು ನಡೆದಿದ್ದಾರೆ. ವಿವಾಹ, ಕುಟುಂಬ ಸಂಬಂಧವಾಗಿ ಅವುಗಳ ಯಶಸ್ಸಿಗೆ ಸ್ತ್ರೀ-ಪುರುಷರಿಬ್ಬರೂ ಅಷ್ಟೇ ಆಸಕ್ತಿ ಕಳಕಳಿ ಹೊಂದಿರಬೇಕಾಗುತ್ತದೆ. ಹೆಣ್ಣು ಗಂಡು ಇಬ್ಬರೂ ತಮ್ಮ ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡು ಮದುವೆಯಾಗುವ ವಿವಾಹ ಕೇಂದ್ರಿತ ಸಮಸ್ಯೆಗಳನ್ನು ಬಗೆಹರಿಸುವ ಅರ್ಥಪೂರ್ಣ ಕೌಟುಂಬಿಕ ಬಾಳುವ ಉದ್ದೇಶವುಳ್ಳವರಾಗಿದ್ದಾಗ ಆಧುನಿಕ ವಿವಾಹಿತ ಮಹಿಳೆಗೆ ಯಾವ ಸವಾಲುಗಳನ್ನೆದುರಿಸುವುದು ಕಷ್ಟವಾಗಲಿಕ್ಕಿಲ್ಲ.

ಸಾಂಪ್ರದಾಯಿಕವಾದ, ಪಕ್ಷಪಾತಪೂರಿತವಾದ, ಲಿಂಗಾಧಾರಿತ ಕುಟುಂಬ ವ್ಯವಸ್ಥೆಯನ್ನು ಕೆಡವಿ, ನಿಷ್ಪಕ್ಷಪಾತ ತತ್ವದ ಆಧಾರದ ಮೇಲೆ ಕುಟುಂಬವನ್ನು ಪುನರ್ ರಚಿಸುವ, ಅದಕ್ಕೆ ಸಾಮಾಜಿಕ ಒಪ್ಪಂದವನ್ನು ಆಧಾರವಾಗಿ ತೆಗೆದುಕೊಳ್ಳುವ ಕೆಲಸ ಆಗಬೇಕಾಗಿದೆ. ಅದಕ್ಕಾಗಿ ಸಾಮಾಜಿಕವಾಗಿ ರೂಪಗೊಂಡ ಅಸಮಾನ ಕೆಲಸದ ಹಂಚಿಕೆಯನ್ನು ಕೈಬಿಡಬೇಕು. ಮಕ್ಕಳನ್ನು ಬೆಳೆಸುವುದು ಮಹಿಳೆಯ ಪ್ರಾಥಮಿಕ ಜವಾಬ್ದಾರಿ, ಗಂಭೀರವಾದ ಕೆಲಸದ ಹೊಣೆ ಹೊತ್ತ ಪುರುಷರ ಮೇಲೆ ಮಕ್ಕಳನ್ನು ಬೆಳೆಸುವ ಹೊಣೆಗಾರಿಕೆ ಇರುವುದಿಲ್ಲ ಎನ್ನುವ ತತ್ವವನ್ನು ಬದಿಗೊತ್ತಬೇಕು. ಈಗಿರುವ ಕುಟುಂಬಗಳು ಪಕ್ಷಪಾತವನ್ನು ಹುಟ್ಟು ಹಾಕುವ ಶಾಲೆಗಳಾಗಿದ್ದು ಅಲ್ಲಿ ಬೆಳೆಯುವ ಮಕ್ಕಳು ಅದೇ ಲಿಂಗಾಧಾರಿತ ವ್ಯವಸ್ಥೆಯನ್ನು ಸಹಜವೆಂದು ತಿಳಿಯುತ್ತಾರೆ. ಮುಂದುವರಿಸುತ್ತಾರೆ. ಮನೆಕೆಲಸದ ಮಹತ್ವ ಅವರಿಗೆ ತಿಳಿಯುವುದೇ ಇಲ್ಲ. ಬೇರೆಯವರ ಕುಟುಂಬದಲ್ಲಿರುವ ಸ್ಥಾನಮಾನವನ್ನು ನೋಡುವುದರ ಮೂಲಕ, ತಮ್ಮನ್ನು ಕುಟುಂಬದ ಬೇರೆಯೇ ಸದಸ್ಯರು ನೋಡಿಕೊಳ್ಳುವ ರೀತಿಯ ಮೂಲಕ ಮಕ್ಕಳು ತಮ್ಮನ್ನು ತಾವು ಕಂಡುಕೊಳ್ಳುತ್ತಾರೆ. ವಿಶ್ವವನ್ನು ಕಂಡುಕೊಳ್ಳುತ್ತಾರೆ. ಮನೆಯಲ್ಲಿರುವ ಭೇದಭಾವ ಸಹಜವಾಗಿ ಕಾಣುತ್ತದೆ. ಹೊರಗಡೆಯೂ ಅದೇ ಸಹಜವಾಗಿ ಕಾಣುತ್ತದೆ. ಅಂತಹ ವ್ಯಕ್ತಿಗಳಿಗೆ ಪಕ್ಷಪಾತ ಅರ್ಥವಾಗುವುದಿಲ್ಲ. ಕಾಣಿಸುವುದಿಲ್ಲ. ಆದ್ದರಿಂದ ಕುಟುಂಬ ವ್ಯವಸ್ಥೆ, ವ್ಯಕ್ತಿಗಳ ವ್ಯಕ್ತಿತ್ವದ ರೂಪುಗೊಳ್ಳುವಿಕೆಯಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಕುಟುಂಬವನ್ನು ಸಹಜ ಸ್ವಾಭಾವಿಕ ವ್ಯವಸ್ಥೆ ಎಂದು ನಂಬಿರುವ ತನಕ ಕುಟುಂಬ ವ್ಯವಸ್ಥೆಯ ಪುನರ್ ನಿರ್ಮಾಣ ಸಾಧ್ಯವಿಲ್ಲ. ಹಾಗೆಂದು ಭಾವಿಸಿಯೇ ಅದನ್ನು ಎಲ್ಲಾ ರಾಜಕೀಯ ಚಿಂತನೆಗಳಿಂದ ಚರ್ಚೆಗಳಿಂದ ಹೊರಗಿಡಲಾಯಿತು. ಆದರೆ ಸ್ತ್ರೀವಾದಿಗಳು ಕುಟುಂಬವನ್ನು ಸಹಜ ವ್ಯವಸ್ಥೆ ಎಂದು ಒಪ್ಪುವುದಿಲ್ಲ. ಅದು ಮಾನವ ನಿರ್ಮಿತ, ಅದೂ ಕೂಡಾ ಸಂಸ್ಕೃತಿಯ, ಸಾಮಾಜಿಕ ಆರ್ಥಿಕ ವ್ಯವಸ್ಥೆಯ, ರಾಜಕೀಯದ ಭಾಗ ಎಂದೇ ತಿಳಿಯುತ್ತಾರೆ. ಕುಟುಂಬವನ್ನು ರಚಿಸುವ, ಮಕ್ಕಳನ್ನು ಹೇರುವ, ಬೆಳೆಸುವ ಅಧಿಕಾರ ಯಾರದು ಎನ್ನುವ ಮೂಲಭೂತ ಪ್ರಶ್ನೆಯ ಚರ್ಚೆಯಾಗಬೇಕಿದೆ. ತನ್ನ

ದೇಹದ ಮೇಲೆ, ಸಂತಾನೋತ್ಪತ್ತಿಯ ಮೇಲೆ ಮಹಿಳೆಗೆ ಎಷ್ಟು ಹಕ್ಕಿದೆ ಎನ್ನುವುದು ಎಲ್ಲಕ್ಕೂ ಮೂಲದ ಪ್ರಶ್ನೆ. ವ್ಯಾಪಾರ ಮಾರುಕಟ್ಟೆಯ ಸಂಬಂಧವಾಗಿ ಬೆಳೆಸುವ 'ಕರಾರು' ಪರಿಕಲ್ಪನೆಯನ್ನು ಕುಟುಂಬಕ್ಕೆ ಅನ್ವಯಿಸಲು ಸಾಧ್ಯವೇ ಮಾನವ ಸಂದರ್ಭಗಳ, ಸಂಬಂಧಗಳ, ನಡವಳಿಕೆಯ ವಿಭಿನ್ನತೆಯನ್ನು ಗಮನಿಸಿದಾಗ ಸಾರ್ವತ್ರಿಕವಾಗಿ ಅನ್ವಯಿಸುವ ಕಾನೂನನ್ನು ರಚಿಸಲು ಸಾಧ್ಯವೇ? ಸಾರ್ವತ್ರಿಕ ಅನ್ವಯದ ಕಾನೂನನ್ನು ಸಾಧ್ಯ ಎಂದು ಒಪ್ಪುವುದಾದರೆ ಅದು ಖಾಸಗಿ ಕ್ಷೇತ್ರದಲ್ಲಿನ ಸ್ವಾತಂತ್ರ್ಯ ಅಭಿಪ್ರಾಯದ ಕಾರಣದಿಂದ ನಡೆಯುವಂತಹ ಘಟನೆಗೂ ಅನ್ವಯಿಸಬೇಕು. ಸಾರ್ವಜನಿಕ ಖಾಸಗಿ ಕ್ಷೇತ್ರಗಳ ನಡುವಿನ ಗೋಡೆ ಒಡೆಯಬೇಕಾದರೆ ಸಮಾನ ಮಾನದಂಡ ಎರಡೂ ಕ್ಷೇತ್ರಕ್ಕೆ ಅನ್ವಯವಾಗಬೇಕು. ವಿವಾಹಿತ ಸ್ತ್ರೀ ಉದ್ಯೋಗ ಹಿಡಿಯಬೇಕೆಂದರೆ, ಅದಕ್ಕೆ ಬಲವಾದ ಕಾರಣ ಗಳಿರಬೇಕು. ಇಲ್ಲದಿದ್ದರೆ "ಗಂಡ-ಮಕ್ಕಳನ್ನು ಒಣಗಿಸಿ ಸಮಾಜದ ಉದ್ಧಾರ ಮಾಡ್ತಾಳೆ" ಎಂಬ ಕೊಂಕು, ಆರೋಪಗಳಿಗೆ ಬಲಿಯಾಗಬೇಕು. ಹೆಣ್ಣಿನ ಓದಿಗೆ ಪೂರ್ಣ ಪ್ರಾಮುಖ್ಯ ಬಂದಿಲ್ಲ. "ಹೆಣ್ಣು ನಾಳೆ ಪರರ ಮನೆ ಸೇರುವವಳು, ಅವಳ ಮೇಲೆ ಮಾಡಿದ ಖರ್ಚೆಲ್ಲ ದಂಡ" ಎಂಬ ಭಾವ ಕಿಂಚಿತ್ತೂ ಅಳಿದಿಲ್ಲ. ಹಾಗೆಂದೇ "ಎಂಥದ್ದೋ ಒಂದು ಡಿಗ್ರಿ ಆದ್ರೆ ಸಾಕು, ಅದೂ ಏಕೆ ಅಂದರೆ ಈಗಿನ ಕಾಲದ ಹುಡುಗರಿಗೆ ಹೆಂಡತಿ ಪದವೀಧರೆ ಇರಬೇಕಲ್ಲ, ಅದಕ್ಕೆ ಎಂಬ ಲೆಕ್ಕಾಚಾರ. ಅಂತೂ ಮಹಿಳೆಯ ಬಾಲ್ಯದಿಂದ ಯೌವನದವರೆಗಿನ ಆಕೆಯ ಪ್ರತಿ ತಯಾರಿ ಎಂದೋ ಬರುವ ಗಂಡನ ಬೇಡಿಕೆ, ಬಯಕೆಗಳಿಗೆ ಅನುಕೂಲಕರವಾಗಿ ತನ್ನನ್ನು ತಾನೂ ರೂಪಿಸಿಕೊಳ್ಳುವುದಾಗಿದೆ. ಹೀಗೆಂದೇ ಅನೇಕ ವಿವಾಹಿತ ಮಹಿಳೆಯರು ಕೇವಲ ಕೆಲಸಗಾರರಾಗಿದ್ದಾರೆ.

"ಸಂಬಳ ಕೊಟ್ಟರೆ ಸಾಕು, ಈ ತುಟ್ಟಿಕಾಲದಲ್ಲಿ ಸಂಸಾರ ನಿಭಾಯಿಸಬೇಕಲ್ಲ" ಎಂಬ ಭಾವದವರು. ಇವರಿಗೆ ಉದ್ಯೋಗ ಆದರ್ಶವಲ್ಲ, ಕೇವಲ ಅನಿವಾರ್ಯ. ಇವರ ಸಮಸ್ಯೆಗಳು ಬಹಳಷ್ಟು ಕಡಿಮೆ, ಕಾರಣ ಈಕೆಗೆ ಮನೆ ಮಕ್ಕಳು ಮೊದಲ ಸ್ಥಾನ. ಉದ್ಯೋಗ ಏನಿದ್ದರೂ ಎರಡನೆಯದು. ಇಂಥ ಬಹಳಷ್ಟು ಮಹಿಳೆಯರಿಗೆ ತಮ್ಮ ಹಣದ ಒಂದು ಕಾಸು ಖರ್ಚು ಮಾಡಲೂ ಗಂಡನ ಅಪ್ಪಣೆ ಬೇಕಾಗಬಹುದು. ಈಕೆಯ ಸ್ಥಿತಿ ಉದ್ಯೋಗವಿಲ್ಲದ ಗೃಹಿಣಿಯರಿಗಿಂತ ಅತಂತ್ರವಾದದ್ದು, ಅಧ್ವಾನವಾದದ್ದು. ಮತ್ತೊಂದು ವರ್ಗದ ಉದ್ಯೋಗಸ್ಥ ಮಹಿಳೆ ಉಂಟು. ಈಕೆ ತನ್ನ ಅರ್ಹತೆ, ಅರಿತವಳು, ಸಮಾನತೆಯ ಅರ್ಥಬಲ್ಲವಳು, ತನ್ನ ಉದ್ಯೋಗದ ಬಗ್ಗೆ ಏನೆಲ್ಲ ಗುರಿ, ಧ್ಯೇಯ, ಮಹತ್ವಾಕಾಂಕ್ಷೆ ಹೊತ್ತವಳು. ಮದುವೆ ಮಕ್ಕಳೆಂಬ ಕಾರಣಗಳಿಗೆ ತನ್ನ ಉದ್ಯೋಗವನ್ನು ತ್ಯಾಗ ಮಾಡಲು ಸಿದ್ಧವಿಲ್ಲದವಳು. ಈಕೆಗೆ ಉದ್ಯೋಗ ಆರ್ಥಿಕ ಸ್ವಾತಂತ್ರ್ಯ

ದೊಡನೆ ಮಾನಸಿಕ ಬೌದ್ಧಿಕ ತೃಪ್ತಿಗೆ ಅವಶ್ಯಕವಾಗಿಬೇಕಾದವು. ಈಕೆಯ ಸಮಸ್ಯೆಗಳು ಕಬ್ಬಿಣದಷ್ಟೇ ಕಠಿಣ. ಮನೆ ಆಚೆ ಹೆಣ್ಣು ಯಶಸ್ವಿಯಾಗುವುದನ್ನು ಇನ್ನೂ ನಮ್ಮ ಸಮಾಜ ಸ್ವೀಕರಿಸಿಲ್ಲ. ಹೆಣ್ಣು ಅಂದರೆ ಹೆಂಡತಿ ತಾಯಿಯ ವೈಭವೀಕೃತ ಚಿತ್ರ ಮರೆಯಾಗಿಲ್ಲ. ಹೆಣ್ಣೆಂದರೆ ಉತ್ತಮ ಗೃಹಿಣಿಯಾಗಿ, ಮಕ್ಕಳ ತಾಯಿಯಾಗುವುದರಲ್ಲೇ ಬದುಕಿನ ಸರ್ವಸಾರ್ಥಕತೆ ಎಂದೇ ತಲೆಯಲ್ಲಿ ತುರುಕಿರುವಾಗ ಇಂಥೆಲ್ಲ ಪೂರ್ವಾಗ್ರಹಗಳೊಡನೆ ಆಕೆ ಮೊದಲು ಹೋರಾಡಬೇಕಾಗುತ್ತದೆ. ಇಬ್ಬಗೆಯ ದ್ವಂದ್ವಕ್ಕೆ ವಿವಾಹಿತ ಮಹಿಳೆ ಸಿಲುಕುತ್ತಾಳೆ. "ಸಂಸಾರ ಅಥವಾ ಉದ್ಯೋಗ" ಯಾವುದನ್ನು ಆರಿಸಬೇಕೆಂಬ ಉಭಯಸಂಕಟ, ಆಕೆಯ ಬದುಕಿನಲ್ಲಿ ಅನೇಕ ಬಾರಿ ಎದುರಾಗುತ್ತದೆ. ಕಾರಣ ಸಂಸಾರ ಮತ್ತು ಉದ್ಯೋಗ ಎನ್ನುವುದು ಸಾಕಷ್ಟು ಕ್ಲಿಷ್ಟ ಸಂಯೋಗವಾಗಿದೆ. ಮದುವೆಯ ಪ್ರಶ್ನೆ ಎದ್ದು ನಿಂತಾಗ, "ಕೆಲಸ-ಗಿಲಸ ಏನೂ ಬೇಡ, ಮರ್ಯಾದೆಯಾಗಿ ಮನೆಲಿರಲಿ, ಮದುವೆ ಆದ ತಕ್ಷಣ ಕೆಲಸ ಬಿಡಬೇಕು" ಇಂಥ ಕಡ್ಡಾಯಗಳಿಗೆ ಉದ್ಯೋಗಸ್ಥ ಮಹಿಳೆ ಒಡ್ಡಿಕೊಳ್ಳ ಬೇಕಾಗಬಹುದು. "'ಮನೆ' ಮುಂದೆ ಕೆಲಸ, ಈಗಿನ ಕಾಲದಲ್ಲಿ ಎಷ್ಟು ಹಣವಿದ್ರೂ ಆಗೋಲ್ಲ". ಎಂದು ಮಧ್ಯಮ ವರ್ಗದ ಗಂಡುಗಳು ಒಪ್ಪಿದರೂ ಇಲ್ಲೂ ತೊಂದರೆ ತಪ್ಪಿದ್ದಲ್ಲ. ಗಂಡನಿಗೆ ಸ್ಥಾನಪಲ್ಲಟವಾದರೆ ಹೆಂಡತಿ ರಾಜೀನಾಮೆ ಕೊಟ್ಟು ನಡೆಯಬೇಕು. ಇಲ್ಲದಿದ್ರೆ ಗಂಡನ ಯೋಗ ಕ್ಷೇಮ ನೋಡಿಕೊಳ್ಳುವವರಾರು? "ಇನ್ನೆಷ್ಟು ದಿನ ಹೀಗೆ ಹೋಟಲಲ್ಲಿ ತಿಂದುಕೊಂಡಿರ್ತೀಯೋ, ಒಂದು ಮದುವೆ ಆಗಬಾರದೇ" ಎಂದು ಆರಂಭವಾಗುತ್ತದೆ. ವಿವಾಹದ ಪೀಠಿಕೆ, ಅಂದರೆ ಹೆಂಡತಿಯ ಪ್ರಮುಖ ಅವಶ್ಯಕತೆ ಅಡಿಗೆ ಹಾಗೂ ಮನೆಯ ಓರಣಕ್ಕೆ ಎಂಬ ನಂಬಿಕೆ. ಇಂದು ಹೆಚ್ಚು ಹೆಚ್ಚು ಮಹಿಳೆಯರು ಉದ್ಯೋಗ ಹಿಡಿಯುತ್ತಿದ್ದರೂ, ಪರಿಸ್ಥಿತಿ ಹೆಚ್ಚು ಬದಲಾಗಿಲ್ಲ. ಉದ್ಯೋಗಸ್ಥ ಮಹಿಳೆಯಾದೊಡನೆ ಆಕೆ ಗೃಹ ಕೃತ್ಯಗಳಿಂದ ರಿಯಾಯಿತಿಯನ್ನೇನೂ ನಿರೀಕ್ಷಿಸುವಂತಿಲ್ಲ.

ಗಂಡ-ಹೆಂಡತಿ ಇಬ್ಬರೂ ಒಂಬತ್ತಕ್ಕೆ ಮನೆಯಿಂದ ಹೊರಡಬೇಕಾದರೂ, ಹೆಂಡತಿ ಆರಕ್ಕೆ ಎದ್ದು, ನೀರು ಹಿಡಿದು, ಅಡಿಗೆ ಪ್ರಾರಂಭಿಸುತ್ತಾಳೆ. ಗಂಡ ಆರಾಮವಾಗಿ ಎದ್ದು, ಪೇಪರ್ ಹಿಡಿದು ಕೂರುತ್ತಾನೆ. ನಮ್ಮ ಮೂಲಭೂತ ವಿದ್ಯಾಭ್ಯಾಸದ ವೈಖರಿಯೆ ಹಾಗಿದೆ. ಗಂಡು ಹೆಣ್ಣಿನ ಕಾರ್ಯಗಳನ್ನು, ಪಾತ್ರಗಳನ್ನು ಗೆರೆ ಎಳೆಯದಂತೆ ವಿಂಗಡಿಸಲಾಗಿದೆ. ನಾವುಗಳೆಲ್ಲರೂ ಓದಿನ ಪಠ್ಯಪುಸ್ತಕಗಳಲ್ಲಿ ಕಮಲಳಿಗೆ ಅಡಿಗೆ, ಬಸವನಿಗೆ ತೋಟದ ಕೆಲಸ ಹಚ್ಚಿರುತ್ತಿದ್ದರು. ಮನೆಯಲ್ಲಿ ಎಳೆವಯಸ್ಸಿನ ಹೆಣ್ಣಿನ ಮೇಲೆ ಅನ್ನಸಾರು ಆಗಿದೆಯಾ ನೋಡೆ, ಕಾಫಿ ಮಾಡೆ, ಕಸಗುಡಿಸು" ಎಂದೆಲ್ಲಾ ಹೇರುತ್ತಾ ಹೋಗುವ ಮಾತಾಪಿತೃಗಳು, ಗಂಡು ಹುಡುಗನಿಗೆ ಮಾತ್ರ ಓದಿದ್ಯೇನೋ,

ಸರಿಯಾಗಿ ಅಂಕಗಳನ್ನು ತೆಗೆಯಬೇಕು. ಇಂಜಿನಿಯರಿಂಗ್ ಸೀಟ್ ತಗೋಬೇಕು ಎಂದು ಹುರಿದುಂಬಿ ಸುತ್ತಾರೆ. ಹೆಣ್ಣು ಅಚ್ಚುಕಟ್ಟಾಗಿ ಅಡಿಗೆ ಕಲಿತು ನಾಳೆ ಅತ್ತೆ ಮನೆಯಲ್ಲಿ ಒಳ್ಳೆಯವಳನಿಸಿಕೊಳ್ಳಬೇಕು. ಎಂದೋ ಬರುವ ಗಂಡನಿಗಾಗಿ ಈಗಿನಿಂದಲೇ ಭಾರೀ ತಯಾರಿ. "ಆರತಿಗೊಬ್ಬ ಮಗಳು, ಕೀರ್ತಿಗೊಬ್ಬ ಮಗ" ಎಂದು ಸಾರುತ್ತಿದ್ದ ಸರ್ಕಾರಿ ಜಾಹೀರಾತುಗಳು ಇಂದು ಕಾಣದಿದ್ದರೂ 'ಹೆಣ್ಣು ಆರುತಿಗೆ ಮಾತ್ರ' ಎಂಬ ಪೂರ್ವಾಗ್ರಹ ಮರೆಯಾಗಿಲ್ಲ. ಕೀರ್ತಿ ಏನಿದ್ದರೂ ಕುಲಪುತ್ರನಿಂದ ಇಂತಹ ಸಾಂಪ್ರದಾಯಿಕ ಮೌಲ್ಯಗಳನ್ನು ರೂಢಿಸಿಕೊಂಡು ಬೆಳೆದ ಗಂಡಿಗೆ ಮನೆಕೆಲಸ ಮಾಡುವುದು ತನ್ನ ಪುರುಷತ್ವಕ್ಕೆ ಕಡಿಮೆ ಎನಿಸುತ್ತದೆ. ಸ್ವಲ್ಪ ವಿಚಾರವಂತೆ ಗಂಡು ಮದುವೆಯ ಹೊಸತರಲ್ಲಿ ಹೆಂಡತಿಗೇನಾದರೂ ಸಹಾಯ ಮಾಡಿಕೊಟ್ಟರೆ, ಅತ್ತೆಯ ಉರಿ ಉರಿ ಕೊಂಕಿಗೆ ಗುರಿಯಾಗಬೇಕಾಗ ಬಹುದು. 'ತಾನು ಮುದ್ದಿನಿಂದ ಕೂಡಿಸಿ ಮಾಡಿ ಹಾಕಿ ಬೆಳೆಸಿದ ಮಗ, ನಿನ್ನೆ ಮೊನ್ನೆ ಬಂದ ಹೆಣ್ಣಿನ ಆಳಾಗಿ ಬಿಟ್ಟ' ಎಂದು ಗೋಳಾಡಬಹುದು. ಇಲ್ಲಿ ಸಮಾಜವೇ ಒಳ್ಳೆಯ "ಹೆನ್‌ಪೆಕ್ಡ್ ಮಾರಾಯ, ಅಮ್ಮಾವರ ಗಂಡ" ಎಂದು ಹೀಯಾಳಿಸಿ ಹಾಸ್ಯ ಮಾಡಬಹುದು. ಹೀಗಾಗಿ ಗಂಡು ಮತ್ತೆ ತನ್ನ ಸಾಂಪ್ರದಾಯಿಕ ಪುರುಷ ಪಾತ್ರಕ್ಕೆ ಹಿಂತಿರುಗುತ್ತಾನೆ. ಉದ್ಯೋಗಸ್ಥ ಮಹಿಳೆ, ತನ್ನ ಸಾಂಪ್ರದಾಯಿಕ ಹೆಣ್ಣಿನ ಪಾತ್ರದೊಡನೆ, ಹೊರಗೆ ದುಡಿಯುವ ಗಂಡಿನ ಪಾತ್ರವನ್ನೂ ಹೊತ್ತು, ಎರಡು ಪಾಳಿಗಳಲ್ಲಿ ದುಡಿದು ನಲುಗುತ್ತಾಳೆ. ಹೀಗೆಂದೇ ಉದ್ಯೋಗಸ್ಥಳಾದ ವಿವಾಹಿತ ಮಹಿಳೆಯರು ಮಾನಸಿಕವಾಗಿ, ದೈಹಿಕವಾಗಿ ಬಳಲುವುದನ್ನು ಕಾಣುತ್ತೇವೆ. ತನ್ನ ಉದ್ಯೋಗದಲ್ಲಿ ಆಕೆ ಪೂರ್ಣ ಪ್ರೇರಣೆಯಿಂದ ಮುಂದುವರೆಯುವುದು, ವಿವಾಹಿತ ಮಹಿಳೆಯರಿಗೆ ಕಷ್ಟವಾಗುತ್ತದೆ. "ಉದ್ಯೋಗಂ ಪುರುಷ ಲಕ್ಷಣಂ" ಎಂದ ಸಮಾಜದಲ್ಲಿ, ಗಂಡು ಕೆಲಸದ ಒತ್ತಡವಿದ್ದರೆ ರಾತ್ರಿ ಹನ್ನೆರಡಕ್ಕೂ ಮನೆ ಸೇರದಿರಬಲ್ಲ, ಕೆಲಸದ ಮೇಲೆ ಊರೂರು ಸುತ್ತಬಲ್ಲ, ಅಂಥಹ ಅವಕಾಶಗಳು ಹೆಣ್ಣಿಗಿಲ್ಲ. ಹೊತ್ತಾಗಿ ಹೋದ್ರೆ ನಮ್ಮಜಮಾನ್ರು ಹಾರಾಡ್ತಾರೆ, ಮಗು ಬಿಟ್ಟು ಹೋಗೋಕಾಗೋಲ್ಲ ಇಂಥ ಸಬೂಬುಗಳ ಸರಪಳಿಯಲ್ಲಿ ಈಕೆ ಬಂಧಿತಳಾಗಿದ್ದಾಳೆ.

ಮನೆಯ ಹೊಣೆ ಜವಾಬ್ದಾರಿ ಪೂರ್ಣ ಹೆಣ್ಣಿನ ಹೆಗಲ ಮೇಲೆ ಹೆಣ ಭಾರವಾಗಿ ನಿಂತಿದೆ. ವಿವಾಹವಾದೊಡನೆಯೇ ಹೆಣ್ಣಿಗೆ ತಾಯ್ತನದ ಒತ್ತಡಗಳು ಏರುತ್ತವೆ. ಆಕೆ ವಿವಾಹವಾದಾಗ ಓದು, ವಿದ್ಯಾಭ್ಯಾಸ ಉದ್ಯೋಗದ ಯಾವುದೇ ಕ್ಲಿಷ್ಟ ಹಂತದಲ್ಲಿರಲಿ, ಮದುವೆಯಾದೊಡನೆ ಮಗು ಹೆತ್ತು ಕೊಡುವ ಒತ್ತಡ ನೇರವಾಗಿ ಇಲ್ಲ ಪರೋಕ್ಷವಾಗಿ ಆಕೆಯ ಮೇಲೆ ಬೀಳುತ್ತದೆ. ಇಂಜಿನಿಯರಿಂಗ್ ಓದುತ್ತಿದ್ದ ನಮ್ಮ ಕಾಲೇಜಿನ ಹುಡುಗಿ, ಮದುವೆಯಾಯಿತೆಂದು ಓದು ಬಿಟ್ಟದ್ದು ಇದೆ. ಹೆಣ್ಣು ಮಕ್ಕಳಿಗೆ ಹೆಚ್ಚಿನ ಓದು ಏಕೆ. ಎಂದು ಪಿಯುಸಿಗೆ ಬಿಡಿಸಿ ವಿವಾಹ ಮಾಡಿದ್ದ ಪಕ್ಕದ ಮನೆಯವರ

ಮಗಳ ಗಂಡ ವಿವಾಹವಾದ ಆರು ತಿಂಗಳಿಗೆ ಹೃದಯಘಾತದಿಂದ ಸತ್ತಾಗ, ಎದ್ದೂ ಬಿದ್ದು ಡೊನೆಷನ್ ಕೊಟ್ಟು ಮಗಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸಿದ್ದರು. ಹೆಣ್ಣಿನ ವಿವಾಹ ಆಕೆಯ ಬದುಕಿಗೆ ತಡೆಯಾಗಬಹುದು, ಒತ್ತಾಸೆಯಾಗಬಹುದು. ಹೆಣ್ಣಿನ ಬದುಕನ್ನು ಗುರುತು ಸಿಗದಂತೆ ಬದಲಿಸುತ್ತದೆ. ಈ ವಿವಾಹ ಗರ್ಭಾವಸ್ಥೆ, ಹೆರಿಗೆ, ಬಾಣಂತನಗಳು ಮಹಿಳೆಯನ್ನು ಮಾನಸಿಕವಾಗಿ ದೈಹಿಕವಾಗಿ ಕಟ್ಟಿ ಹಾಕುತ್ತವೆ. ಆಕೆ ಹೆರಿಗೆಯ ರಜೆಯಲ್ಲಿ ಹೋದಾಗ ಕಾರ್ಯರಂಗದಲ್ಲಿ ಬಹಳಷ್ಟು ಬದಲಾಗಿರುತ್ತದೆ. ಹಿಂದಿರುಗಿ ಬಂದ ಆಕೆ ಇತರರಿಗಿಂತ ಹಿಂದುಳಿವ ಸಂಭವವಿದೆ. ಒಂಭತ್ತು ತಿಂಗಳು ಹೊರುವುದು, ಹೆರುವುದೇನೋ ದೈಹಿಕ ಅನಿವಾರ್ಯ. ತದನಂತರದ ಮಗುವಿನ ಪಾಲನೆಯ ಜವಾಬ್ದಾರಿ ಗಂಡ ಹೆಂಡತಿ ಇಬ್ಬರಿಗೂ ಸೇರಿದ್ದಲ್ಲವೇ ಆದರೆ ಮಾತೃತ್ವವನ್ನು ವೈಭವೀಕರಿಸಿದ ಸಮಾಜದಲ್ಲಿ, ಮಕ್ಕಳ ಜವಾಬ್ದಾರಿ ಮತ್ತೆ ಮತ್ತೆ ಹೆಂಡತಿಯ ಹೆಗಲಿಗೇರುತ್ತದೆ. ನಮ್ಮಲ್ಲಿ ಬೇಬಿಸಿಟ್ಟಿಂಗ್ ಕ್ರೆಷ್ ವ್ಯವಸ್ಥೆ ಅಷ್ಟಾಗಿ ವ್ಯಾಪಕವಾಗಿಲ್ಲ. ಮನೆಯಲ್ಲಿ ಹಿರಿಯರಿಲ್ಲದಿದ್ದಾಗ, ಹೆಣ್ಣು ಕೆಲಸವನ್ನೇ ಬಿಟ್ಟು ಮನೆಯಲ್ಲಿ ಕೂರುತ್ತಾಳೆ. ಹಾಗೊಮ್ಮೆ ಆಕೆ ಅಲ್ಲಿ ಇಲ್ಲಿ ಮಗುವನ್ನು ಬಿಟ್ಟು ಹೋದರೆ, ಅದು ಅಕ್ಷಮ್ಯ ಅಪರಾಧ. ಮುಖ್ಯವಾಗಿ ಮಗುವಿನ ಬೆಳವಣಿಗೆಯಲ್ಲಿ ಗಂಡಿನ ಪಾತ್ರಕ್ಕೆ ಸಮಾನ ಒತ್ತು ನೀಡಬೇಕಿದೆ. ಇಷ್ಟೆಲ್ಲ ಸಾಂಸಾರಿಕ ಅಡಚಣೆಗಳಲ್ಲೂ ಮಹಿಳೆ ಯಶಸ್ವಿ ಯಾದಳೆಂದರೆ, ಪತಿಯಲ್ಲಿ ಅಸೂಯೆ, ಅಭದ್ರತೆಯ ಭಾವ ಇಣುಕುತ್ತದೆ. ಇನ್ನೂ ಇಂಥವರ ಗಂಡ ಎಂಬಷ್ಟು ಹೆಣ್ಣು ಪ್ರತಿಭಾವಂತಳಾದರೆ ಆತನ ಸ್ವಾಭಿಮಾನಕ್ಕೆ ಮಹಾಪೆಟ್ಟು, ಉದ್ಯೋಗದಲ್ಲಿ ಯಶಸ್ವಿಯಾದ ಬಹಳಷ್ಟು ಮಹಿಳೆಯರ ದುರಂತ ದಾಂಪತ್ಯಕ್ಕೆ ಮುಖ್ಯ ಕಾರಣ ಗಂಡಿನ ಅಹಂಭಾವ, ಅಸಹಕಾರ, ದುರಭಿಮಾನವಾಗಿದೆ. ಇಷ್ಟಿದ್ದರೂ ಇಂದು ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತಿದೆ. ಮದುವೆಯಾದೊಡನೆ ಉದ್ಯೋಗ ಬಿಡುವವರು. ಹಿಂದಿನಷ್ಟು ಇಂದು ಕಾಣುತ್ತಿಲ್ಲ. ಒಂದು ಕಾಲಕ್ಕೆ ಕುಟ್ಟಿ ತಿರುವಿ ಬೀಸುವಲ್ಲಿ ಕಟ್ಟಿಟ್ಟ ಹೆಣ್ಣಿನ ನಿತ್ಯ ಬದುಕನ್ನು ಮನೆ ಕೆಲಸಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನದ ಫಲವಾದ ಯಂತ್ರಗಳು ಬಹಳಷ್ಟು ಹಗುರಾಗಿಸಿವೆ. ಬಿಡುವಿಲ್ಲದ ಬಸಿರು ಬಾಣಂತನದಲ್ಲಿ ಬಂಧಿತ ಸ್ತ್ರೀ ಬದುಕು ಬದಲಾಗಿದೆ.

ಸಂತಾನ ನಿರೋಧಕಗಳನ್ನು ಕಂಡು ಹಿಡಿದ ತಕ್ಷಣ ಹೆಣ್ಣಿಗೆ ತನ್ನ ದೇಹದ ಮೇಲೊಂದಿಷ್ಟು ನಿಯಂತ್ರಣ ಹಾಗೂ ಆಯ್ಕೆಯ ಅವಕಾಶ ದೊರೆಯಿತು ಹೀಗೆಂದೇ ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ದಿನೇ ದಿನೇ ಹೆಚ್ಚುವುದನ್ನು ಕಾಣುತ್ತೇವೆ. ಇತ್ತೀಚೆಗೆ ಅನೇಕ ಜನರು ಯಶಸ್ವಿ ಮಹಿಳಾ ವಿಜ್ಞಾನಿಗಳನ್ನು ಸಂದರ್ಶಿಸುವಾಗ, ಹಿರಿಯ ವಿಜ್ಞಾನಿಗಳಲ್ಲಿ ಬಹಳಷ್ಟು ಜನ ಅವಿವಾಹಿತರಾಗಿದ್ದನ್ನು ಗಮನಿಸಿದೆ. “ಹೆಣ್ಣಿಗೆ ಮನೆ ಮಕ್ಕಳು ಸಂಸಾರದೊಡನೆ, ವಿಜ್ಞಾನ ಸಂಶೋಧನೆಯ ತೀವ್ರ

ಒತ್ತಡಗಳನ್ನು ಸಂಭಾಳಿಸುವುದು ಅಸಾಧ್ಯ" ಎಂದು ನಂಬಿದ ಇವರು, ಅವಿವಾಹಿತರಾಗಿಯೇ ಉಳಿದರು ಸಂಶೋಧನೆಯ ಒತ್ತಡದ ಬದುಕನ್ನು ಅರ್ಥಮಾಡಿಕೊಳ್ಳಬಲ್ಲ ಜೀವನ ಸಂಗಾತಿ ಸಿಗುವುದು ಸುಲಭವಿರಲಿಲ್ಲ. ಕ್ಯಾಪ್ಟನ್ ನಿವೇದಿತಾ ಬಾಸಿನ್ ಅವರಿಗೆ ಮೊದಲೇ 'ಇಂಡಿಯನ್ ಏರ್‌ಲೈನ್ಸ್' ನಲ್ಲಿ ವಿಮಾನ ಚಾಲಕಿಯರಾದ ಕ್ಯಾಪ್ಟನ್ ದುರ್ಗಾಬ್ಯಾನರ್ಜಿ ಆಗಲಿ, ಕ್ಯಾಪ್ಟನ್ ಸೌದಾಮಿನಿ ದೇಶಮುಖ ಅವರಾಗಲಿ ವಿವಾಹವಾಗಲಿಲ್ಲ. ಹಾರಾಟದಂತಹ ಅತ್ಯಧಿಕ ಒತ್ತಡದ ಕೆಲಸದೊಡನೆ ವಿವಾಹ ಅಸಾಧ್ಯ ಎಂಬ ಕಲ್ಪನೆಯಿತ್ತು. ಆದರೆ ನಂತರದ ಪೀಳಿಗೆಯ ಮಹಿಳೆಯರು ಮನೆ ಮಕ್ಕಳು ಎಲ್ಲದರ ನಡುವೆ ಹೆಣಗಾಡುತ್ತಲೇ, ಬಿಡದ ಹಟದಲ್ಲಿ ಉನ್ನತ ವ್ಯಾಸಂಗ, ಸಂಶೋಧನೆ ಯನ್ನು ನಡೆಸಿರುವುದನ್ನು ಕಂಡೆ. ಇವರು ಬದುಕಿನಲ್ಲಿ ಆಯ್ದುಕೊಂಡ ಜೀವನಸಂಗಾತಿಯರು ಪತ್ನಿಯ ಮೇಧಾವಿತನವನ್ನು, ಪ್ರತಿಭೆಯನ್ನು ಗೌರವಿಸಿದವರು, ತಮ್ಮ ಪತ್ನಿಗೆ ಸಹಕಾರ ನೀಡದವರು. ಸುಖೀ ಕುಟುಂಬದೊಡನೆ, ಯಶಸ್ವಿ ಉದ್ಯೋಗವನ್ನು, ಸಂಶೋಧನೆಯನ್ನು ಜೊತೆಗೂಡಿಸಿದ ಈ ಮಹಿಳೆಯರ ಬದುಕು 'ಎಲ್ಲವೂ ಸಾಧ್ಯ, ಅಸಾಧ್ಯವಾದದ್ದೇನೂ ಇಲ್ಲ' ಎಂದು ಸಾರುತ್ತದೆ. ಇವರ ಬದುಕು ಇಂದಿನ ಪೀಳಿಗೆಗೆ ಸ್ಫೂರ್ತಿಯ ಸೆಲೆಯಾಗಬಲ್ಲದು. ಅಡ್ಡ ನಿಂತ ಅಡೆತಡೆಗಳ ನಡುವೆಯೂ ಗೆಲವು ಸಾಗಬಹುದೆಂಬ ಆತ್ಮವಿಶ್ವಾಸವನ್ನು ನೀಡಬಲ್ಲದು.

ಮನೆಯ ಹೊರಗಿನ ದುಡಿಮೆಯಲ್ಲಿ ಪಾಲ್ಗೊಳ್ಳುವ ಮಹಿಳೆಯರ ಪ್ರಮಾಣ ವರ್ಷದಿಂದ ವರ್ಷಕ್ಕೆ ಏರಿಕೆ ಕಾಣುತ್ತಿದೆ. ಈ ಸ್ಥೂಲ ನೋಟವನ್ನು ಬಿಟ್ಟು, ಸೂಕ್ಷ್ಮವಾಗಿ ಅವಲೋಕಿಸಿದರೆ, ಮಹಿಳೆಯರು ಅಸಂಘಟಿತ ವಲಯದ ಕ್ಷೇತ್ರಗಳಲ್ಲಿ, ಸೇವಾಮನೋಭಾವ, ಸಹನೆ ಮುಂತಾದವು ಗಳನ್ನು ನಿರೀಕ್ಷಿಸುವ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದಾಳೆ. ಪುರುಷ ತಾನು ಒಲ್ಲದ, ತಿರಸ್ಕರಿಸಿದ ಸ್ಥಾನಗಳಲ್ಲಿ ಮಾತ್ರ ಮಹಿಳೆಯರಿಗೆ ಪ್ರವೇಶ ನೀಡಿದ್ದಾನೆ. ಆದರೆ ಯಾಜಮಾನ್ಯದ ಎಲ್ಲ ಹುದ್ದೆ ಗಳನ್ನೂ ತಾನೇ ಇರಿಸಿಕೊಂಡಿದ್ದಾನೆ. ಹೀಗೆ ಆಕೆಯ ಹೊರಗಿನ ದುಡಿಮೆ ಎಂಬುದೂ ಗೃಹಕೃತ್ಯದ ವಿಸ್ತರಣೆಯ ಅಂಶವಾಗಿ ಸ್ವೀಕೃತವಾಗಿದೆ. ಉದ್ಯೋಗಸ್ಥ ಮಹಿಳೆ ಎದುರುಗೊಳ್ಳುವ ಸಾಮಾಜಿಕ ಮತ್ತು ಸಾಂಸಾರಿಕ ಜವಾಬ್ದಾರಿಗಳು ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಾ ಸಾಗಿವೆ. ಗೃಹಿಣಿತ್ವದ 'ಧರ್ಮ' ಎಂಬ ನೆಲೆಯಲ್ಲಿ ವಿಧಿಸಲಾದ ಎಲ್ಲಾ ಹೊಣೆಗಾರಿಕೆಗಳ ಜೊತೆಗೆ ಆಕೆ ಹೆಚ್ಚುವರಿಯಾಗಿ ಹೊರ ದುಡಿಮೆಯ ಭಾರವನ್ನೂ ನಿರ್ವಹಿಸಬೇಕಾಗಿದೆ. ಹೊರಗಿನ ದುಡಿಮೆಯಿಂದ ಬಳಲಿ ಬಂದರೂ ಗೃಹಕೃತ್ಯ, ತಾಯ್ತನದ ನಿರ್ವಹಣೆಯಲ್ಲಿ ಕೊಂಚ ಏರುಪೇರಾದರೂ ತನ್ನ ಹತ್ತಿರದ ಬಾಂಧವರಿಂದಲೇ ಕಟು ಟೀಕೆಗೆ ಈಡಾಗುವ ಅಪಾಯವನ್ನು ಆಕೆ ಎದುರಿಸುತ್ತಾ ಇದ್ದಾಳೆ. ಇದರ ಫಲವಾಗಿ ಬದುಕಿನ

ಒಂದು ಹಂತದಲ್ಲಿ ತಾನು ಪೂರ್ಣಪ್ರಮಾಣದ ಮಡದಿ ತಾಯಿಯಾಗಲು ಸಾಧ್ಯವಾಗಲಿಲ್ಲ ಎಂಬ ಕೀಳರಿಮೆಗೆ ಒಳ್ಳಗಾಗುತ್ತಿರುವ ಸಂದರ್ಭಗಳೂ ಹೊರತಾಗಿಲ್ಲ. ಮನೆಯ ಒಳಗಿನ ದುಡಿಮೆಗೆ ಮಾನ್ಯತೆ ನೀಡಿದ ಧೋರಣೆಗಳು ನಮ್ಮ ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿವೆ. ದೇಶದ ಆರ್ಥಿಕ ಉತ್ಪಾದನೆಯನ್ನು ಲೆಕ್ಕ ಹಾಕುವಾಗ ಮಹಿಳೆಯರ ದುಡಿಮೆಯನ್ನು ಗಣನೆಗೇ ತೆಗೆದುಕೊಳ್ಳುತ್ತಿಲ್ಲ. ಹೀಗಾಗಿ ನಗದು ರೂಪದಲ್ಲಿ ಪ್ರತಿಫಲ ದೊರೆವ ದುಡಿಮೆ ಮಾತ್ರ ಮಾನ್ಯತೆ ಪಡೆದು, ಸ್ತ್ರೀ-ಪುರುಷರ ಅಸಮಾನತೆಗೆ ತನ್ನ ಕೊಡುಗೆಯನ್ನು ನೀಡಿದೆ. ಆದುದರಿಂದ ಮಹಿಳೆ ಗೃಹಕೃತ್ಯದ ಹೊರಗಿನ ದುಡಿಮೆಯಲ್ಲಿ ಪಾಲ್ಗೊಳ್ಳುವುದು ಅವಳ ವಿಮೋಚನೆಗೆ ದಾರಿಯಾದೀತು ಎಂದು ಭಾವಿಸಲಾಗಿತ್ತು. ಇಂದು ಉದ್ಯೋಗಸ್ಥ ಮಹಿಳೆಯರು ಎಷ್ಟು ಈ ಸಾಧನೆಯ ಹಾದಿಯಲ್ಲಿ ಹೆಜ್ಜೆ ಇರಿಸಿದ್ದಾರೆ ಎಂದು ಕೇಳಿಕೊಳ್ಳೋಣ. ತಿಂಗಳ ವೇತನದ ಪ್ರತಿ ವಿವರವನ್ನೂ ನೀಡಬೇಕಾದ, ಸಂಬಳವನ್ನು ತಂದೆ-ತಾಯಿ, ಗಂಡ, ಮಾವ ಇವರಿಗೆ ತಂದೊಪ್ಪಿಸಬೇಕಾದ ಅಥವಾ ತನ್ನ ಆದಾಯದ ವಿನಿಯೋಗದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಅವಕಾಶದಿಂದ ವಂಚಿತರಾದ, ತನ್ನ ಉದ್ಯೋಗದಲ್ಲಿ ಮುಂದುವರಿಯುವ ಅಥವಾ ಮುಂದುವರಿಯದಿರುವ ಬಗ್ಗೆ ಇತರರ ನಿರ್ಧಾರಗಳಿಗೆ ಅವಲಂಬಿತರಾದ ಮಹಿಳೆಯರು ವಿಮೋಚನೆಯ ಹಾದಿಯಲ್ಲಿ ಸಾಗಿದ್ದಾರೆ ಎನ್ನುವಂತಿದೆಯೇ ತನ್ನದೇ ಆದ ಸಮಯ, ಸ್ಥಳ, ಖರ್ಚು, ಕನಸುಗಳನ್ನು ಉಳಿಸಿಕೊಳ್ಳಲು ಅಸಮರ್ಥವಾಗುವ ಸ್ಥಿತಿ ವಿಮೋಚನೆಗೆ ಹೇಗೆ ಎಡೆ ಮಾಡಿಕೊಟ್ಟಿತು. ಮಹಿಳೆಯರು ಉನ್ನತ ಹುದ್ದೆಗಳಿಗೆ ಆಪೇಕ್ಷಿಸದಿರುವುದಕ್ಕೂ ಹಲವು ಒತ್ತಡಗಳಿವೆ. ವರ್ಗಾವಣೆಯ ಭಯ, ನಿರ್ಣಾಯಕ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿನ ಆಂತಕ, ಕುಟುಂಬದ ಒತ್ತಡ, ಸಹೋದ್ಯೋಗಿ ಪುರುಷರ ಅಸಹಕಾರದ ಆತಂಕ, ಹೀಗೆ ಹತ್ತು ಹಲವು ಅವಳ ಆಯ್ಕೆಯನ್ನು ನಿರ್ಬಂಧಿಸುತ್ತಿರುತ್ತವೆ.

ಉದ್ಯೋಗಸ್ಥ ಮಹಿಳೆಯರನ್ನು ಕೆಲವೊಮ್ಮೆ ಮನೆಯ ಸಣ್ಣ-ಪುಟ್ಟ ಹಣಕಾಸಿನ ಖರ್ಚು-ವೆಚ್ಚ ನಿಭಾಯಿಸುವುದರಲ್ಲೂ ಸೋಲುತ್ತಾರೆ. ಇದಕ್ಕೆ ಪರಿಹಾರ ಒಂದೇ ಮನೆಯ ಖರ್ಚು ನಿಭಾಯಿಸಲು ಕೆಲವು ನಿಯಮಿತ ಸೂತ್ರಗಳನ್ನು ಹಾಕಿಕೊಳ್ಳಬೇಕು. ತಮ್ಮ ಬಜೆಟ್‌ಗೆ ಅನ್ವಯ ವಾಗಬಹುದಾದ ಸೂತ್ರಗಳನ್ನು ಮಹಿಳೆ ತಾನೇ ಖುದ್ದಾಗಿ ತಯಾರಿಸಿಕೊಳ್ಳಬೇಕು. ಅದು ಯಾವ ಆಧಾರದ ಮೇಲಿರಬೇಕೆಂಬುದನ್ನು ಕುಟುಂಬದ ಹಿರಿಯರೊಂದಿಗೆ ಚರ್ಚಿಸಿ ಅಂತಿಮವಾಗಿ ನಿರ್ಧರಿಸಬೇಕು. ಅಂಥ ಕೆಲವು ಸೂತ್ರುಗಳು ಹೀಗಿವೆ-

- ಕುಟುಂಬದೊಳಗಿನ ಒಟ್ಟು ಸದಸ್ಯರು ಹಾಗೂ ಒಟ್ಟು ಆದಾಯ, ಖರ್ಚು-ವೆಚ್ಚದ ಬಗ್ಗೆ ಮನೆಯೊಡತಿಗೆ ತಿಳಿದಿರಬೇಕು.

- ಆದಾಯಕ್ಕೆ ತಕ್ಕಂತೆ ಖರ್ಚು ಹೊಂದಿಸಿಕೊಳ್ಳುವಾಗ ಖಾಯಂ ಖರ್ಚು ಅವಸರದ ಖರ್ಚು ಎಂದು ಎರಡು ಭಾಗಗಳಾಗಿ ಮಾಡಿಕೊಳ್ಳಬೇಕು.
- ತಿಂಗಳ ಮೊದಲ ವಾರದಲ್ಲಿ ಹಣವಿದೆ ಎಂದು ಮನಬಂದಂತೆ ಖರ್ಚು ಮಾಡುವುದು ತಪ್ಪು. ಆ ರೀತಿ ಖರ್ಚು ಮಾಡಿದರೆ ತಿಂಗಳ ಕೊನೆಯಲ್ಲಿ ಪರಿಪಾಟಲು ಪಡಬೇಕಾಗುತ್ತದೆ.
- ಖರೀದಿಸಬೇಕಾದ ಅವಶ್ಯ ವಸ್ತುಗಳ ಪಟ್ಟಿಯನ್ನು ಮಾರುಕಟ್ಟೆಗೆ ಹೋಗುವ ಮುನ್ನವೇ ಸಿದ್ಧಪಡಿಸಿಕೊಳ್ಳಿ. ಆ ವಸ್ತುಗಳು ಎಲ್ಲಿ ಸಿಗುತ್ತವೆ ಎಂಬುದನ್ನು ಮೊದಲು ಖಚಿತ ಪಡಿಸಿ ಕೊಳ್ಳಬೇಕು. ಇದರಿಂದ ಸಮಯ ಉಳಿತಾಯವಾಗುತ್ತದೆ.
- ಮನೆಯ ಮುಂದಿರುವ ಕೈತೋಟದಲ್ಲಿ ಅಗತ್ಯವಿರುವ ತರಕಾರಿ, ಹಣ್ಣು, ಹೂವುಗಳನ್ನು ಬೆಳೆದು ಅವುಗಳನ್ನು ಖರೀದಿಸುವ ಖರ್ಚು ಉಳಿಸಬಹುದು.
- ದುಡಿಯುವ ಮಹಿಳೆಯರು ಸಿದ್ಧ ತಿಂಡಿಗಳಿಗೆ ಮಾರುಹೊಗದೆ ಮನೆಯಲ್ಲಿ ತಿಂಡಿಗಳನ್ನು ತಯಾರಿಸಿಕೊಂಡು ತಿನ್ನಬೇಕು.
- ಅನವಶ್ಯಕ ವಸ್ತುಗಳ ಖರೀದಿಯನ್ನು ಕಡಿಮೆ ಮಾಡಿಕೊಳ್ಳಬೇಕು. ಯಾವುದೇ ವಸ್ತು ಖರೀದಿಸುವಾಗ ಅದರ ಉಪಯುಕ್ತತೆ ಮತ್ತು ಬಾಳಿಕೆಯ ಬಗ್ಗೆ ಮೊದಲೇ ಯೋಚಿಸಿರಬೇಕು.
- ದಿನ ಹಾಗೂ ವಾರದ ಖರ್ಚುಗಳನ್ನು ನಿಯಮಿತವಾಗಿ ಬರೆದಿಟ್ಟು ಯಾವ ಖರ್ಚನ್ನು ಕಡಿತ ಗೊಳಿಸಬಹುದಿತ್ತು ಎಂಬುದರ ಬಗ್ಗೆ ಲೆಕ್ಕ ಹಾಕಬೇಕು. ಅದರ ಆಧಾರದ ಮೇಲೆ ತಿಂಗಳ ಬಜೆಟ್ ತಯಾರಿಸುವುದರಿಂದ ಹಲವು ಸಲ ಏರುಪೇರಾದರೂ ಖರ್ಚಿನ ಮೇಲೆ ಹಿಡಿತ ಸಿಗುತ್ತದೆ.
- ಪ್ರಮುಖ ಹಬ್ಬಗಳಿಗೆ ಮಾತ್ರ ಹೆಚ್ಚು ಖರ್ಚು ಮಾಡಬೇಕು. ಹಬ್ಬವನ್ನು ಸರಳವಾಗಿ ಆಚರಿಸಿ. ಇದರಿಂದ ಹಣ ಉಳಿತಾಯವಾಗುತ್ತಲ್ಲದೆ, ಮನಸ್ಸಿಗೂ ಸಂತೋಷವಾಗುತ್ತದೆ.
- ನಗರ ಪ್ರದೇಶದಲ್ಲಿ ಮನೆಗೆಲಸದವರ ಸಂಬಳ ದುಬಾರಿ ಹಾಗಾಗಿ ಮಹಿಳೆ ಮನೆ ಕೆಲಸಗಳನ್ನು ತಾನೇ ಮಾಡಿಕೊಳ್ಳುವುದರಿಂದ ಖರ್ಚು ಕಡಿಮೆ ಮಾಡಿಕೊಳ್ಳಬಹುದು.
- ಮಕ್ಕಳಿಗೆ ಮನೆಯಲ್ಲಿಯೇ ನೀವೇ ಪಾಠ ಹೇಳಿದರೆ ಟ್ಯೂಷನ್ ಖರ್ಚನ್ನು ಉಳಿಸಬಹುದು.
- ಮಕ್ಕಳಿಗೆ ಉಡುಪು, ಆಟಿಕೆಗಳನ್ನು ತರುವಾಗಲೂ ಯೋಚಿಸಿ, ಅತಿ ಬೆಲೆಬಾಳುವ ಹಾಗೂ ಬೇಗ ಹಾಳಾಗುವ ಆಟದ ಸಾಮಾನುಗಳನ್ನು ಕೊಳ್ಳಬೇಡಿ.

- ಮನೆಗೆ ಅಗತ್ಯವಾದ ವಸ್ತುಗಳನ್ನು ಒಟ್ಟಿಗೆ ವ್ಯಾಪಾರದ ಅಂಗಡಿಯಲ್ಲಿ ಖರೀದಿಸಿದರೆ ಹಣ ಉಳಿತಾಯವಾಗುತ್ತದೆ.
- ಕೆಲವು ಹವ್ಯಾಸಗಳು ಮನೆಯ ಖರ್ಚಿಗೆ ಮೂಲವಾಗುತ್ತವೆ. ಇಂಥ ಹವ್ಯಾಸವನ್ನು ತೊರೆಯಿರಿ. ಹೊರಗಡೆ ಊಟ ತಿಂಡಿಯ ಖರ್ಚನ್ನು ಕಡಿಮೆ ಮಾಡಿ ಹಾಗೆಂದು ಫುಟ್‌ಪಾತ್ ಮೇಲಿನ ತಿಂಡಿ ತಿಂದು ಕಾಯಿಲೆಗೆ ಬೀಳಬೇಡಿ.
- ಉಳಿತಾಯದ ಹಣವನ್ನು ಬ್ಯಾಂಕ್‌ನಲ್ಲಿ ಇಟ್ಟರೆ ಅದಕ್ಕೆ ಬಡ್ಡಿಯೂ ಬರುತ್ತದೆ. ಆದರೆ ಹೆಚ್ಚಿನ ಬಡ್ಡಿಯ ಆಸೆಯಿಂದ ಅಪರಿಚಿತರಿಗೆ ಸಾಲವಾಗಿ ಹಣಕೊಟ್ಟು ಹಣ ಕಳೆದುಕೊಳ್ಳಬೇಡಿ.

ಆದಾಯ ಕಡಿಮೆ ಇರುವಾಗ ಅದಕ್ಕೆ ತಕ್ಕ ಜೀವನ ನಡೆಸುವುದು, ಆದಾಯ ಹೆಚ್ಚಾದಾಗ ಸೌಲಭ್ಯ ಸೌಕರ್ಯಗಳನ್ನು ಹೆಚ್ಚಿಸಿಕೊಳ್ಳುವುದನ್ನು ರೂಢಿಸಿಕೊಳ್ಳಬೇಕು. ಆರಕ್ಕೇರದ ಮೂರಕ್ಕಿಳಿಯದ ಮಧ್ಯಮ ವರ್ಗದ ಜೀವನವನ್ನು ಸಮತೋಲನದಲ್ಲಿ ನಡೆಸಿಕೊಂಡು ಹೋಗುವುದು ಪ್ರತಿ ಗೃಹಿಣಿಯ ಕರ್ತವ್ಯ.

ಪ್ರೀತಿ, ಪ್ರೇಮ, ಸಹಭಾಳ್ವೆಯ ಸಂಕೇತ ಕುಟುಂಬ. ಕುಟುಂಬವನ್ನು ನಿರ್ನಾಮ ಮಾಡಲು ಸಂಶಯದ ಪಿಶಾಚಿಯೊಂದೇ ಸಾಕು. ಆದ್ದರಿಂದ ಹೆಚ್ಚು ನಂಬಿಕೆಯಿಂದ ಪತ್ನಿಯನ್ನು ನೋಡಿಕೊಳ್ಳ ಬೇಕು. ನಿಮ್ಮ ಪತ್ನಿ ಸಣ್ಣಪುಟ್ಟ ತಪ್ಪು ಮಾಡಿದರೂ ಪರಸ್ಪರ ಅರಿತು, ಒಬ್ಬರು ಇನ್ನೊಬ್ಬರ ತಪ್ಪನ್ನು ಕ್ಷಮಿಸಿ ಪ್ರೀತಿಯಿಂದ ಜೀವಿಸುವುದೇ ಮಾನವ ಗುಣ. ಮನೆಗೆ ಬಂದ ಅತ್ತೆ, ಮಾವಂದಿರನ್ನು ಪ್ರೀತಿಯಿಂದ ಬರಮಾಡಿಕೊಳ್ಳುವುದರಿಂದ ನಿಮಗೊಂದೇ ಅಲ್ಲ, ಇತರರಿಗೂ ಸಂತೋಷವಾಗುವುದು. ಹೆಂಡತಿ ಮಾಡುವ ಒಳ್ಳೆ ಕೆಲಸ ಕಾರ್ಯಗಳಿಗೆ ಮೆಚ್ಚುಗೆ ವ್ಯಕ್ತಪಡಿಸಬೇಕೇ ಹೊರತು ಮದುವೆಯಾಗಬೇಕಾಗಿ ಬಂದ ಪರಿಸ್ಥಿತಿ ಅಥವಾ ಕಾರಣಗಳನ್ನು ಹೇಳಿ ಅವಳನ್ನು ಕೆಣಕುತ್ತಿರಬಾರದು. ದೂರದ ಊರಿನ ಪ್ರಯಾಣ ಮುಗಿಸಿ ಬರುವಾಗ ಹೆಂಡತಿಗೆ ಇಷ್ಟವಾದ ಕಾಣಿಕೆ ತರಲು ಮರೆಯಬೇಡಿ. ಹೆಂಡತಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದಾಗ ಆಕೆಯೂ ನಿಮಗೆ ಮಾತ್ರವಲ್ಲ, ಇಡೀ ಕುಟುಂಬಕ್ಕೆ ಪ್ರಾಧಾನ್ಯತೆ ನೀಡುತ್ತಾಳೆ. ಸಣ್ಣಪುಟ್ಟ ವಿಷಯಗಳಿಗೆ ಜಗಳವಾದಾಗ ಆ ಬಗ್ಗೆ ಪರಿಹಾರ ಹುಡಿಕಿ ಅದನ್ನು ಅಲ್ಲಿಯೇ ನಿವಾರಿಸಿಕೊಳ್ಳಿ. ಹೆಂಡತಿ ಸ್ನೇಹಜೀವಿಯಾದಷ್ಟು ಒಳ್ಳೆಯದು. ಪತ್ನಿಯೊಂದಿಗೆ ಯಾವುದೇ ಮುಚ್ಚುಮರೆಯಿಲ್ಲದೆ ಬಿಚ್ಚು ಮನಸ್ಸಿನವರಾಗಿರಬೇಕು. ಅಂದಾಗ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ದಂಪತಿ ಮಧ್ಯೆ ಮುಕ್ತ ಮನಸ್ಸಿನ ಚರ್ಚೆಗೆ ಅವಕಾಶವಿರಲಿ. 'ಹಸನ್ಮುಖಿ ಸದಾ ಸುಖಿ' ಎನ್ನುವಂತೆ ಕೆಲಸದಿಂದ ಮನೆಗೆ

ಬರುವಾಗ ಮುಗುಳ್ನಗೆ ನಿಮ್ಮದಾಗಿರಲಿ. ಹಾಗೆಯೇ ಬಿಡುವಿನ ವೇಳೆಯಲ್ಲಿ ಕೌಟುಂಬಿಕ ಪ್ರವಾಸ ಕೈಗೊಳ್ಳುವುದರಿಂದ ಹೆಂಡತಿ, ಮಕ್ಕಳ ಸಂತೋಷ ಇಮ್ಮಡಿಯಾಗುವುದು. ನಿಮ್ಮ ಹೆಂಡತಿಯ ಬಗ್ಗೆ ಯಾರಾದರೂ ಚಾಡಿ ಮಾತು ಹೇಳಿದಾಗ ಮೌನವಾಗಿದ್ದು ಆಕೆಗೆ ತಿಳಿಯದ ಹಾಗೆ ಆಕೆಯನ್ನು ಪರೀಕ್ಷಿಸಿ ನಿಜಾಂಶವನ್ನು ತಿಳಿದುಕೊಳ್ಳಿ.

ಕುಟುಂಬದ ಯಾವುದೇ ಸದಸ್ಯರ ಬಗ್ಗೆ ಗಂಡನಿಗೆ ದೂರು ಸಲ್ಲಿಸುವ ಬದಲು ಅವರನ್ನು ಅರಿತು, ತಿಳಿದು ಹೊಂದಾಣಿಕೆ ಮಾಡಿಕೊಂಡರೆ ಒಳಿತು. ಕುಟುಂಬದಲ್ಲಿ ನಿಮ್ಮ ಮಧ್ಯೆ ಯಾವುದೇ ತಪ್ಪು ತಿಳಿವಳಿಕೆ ಬಂದಲ್ಲಿ ಸಿಡುಕುವ ಬದಲು ತಾಳ್ಮೆಯಿಂದ, ಮೌನದಿಂದ ಇತರರನ್ನು ಅರ್ಥೈಸಲು ಪ್ರಯತ್ನಿಸಿ. ಯಾವುದೇ ಪ್ರಮುಖ ತೀರ್ಮಾನ ಕೈಗೊಳ್ಳುವಾಗ ಕುಟುಂಬದ ಸದಸ್ಯರಿಂದ ಸಲಹೆಗಳನ್ನು ಪಡೆಯಿರಿ. ಯಾವುದೇ ಕಾರಣಕ್ಕೂ ಇನ್ನೊಬ್ಬರ ಮುಂದೆ ಅತ್ತೆ ಮಾವಂದಿರನ್ನು ಹೀಯಾಳಿಸಬೇಡಿ. ಅನೇಕ ಬಾರಿ ಮೌನವಾಗಿರುವುದೇ ಎಲ್ಲಕ್ಕಿಂತಲೂ ಉತ್ತಮ. ಸೊಸೆಯೆಂದಾಕ್ಷಣ ಕುಟುಂಬದಲ್ಲಿ ಯಾವುದೇ ನಿರ್ಧಾರವನ್ನು ಕೈಗೊಳ್ಳುವಾಗ ಮೌನಿಯಾಗಿರಬೇಕಿಲ್ಲ. ಬದಲಿಗೆ, ಮಗಳಂತೆ ಒಳ್ಳೆಯ ಸಲಹೆ ಸೂಚನೆಗಳನ್ನು ನೀಡಿ ಕುಟುಂಬದ ಪ್ರತಿಯೊಬ್ಬರ ಬಗ್ಗೆ ಕಾಳಜಿ ಇರಲಿ, ನೀವು ಸಂಪಾದನೆ ಮಾಡುವವರಾಗಿದ್ದರೆ ಬಂದ ಹಣವನ್ನು ಮನೆಯ ಸಣ್ಣ-ಪುಟ್ಟ ಖರ್ಚಿಗಾಗಿ ಬಳಸುವುದರಿಂದ ಎಲ್ಲರ ಪ್ರೀತಿ, ವಿಶ್ವಾಸಗಳಿಗೆ ಕಾರಣರಾಗುವಿರಿ. ಕುಟುಂಬದ ಸದಸ್ಯರಲ್ಲಿ ಮನಸ್ತಾಪ ಉಂಟಾದಾಗ ಎಲ್ಲರನ್ನೂ ಒಂದಾಗಿಸಲು ಪ್ರಯತ್ನಿಸಿ. ಎಷ್ಟು ದೊಡ್ಡ ನೌಕರಿ ಹೊಂದಿದ್ದರೂ ಮನೆಯ ಕೆಲಸ ಕಾರ್ಯಗಳಲ್ಲಿ ಸ್ವಲ್ಪಮಟ್ಟಿಗಾದರೂ ಭಾಗಿಯಾಗಿ. ಪತಿಗಿಂತಲೂ ಹೆಚ್ಚಿನ ವಿದ್ಯಾಭ್ಯಾಸ ಮಾಡಿದರೂ ಅದು ಕುಟುಂಬಕ್ಕೆ ಸಹಾಯವಾಗಬೇಕೆಂಬುದು ನೆನಪಿರಲಿ, ಜಂಭಕೊಚ್ಚಿಕೊಳ್ಳಬೇಡಿ. ಸಹೋದ್ಯೋಗಿ ಗಳಿಗೆ ಪತಿಯನ್ನು ಪರಿಚಯಿಸಲು ಸಂಕೋಚ ಪಡಬೇಡಿ. ಆಗ ಮಾತ್ರ ದಾಂಪತ್ಯಕ್ಕೆ ಬೆಲೆ. ಹಾಗೆಯೇ ತವರು ಮನೆಯ ಶ್ರೀಮಂತಿಕೆಯನ್ನು ಪತಿಯ ಮುಂದೆ ಅನಗತ್ಯವಾಗಿ ಹೊಗಳಬಾರದು. ಇನ್ನೊಬ್ಬರ ಚಾಡಿಮಾತಿಗೆ ಕಿವಿಗೊಟ್ಟು ಗಂಡನೊಡನೆ ಸಂಶಯದ ದೃಷ್ಟಿಯಿಂದ ವರ್ತಿಸಬೇಡಿ. ಕುಟುಂಬದಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ದಿಟ್ಟತನದಿಂದ ಎದುರಿಸಿ. ಇದುದ್ದರಲ್ಲಿಯೇ ತೃಪ್ತಿ ಹೊಂದಿ ಸುಖ ಜೀವನ ನಡೆಸುವುದು ಲೇಸು ಎಂಬುದು ಗಮನದಲ್ಲಿರಲಿ. ನಾದಿನಿಯ ಶಾಲೆ ಕಾಲೇಜುಗಳಿಗೆ ಹೋಗುತ್ತಿದ್ದಲ್ಲಿ ಆಕೆ ಇಷ್ಟಾನುಸಾರ ಮಾರ್ಗದರ್ಶನ ನೀಡಿ.

ಪರಸ್ಪರರು ಕಷ್ಟ-ಸುಖಗಳಲ್ಲಿ ಸಮಭಾಗಿಯಾಗುವುದು. ಕುಟುಂಬದ ಕೆಲಸಗಳನ್ನು ಒಬ್ಬರ ಮೇಲೊಬ್ಬರು ಹೇರುವ ಮೂಲಕ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವ ಬದಲು ಪ್ರತಿಯೊಬ್ಬರೂ

ಜವಾಬ್ದಾರಿ ನಿಭಾಯಿಸಲು ಸಿದ್ಧರಾಗಿರುವುದು. ಕುಟುಂಬದಲ್ಲಿ ಯಾವುದೇ ತಾರತಮ್ಯ ಉಂಟಾದಾಗ ಆರೋಪ, ಪ್ರತ್ಯಾರೋಪ ಬದಲಿಗೆ ಸೂಕ್ತ ಸಲಹೆ ಸೂಚನೆಗಳೊಂದಿಗೆ ಕುಟುಂಬವನ್ನು ಸುಧಾರಿಸಿ ಕೊಳ್ಳಬೇಕು. ಕುಟುಂಬದಲ್ಲಿ ಊಟ, ಬಟ್ಟೆ-ಬರೆ ಇತ್ಯಾದಿ ವಿಷಯಗಳ ಬಗ್ಗೆ ಸಮಾನ ಆಸಕ್ತಿ ತೋರಿಸಬೇಕು ಮತ್ತು ಇತರರ ಭಾವನೆಗಳನ್ನು ಗೌರವಿಸಬೇಕು. ಕುಟುಂಬದಲ್ಲಿ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿ ಮಕ್ಕಳಿಗೆ ಪ್ರೋತ್ಸಾಹಿಸುವುದರ ಮೂಲಕ ಇತರ ಕೌಶಲ್ಯಗಳನ್ನು ಬೆಳಸಬೇಕು. ಕುಟುಂಬದ ಮೂಲಭೂತ ಆಶಯವಾದ "ಕೂಡಿ ಬಾಳು - ಹಂಚಿ ತಿನ್ನು" ತತ್ವವನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದೇ ಆದರೆ ನಮ್ಮದು ಸಮೃದ್ಧ ಕುಟುಂಬವಾಗುವು ದರಲ್ಲಿ ಸಂಶಯವಿಲ್ಲ. ಪರಸ್ಪರ ಅರಿತು, ಅಗತ್ಯವಾದರೆ ಕನಿಷ್ಠ ತ್ಯಾಗಕ್ಕಾದರೂ ಪ್ರತಿಯೊಬ್ಬರೂ ಸಿದ್ಧವಾದರೆ ಮಾತ್ರ ಕುಟುಂಬ ಜೀವನಕ್ಕೆ ಅರ್ಥ ಬರುತ್ತದೆ. ಕುಟುಂಬದೊಳಗೆ ಸ್ತ್ರೀ-ಪುರುಷರ ನಡುವೆ ನಡೆಯುವ ಕುಟುಂಬದ ಸವಲತ್ತುಗಳ ವಿತರಣೆಯನ್ನು ನಿರ್ಧರಿಸುವಲ್ಲಿ ಅವರುಗಳು ಕುಟುಂಬದ ಪ್ರಗತಿಗೆ ನೀಡುವ ಕಾಣಿಕೆ ಹಾಗೂ ಅವರಿಬ್ಬರ ಹಕ್ಕುದಾರಿಕೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಕುಟುಂಬದೊಳಗೆ ಸವಲತ್ತುಗಳ ವಿತರಣೆ ಮೇಲೆ 'ಕಾಣಿಕೆ' ಮತ್ತು 'ಹಕ್ಕುದಾರಿಕೆ'ಗಳ ಬಗೆಗಿನ ಅರಿವನ್ನು ಮೂಡಿಸುವ ವಾತಾವರಣವು ನಿರ್ಣಾಯಕ ಪ್ರಭಾವ ಬೀರುತ್ತದೆ. ಮಹಿಳೆಯರ ಹಕ್ಕುದಾರಿಕೆಯೆಂಬುದು ಆಕೆಯ ಸ್ವತಂತ್ರವಾಗಿ ಸಂಪಾದನೆ ಮಾಡುವ ಸಾಮರ್ಥ್ಯ, ಮನೆಯ ಹೊರಗೆ ಮಾಡುವ ದುಡಿಮೆ, ಶಿಕ್ಷಣ, ಆಸ್ತಿಯ ಹಕ್ಕು ಮುಂತಾದವುಗಳನ್ನು ಒಳಗೊಂಡಿರುತ್ತದೆ. ಮಹಿಳೆಯರ ಸಬಲೀಕರಣ ಹಾಗೂ ಸ್ವತಂತ್ರ ನಿಯೋಗವಾದಿ ಪಾತ್ರಗಳು ಉಂಟುಮಾಡುವ ಪರಿಣಾಮಗಳಲ್ಲಿ ಮಹಿಳೆಯರ ಮತ್ತು ಅವರಿಗೆ ಸರಿಸಮವಾಗಿರುವ ಪುರುಷರ ಬದುಕು ಮತ್ತು ಆ ಬದುಕಿನ ಸುಖ-ಸಂತೋಷಗಳಿಗೆ ಹಾನಿಯುಂಟು ಮಾಡುವ ಅನಿಷ್ಠಗಳನ್ನು ತೊಡೆದುಹಾಕುವ ಸಂಗತಿಗಳೂ ಸೇರಿವೆ. ನಿಯೋಗದ ಪರಿಣಾಮಕಾರಿ ಪಾತ್ರದಿಂದ ಲಾಭಪಡೆಯುವ ಗುಂಪಿನಲ್ಲಿ ಮಹಿಳೆಯರು ಇರುತ್ತಾರೆ. ಅವರ ಜೊತೆಗೆ ಆ ಗುಂಪು ಪುರುಷರು ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ.

ಮಹಿಳೆಯರ ಸಬಲೀಕರಣ ಹಾಗೂ ಅವರ ಸ್ವತಂತ್ರ ನಿಯೋಗವಾದಿಪಾತ್ರಗಳು ಕುಟುಂಬ ದೊಳಗೆ ಎಳೆಕಂದಮ್ಮಗಳ ಬದುಕನ್ನು ಉತ್ತಮಪಡಿಸುವ ಸಾಧ್ಯತೆಯಿದೆ. ಏಕೆಂದರೆ ಮಹಿಳೆಯರ ಸಬಲೀಕರಣದಿಂದ ಮಕ್ಕಳ ಮರಣ ಪ್ರಮಾಣ ತೀವ್ರ ಕಡಿಮೆಯಾಗುತ್ತದೆ ಎಂಬುದು ಅನೇಕ ಅಧ್ಯಯನಗಳಿಂದ ಪರಿಷ್ಕೃತಗೊಂಡ ಮಹಿಳೆಯರ ನಿಯೋಗವು ತನ್ನ ಸೀಮಿತ ವ್ಯಾಪ್ತಿಯನ್ನು ಸಾಮಾಜಿಕವಾಗಿ ಮಹತ್ವದ ವಿಷಯಗಳಾದ ಮಕ್ಕಳೆಷ್ಟರಬೇಕು ಎಂಬ ಸಂಗತಿಯನ್ನು ಒಳಗೊಂಡಂತೆ

ಪರಿಸರ ಸಂರಕ್ಷಣೆಯಂತಹ ವಿಷಯದ ಬಗ್ಗೆಯೂ ಚರ್ಚೆಯನ್ನು ಹುಟ್ಟುಹಾಕಬಲ್ಲದು. ಕುಟುಂಬ ದೊಳಗೆ, ಅದರ ಸದಸ್ಯರ ನಡುವೆ ಆಹಾರ, ಆರೋಗ್ಯ ಸೇವೆ ಹಾಗೂ ಇತರೆ ಸವಲತ್ತುಗಳು ಹೇಗೆ ಹಂಚಿಕೆಯಾಗುತ್ತವೆ ಎಂಬುದು ಮುಖ್ಯವಾದ ಸಂಗತಿಯಾಗಿದೆ. ಕುಟುಂಬದೊಳಗೆ ಮಹಿಳೆಯರು ಪುರುಷರು, ಬಾಲಕಿಯರು ಬಾಲಕರು, ಮಕ್ಕಳು ವಯಸ್ಕರು, ವೃದ್ದರು ಯುವಕರು ಇವರುಗಳಲ್ಲಿ ಕುಟುಂಬದ ಸಂಪನ್ಮೂಲಗಳನ್ನು ಯಾರ ಹಿತಾಸಕ್ತಿಗಳನ್ನು ಪೂರೈಸುತ್ತಾರೆ. ಎಂಬುದರ ಮೇಲೆ ವಿತರಣೆ ಸ್ವರೂಪ ನಿಂತಿರುತ್ತದೆ. ಕುಟುಂಬದೊಳಗೆ ವಿತರಣೆಯ ಸ್ವರೂಪ ಹೇಗಿರುತ್ತದೆಂಬುದು ಕುಟುಂಬದಲ್ಲಿ ಪರಂಪರಾಗಿತವಾಗಿ ನಡೆದುಕೊಂಡು ಬಂದಿರುವ ರೂಢಿ ಆಚರಣೆಗಳನ್ನು ಅವಲಂಬಿಸಿ ರುತ್ತದೆ. ಇದಲ್ಲದೆ ಆರ್ಥಿಕ ಸಂಗತಿಗಳು, ಮಹಿಳೆಯರು ಸಶಕ್ತೀಕರಣ ಮತ್ತು ಸಮುದಾಯಗಳು ರೂಢಿಸಿಕೊಂಡಿರುವ ಮೌಲ್ಯಗಳು ವಿತರಣೆ ಮೇಲೆ ಪ್ರಭಾವ ಬೀರುತ್ತಿರುತ್ತವೆ. ಕುಟುಂಬದೊಳಗೆ ನಡೆಯುವ ವಿತರಣೆಗೆ ಸಂಬಂಧಿಸಿದ ಸಮುದಾಯಗಳ ರೂಢಿ ಆಚರಣೆ ಹಾಗೂ ಸಂಪ್ರದಾಯಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುವ ಮಹಿಳಾ ಶಿಕ್ಷಣ, ಮಹಿಳಾ ಉದ್ಯೋಗ ಮತ್ತು ಮಹಿಳೆಯರ ಆಸ್ತಿಯ ಹಕ್ಕಿನಂತಹ ಸಾಮಾಜಿಕ ಸಂಗತಿಗಳು ಕುಟುಂಬದ ಬೇರೆ ಬೇರೆ ಸದಸ್ಯರ ಆರ್ಥಿಕ ಸಾಧನೆಯನ್ನು ನಿರ್ಧರಿಸುವ ನಿರ್ಣಾಯಕ ಸಂಗತಿಗಳಾಗಿವೆ. ಸ್ವಾತಂತ್ರ್ಯವೇ ಅಭಿವೃದ್ಧಿ ಎಂಬ ಪ್ರಮೇಯದ ಹಿನ್ನೆಲೆಯಲ್ಲಿ ಇಂತಹ ಸಂಬಂಧಗಳನ್ನು ಹೆಚ್ಚು ಸೂಕ್ಷ್ಮವಾಗಿ ಪರಿಶೀಲಿಸುವ ಅಗತ್ಯವಿದೆ. ಆಹಾರವನ್ನು ಕೊಂಡುಕೊಳ್ಳಲು ಅಗತ್ಯವಾದ ಸ್ವಾತಂತ್ರ್ಯವೆ ಇಲ್ಲದಿರುವ ಸ್ಥಿತಿಯನ್ನು ಹಕ್ಕುದಾರಿಕೆಯ ಕುಸಿತವೆಂದು ಕರೆಯಬಹುದು. ಹಕ್ಕುದಾರಿಕೆಯ ಕುಸಿತವೆಂಬ ಸೂತ್ರದ ಮೂಲಕ ಬರಗಾಲವನ್ನು ನಾವು ಖಂಡಿತವಾಗಿ ಅರ್ಥಮಾಡಿಕೊಳ್ಳಬಹುದು. ಈ ಹಕ್ಕುದಾರಿಕೆಯ ಕುಸಿತದಿಂದ ಕುಟುಂಬವೊಂದರ ಆಹಾರಕೊಳ್ಳುವ ಹಾಗೂ ಆಹಾರ ಸೇವಿಸುವ ಪ್ರಮಾಣ ತೀವ್ರ ಕಡಿಮೆಯಾಗಿ ಬಿಡುತ್ತದೆ. ಬರಗಾಲದಲ್ಲಿ ಕುಟುಂಬದೊಳಗೆ ಸದಸ್ಯರ ನಡುವಿನ ಆಹಾರ ವಿತರಣೆಯ ಸಮಸ್ಯೆ ಯಿದ್ದೇ ಇರುತ್ತದೆ. ನಿರಂತರವಾಗಿ ಕಾಡುತ್ತಲೆ ಇರುವ ಬಡತನವು ಅನೇಕ ಸಮುದಾಯಗಳ ಜೊತೆ ಶಾಶ್ವತವಾಗಿ ಉಳಿದುಬಿಟ್ಟಿರುತ್ತದೆ. ಇವೆಲ್ಲವೂ ಕುಟುಂಬದೊಳಗೆ ಬೇರೆ ಬೇರೆ ಸದಸ್ಯರ ಆಹಾರದ ಅಭಾವ ಹಾಗೂ ಅಪೌಷ್ಠಿಕತೆಯನ್ನು ನಿರ್ಧರಿಸುವ ಸಂಗತಿಗಳಾಗಿವೆ.

ಬಡತನದಿಂದ ನರಳುತ್ತಿರುವ ಹಿಂದುಳಿದ ಸಮಾಜಗಳಲ್ಲಿ ಲಿಂಗ ಸಂಬಂಧಿ ಅಸಮಾನತೆಗಳು ಆಹಾರ, ಆರೋಗ್ಯಸೇವೆ ಮುಂತಾದವುಗಳ ಅಸಮನತೆ ಹಂಚಿಕೆಯ ರೂಪದಲ್ಲಿ ಅಭಿವ್ಯಕ್ತವಾಗು ತ್ತಿರುತ್ತವೆ. ಇದರೊಳಗೆ ತೀವ್ರ ಸ್ವರೂಪದ ಸ್ತ್ರೀ ವಿರೋಧಿ ಪೂರ್ವಗ್ರಹಗಳು ಇರುತ್ತವೆ.

ಸಮಾಜದಲ್ಲಿ ಮಹಿಳೆಯರು ಪಡೆದಿರುವ ಸಾಮಾಜಿಕ ಸ್ಥಾನಮಾನ ಹಾಗೂ ಆರ್ಥಿಕ ಅಧಿಕಾರಗಳು ಸ್ತ್ರೀ ವಿರೋಧಿ ಪೂರ್ವಗ್ರಹಗಳ ಮೇಲೆ ಪ್ರಭಾವ ಬೀರುತ್ತಿರುತ್ತವೆ. ಪುರುಷರ ಅಧಿಪತ್ಯ ಅನೇಕ ಸಂಗತಿಗಳ ಜೊತೆ ಸಂಬಂಧ ಹೊಂದಿರುತ್ತದೆ. ಸಂಪಾದನೆ ಮಾಡುತ್ತಾರೆ ಎಂಬ ಕಾರಣದಿಂದ ಪುರುಷರಿಗೆ ಪ್ರಾಪ್ತವಾಗುವ ಸ್ಥಾನಮಾನ ಹಾಗೂ ಕುಟುಂಬದೊಳಗಿನ ಆರ್ಥಿಕ ಅಧಿಕಾರಗಳು ಇಲ್ಲಿ ತುಂಬಾ ಮುಖ್ಯವಾಗಿ ಕೆಲಸ ಮಾಡುತ್ತಿರುವ ಸಂಗತಿಗಳಾಗಿವೆ. ಇದಕ್ಕೆ ಸಮಾನಾಂತರವಾಗಿ ಮಹಿಳೆಯೂ ಕೂಡ ದುಡಿಯಬಲ್ಲಳು ಎಂಬುದು ಹಾಗೂ ಮನೆಯ ಹೊರಗೆ ಉದ್ಯೋಗದಿಂದ ಮಾಡುವ ಸಂಪಾದನೆ ಅವಳ ಸ್ಥಾನಮಾನವನ್ನು ಹಾಗೂ ಕುಟುಂಬದೊಳಗೆ ಸವಲತ್ತು. ಸಂಪನ್ಮೂಲ ಗಳ ಹಂಚಿಕೆಗಳಲ್ಲಿ ಅವಳ ಪಾಲನ್ನು ಉತ್ತಮಪಡಿಸುತ್ತದೆ. ಎಂಬುದು ಅನೇಕ ಅಧ್ಯಯನಗಳಿಂದ ತಿಳಿದುಬಂದಿದೆ. ಮನೆಗಳಲ್ಲಿ ಹೆಚ್ಚು ಗಂಟೆಗಳ ಕಾಲ ದುಡಿಯುವವರು ಮಹಿಳೆಯರು ಆಗಿದ್ದಾರೆ. ಈ ಮನೆ ವಾರ್ತೆ ದುಡಿಮೆಗೆ ಯಾವುದೇ ಕೂಲಿ ಇರುವುದಿಲ್ಲ. ಈ ಕಾರಣದಿಂದಾಗಿ ಕುಟುಂಬದ ಏಳಿಗಗೆ ಮಹಿಳೆಯರು ಮತ್ತು ಪುರುಷರು ನೀಡುವ ಇಂತಹ ಕಾಣಿಕೆಗಳು ಗಣನೆಗೆ ಒಳಗಾಗುವುದಕ್ಕೆ ಪ್ರತಿಯಾಗಿ ಅವಗಣನೆಗೆ ಒಳಗಾಗುತ್ತಿವೆ. ಮಹಿಳೆಯರು ಮನೆಯ ಹೊರಗೆ ದುಡಿಯ ತೊಡಗಿದಾಗ, ಉದ್ಯೋಗ ಮಾಡತೊಡಗಿದಾಗ ಕುಟುಂಬದ ಏಳಿಗೆಗೆ ಅವಳ ಸಂಪಾದನೆಯೂ ಕಾರಣವಾಗಿದೆ ಎಂಬ ಭಾವನೆ ಮೂಡತೊಡಗುತ್ತದೆ. ಆಕೆಯ ಮಾತಿಗೂ ಆಗ ಬೆಲೆ ಬರತೊಡಗುತ್ತದೆ. ಏಕೆಂದರೆ ಅವಳು ಈಗ ಬೇರೆಯವರನ್ನು ಅವಲಂಬಿಸಬೇಕಾಗಿಲ್ಲ. ಈ ರೀತಿಯಲ್ಲಿ ಮಹಿಳೆಯರ ಸ್ಥಾನಮಾನಗಳು ಉತ್ತಮಗೊಂಡಾಗ ಅದರ ಲಾಭ ಎಳೆಹಣ್ಣು ಮಕ್ಕಳಿಗೂ ಲಭಿಸುತ್ತದೆ. ಮನೆಯ ಹೊರಗೆ ದುಡಿಯುವುದರಿಂದ ಮತ್ತು ಉದ್ಯೋಗ ಮಾಡುವುದರಿಂದ ಪ್ರಾಪ್ತವಾಗುವ ಸ್ವಾತಂತ್ರ್ಯದಿಂದಾಗಿ ಮಹಿಳೆಯರ ದುಸ್ಥಿತಿ ಪರಿಹಾರವಾಗುವ ಸಾಧ್ಯತೆ ಇದೆ. ಒಂದು ನೆಲೆಯಲ್ಲಿ ದೊರೆತ ಸ್ವಾತಂತ್ರ್ಯವು ಬೇರೆ ಬೇರೆ ಬಗೆಯ ಸ್ವಾತಂತ್ರ್ಯ ಒದಗಲು ಕಾರಣವಾಗುತ್ತದೆ. ಮಹಿಳೆಯರ ಸಶಕ್ತೀಕರಣವು ಉತ್ತಮಗೊಳ್ಳುವುದರಿಂದ ಜನನ ಪ್ರಮಾಣವು ಕಡಿಮೆಯಾಗುತ್ತದೆ ಎಂಬುದನ್ನು ಅನೇಕ ಅಧ್ಯಯನ ಗಳು ತೋರಿಸಿಕೊಟ್ಟಿವೆ. ಇದರಲ್ಲಿ ಆಚರ್ಯ ಪಡಬೇಕಾದ ಸಂಗತಿಯೇನಿಲ್ಲ. ಏಕೆಂದರೆ ಪದೇ ಪದೇ ಮಕ್ಕಳನ್ನು ಹೆರುವ ಹಾಗೂ ಅದರ ಲಾಲನೆ-ಪಾಲನೆ ಮಾಡುವ ಒತ್ತಡಗಳಿಂದ ಜರ್ಜರಿತ ರಾಗುವವರು ಚಿಕ್ಕ ವಯಸ್ಸಿನ ಯುವತಿಯರಾಗಿದ್ದಾರೆ. ಇಂತಹ ಯುವತಿಯರಿಗೆ ಕೌಟುಂಬಿಕ ವ್ಯವಹಾರದಲ್ಲಿ ಹೆಚ್ಚಿನ ಅಧಿಕಾರ ಪ್ರಾಪ್ತವಾದರೆ ಕುಟುಂಬದೊಳಗೆ ಅವರ ಹಿತಾಸಕ್ತಿಗಳಿಗೆ ಹೆಚ್ಚಿನ ಗಮನ ದೊರೆಯ ತೊಡಗುತ್ತದೆ. ಇದರಿಂದಾಗಿ ಅವಳು ಪದೇ ಪದೇ ಹೆರಿಗೆ ನೋವು ಅನುಭವಿಸುವುದು ತಪ್ಪುತ್ತದೆ.

ಪಾರಂಪರಿಕ ಸಮಾಜ ಸ್ಥಿತ್ಯಂತರ ಹೊಂದುತ್ತಾ ಬಂದಂತೆಲ್ಲ ಹಳೆಯ ವ್ಯವಸ್ಥೆಗಳು ನಾಶವಾಗಿ ಹೊಸ ವ್ಯವಸ್ಥೆ ಹುಟ್ಟಿಕೊಂಡವು. ಹಳೆಯ ಸಾಮಾಜಿಕ ಸಿದ್ಧಾಂತಗಳು, ಸಾಮಾಜಿಕ ಸಂಬಂಧಗಳ ಬದಲಿಗೆ ಹೊಸ ಸಾಮಾಜಿಕ ಸಂಬಂಧಗಳು ಅಸ್ತಿತ್ವಕ್ಕೆ ಬಂದವು. ಇದರಲ್ಲಿ ಪ್ರಮುಖವಾಗಿ ನಮ್ಮ ಗಮನಕ್ಕೆ ಬರುವ ಅಂಶಗಳೆಂದರೆ ಹಳೆಯ ಮಾನದಂಡಗಳು ನಾಶವಾದಾಗ, ಅವು ಪ್ರತಿನಿಧೀಕರಿಸುತ್ತಿದ್ದ ಕೆಲವು ಕೌಟುಂಬಿಕ ವ್ಯವಸ್ಥೆಗಳು ಹಾಗೂ ಮೌಲ್ಯಗಳು ಹಾಗೆಯೇ ಉಳಿದು ಹೋದವು. ಆದರೆ ಈ ವ್ಯವಸ್ಥೆಯನ್ನು ಮತ್ತು ಮೌಲ್ಯವನ್ನು ಗುರುತಿಸಿ, ಅದಕ್ಕೆ ಮಾನ್ಯತೆ ನೀಡಿ ಅವನ್ನು ಗೌರವಿಸುವ ವಿಷಯದಲ್ಲಿ ಆಧುನಿಕ ವ್ಯವಸ್ಥೆ ನಿರಾಸಕ್ತಿ ವಹಿಸುವ ಮೂಲಕ ಮಹಿಳೆಯರಿಗೆ ಆಧುನಿಕ ಚಿಂತನೆ ಅನ್ಯಾಯವೆಸಗಿದೆ. ಸ್ತ್ರೀಯೊಬ್ಬಳು ಸಹಜ ಕ್ರಿಯೆಗಳಾದ ಮೈನರೆಯುವಿಕೆ, ಮುಟ್ಟು, ಗರ್ಭಧಾರಣೆ, ಹೆರಿಗೆ, ಶಿಶುಪಾಲನೆ ಮುಂತಾದ ಸಹಜ ಸ್ವಾಭಾವಿಕ ಗುಣಗಳು ಒಂದು ಸಮಾಜದ ನಿರ್ಮಾಣದಲ್ಲಿ ಅಮೂಲ್ಯವಾದ ಕೊಡುಗೆ ನೀಡುತ್ತದೆ. ಆದರೆ ಸಮಾನತೆ, ವ್ಯಕ್ತಿ ಕೇಂದ್ರಿತ ಉದ್ಯಮಶೀಲತೆ ಮುಂತಾದ ಮೌಲ್ಯ ಗುಣಗಳು ಸ್ತ್ರೀ ಸಹಜ ವಿಶಿಷ್ಟತೆಗಳನ್ನು ಮೌನವಾಗಿದ್ದುಕೊಂಡೆ ನಿರಾಕರಿಸುತ್ತಿವೆ. ನವಶಾಸ್ತ್ರೀಯ ಆರ್ಥಿಕ ಚಿಂತನೆಯ ಮೂಲ ಆಶಯಗಳಲ್ಲೇ ಮಹಿಳೆಯ ಅಸ್ತಿತ್ವದ ನಿರಾಕರಣೆಯನ್ನು ನಾವು ಗಮನಿಸಬೇಕು.

ಎಷ್ಟೋ ಮಹಿಳೆಯರಿಗೆ ಅವರ ಪತಿಯೆಂದಿರೂ ಅವಳು ಮಾಡುವ ಕೆಲಸಕ್ಕಿಂತಲೂ ಅವಳು ತರುವ ಸಂಬಳವೇ ಅವರಿಗೆ ಹೆಚ್ಚು ಇಷ್ಟ. ಮಹಿಳೆಯರು ಸಂಪಾದಿಸಬೇಕು ಆದರೆ ಕೆಲಸಕ್ಕೆ, ಉದ್ಯೋಗಕ್ಕೆ ಆದ್ಯತೆ ಕೊಡಬಾರದು ಎಂಬ ವಿಚಿತ್ರ ತರ್ಕ ಮಾಡುತ್ತಾರೆ. ಕ್ಷುಲ್ಲಕ ಕಾರಣಗಳಿಗಾಗಿ ಕೆಲಸಕ್ಕೆ ರಜೆ ಹಾಕು ಎಂದು ಹೇಳುತ್ತಿರುತ್ತಾ. ಈ ರೀತಿ ಪದೇ ಪದೇ ರಜೆ ಹಾಕುವುದರಿಂದ ಮೇಲ್ವಿಚಾರಕರು ಸುಮ್ಮನಿರುತ್ತಾರೆಯೇ, ತಮಗೆ ಒಪ್ಪಿಸಿರುವ ಜವಾಬ್ದಾರಿಗಳ ಗತಿ ಏನು? ಎಂದು ಹೇಳಿದರೆ, "ಓಹೋ ನಿನ್ನಿಂದಲೇ ಆ ಆಫೀಸು ನಡೆಯುವುದು; ನೀನಿಲ್ಲಿದ್ದರೆ ಅದು ಮುಚ್ಚಿ ಹೋಗುತ್ತದೆ" ಎಂದು ಗೇಲಿ ಮಾಡುತ್ತಾರೆ. ಮಹಿಳೆಯರು ಕೆಲಸ ಮುಗಿಸಿ, ಸುಸ್ತಾಗಿ ಮನೆಗೆ ಬಂದರೆ ಅಡುಗೆ ಕೆಲಸದಲ್ಲಿ ಪತಿ ಸ್ವಲ್ಪವೂ ಸಹಾಯ ಮಾಡುವುದಿಲ್ಲ. ಕೆಲಸ ಜಾಸ್ತಿ ಸಹಾಯ ಮಾಡಬಾರದೆ ಎಂದರೆ, "ಈ ಕೆಲಸ ಬಿಟ್ಟುಬಿಡು; ನಿನ್ನ ಸಂಬಳದಿಂದ ನಾವು ಬದುಕಬೇಕಿಲ್ಲ" ಎನ್ನುತ್ತಾರೆ. ಆದರೆ ಅದೇ ಇವರ ಸಂಬಳ ಬಂದ ದಿನ, ಪೂರ್ತಿಯಾಗಿ ಅದನ್ನು ಅವರ ಕೈಯಲ್ಲೇ ಇಡಬೇಕು. ಸ್ವ-ಇಚ್ಛೆಯಿಂದ ತಾನು ಒಂದು ರೂಪಾಯಿಯನ್ನು ಖರ್ಚು ಮಾಡುವ ಹಾಗಿಲ್ಲ. "ಹೆಂಗಸರಿಗೆ ಹಣಕಾಸಿನ ವಿಚಾರದಲ್ಲಿ ಸ್ವಾತಂತ್ರ್ಯ ಕೊಡಬಾರದು. ಕೊಟ್ಟರೆ ಅಹಂಕಾರ ಬಂದು,

ಗಂಡನ ಮಾತನ್ನು ಮೀರಿ ನಡೆಯುತ್ತಾರೆ ಎಂಬುದು ಕೆಲವು ಯಜಮಾನರ ನಿಲುವು; ಹೀಗಾಗಿ ತಮಗೆ ಮನೆ ಒಂದು ನರಕವಾಗಿದೆ" ಎಂದು ಹೇಳುತ್ತಾರೆ. ತಮ್ಮ ಮನೆಯ ಸ್ಥಿತಿಗಾಗಿ, ಸಾಲ ತೀರಬೇಕಾದರೆ ಮಹಿಳೆಯರು ದುಡಿಯಲೇ ಬೇಕು. ಪ್ರತಿಷ್ಠೆಗೆ ಬಿದ್ದು ಮಕ್ಕಳನ್ನು ದುಬಾರಿ ಕಾನ್ವೆಂಟಿಗೆ ಸೇರಿಸಿದ್ದಾಯಿತು. ಅವರ ಪುಸ್ತಕ, ಸಮವಸ್ತ್ರ, ಟ್ಯೂಶನ್ ಫೀಸ್ ನಮ್ಮ ಕೈಕಟ್ಟುತ್ತಿದೆ. ಈ ಕಾಲದಲ್ಲಿ ಒಬ್ಬರು ದುಡಿದು ಸಂಸಾರ ನಿಭಾಯಿಸುವುದು ಸಾಧ್ಯವಿಲ್ಲ ಅಂತಾರೆ. ತಮ್ಮ ಪತಿಯಂದಿರು ಹೊರಗೆ, ಒಳಗೆ ದುಡಿದು ದುಡಿದೂ ತಮಗೆ ಸಾಕಾಗಿ ಹೋಗಿದೆ. ಇವರು ಮನೆಯಲ್ಲಿದ್ದರೂ ಒಂದು ಕಡ್ಡಿಯನ್ನು ಈ ಕಡೆಯಿಂದ ಆ ಕಡೆಗೆ ಎತ್ತಿಡುವುದಿಲ್ಲ. ಹೆಂಡತಿ ಹೊರಗೆ ದುಡಿಯುತ್ತಾಳೆ. ಅವಳಿಗೆ ಮನೆಯ ಕೆಲಸದಲ್ಲಿ ಕಿಂಚಿತ ಸಹಾಯ ಮಾಡೋಣ ಅನ್ನೋ ಬುದ್ದಿ ಈ ಗಂಡಸರಿಗೆ ಏಕೆ ಇರುವುದಿಲ್ಲ" ಎನ್ನುತ್ತಾರೆ. ಇನ್ನೊಂದು ಅಂದರೆ ಒಬ್ಬ ಮಹಿಳೆಗೆ ವಿವಾಹವಾಗುವಾಗಲೇ ಅವಳ ಪತಿಯಾದವನಿಗೆ ಎಲ್ಲಾ ವಿಷಯ ತಿಳಿದಿರುತ್ತದೆ. ಅಂದರೆ ಮಹಿಳೆ ತನ್ನ ಪತಿಗಿಂತ ಹೆಚ್ಚಿಗೆ ಓದಿರುವುದು, ಉನ್ನತ ಹುದ್ದೆಯಲ್ಲಿರುವುದು ಅವರುಗಳಿಗೆ ಗೊತ್ತಿರುತ್ತದೆ. ಅದನ್ನು ಮಹಿಳೆಯರು ಬಾಯಿಬಿಟ್ಟು ಹೇಳಿ, ಮನಪೂರ್ವಕವಾಗಿ ಒಪ್ಪಿಗೆಯಾದರೆ ವಿವಾಹವಾಗಿ, ಇಲ್ಲದಿದ್ದರೆ ಬೇಡ ಎಂದಿದ್ದರು. ತಮ್ಮ ಹೆಂಡತಿ ತಮಗಿಂತ ಮೇಲ್ಮಟ್ಟದಲ್ಲಿದ್ದಾರೆ, ಅದು ತಮಗೆ ಹೆಮ್ಮೆಯಲ್ಲವೇ ಎಂದು ಹೇಳಿರುತ್ತಾರೆ. ಮದುವೆಯಾದ ಸ್ವಲ್ಪ ದಿನಗಳಲ್ಲಿ ಇದರಿಂದ ವಿಮುಖ ರಾಗುತ್ತಾರೆ. ಆಫಿಸ್ ಬಿಟ್ಟರೆ ಹಂಡತಿ ನೇರವಾಗಿ ಮನೆಗೆ ಬರಬೇಕು. ತಲೆ ಎತ್ತಿಯಾರೊಂದಿಗೂ ಮಾತನಾಡಬಾರದು. ಸಹೋದ್ಯೋಗಿಗಳೊಂದಿಗೆ ಯಾವುದೇ ಸಾಮಾಜಿಕ ಸಮಾರಂಭಗಳಲ್ಲಿ ಭಾಗವಹಿಸಬಾರದು. ಆಫಿಶಿಯಲ್ ಪ್ರೋಗ್ರಾಂ ಅಂತ ಒಂಟಿಯಾಗಿ ಬೇರೆ ಊರಿಗೆ ಹೋಗಬಾರದು. ಇತ್ಯಾದಿ ಹಲವು ನಿಯಮಗಳನ್ನು ಮಹಿಳೆ ಮೇಲೆ ಹೇರುವರು. ಅವಳು ಪ್ರತಿಭಟಿಸಿದರೆ, ತನಗೆ ಸಂಸಾರ ಎಷ್ಟು ಮುಖ್ಯವೋ, ತನ್ನ ಕೆರಿಯರ್ ಕೂಡಾ ಅಷ್ಟೇ ಮುಖ್ಯ ಎಂದೇ ಹೇಳುತ್ತಾರೆ. ಅದಕ್ಕೆ ಇವರು ಒಪ್ಪಲಿಲ್ಲ ಅಂದರೆ ಶುರುವಾಗುತ್ತದೆ ಲಟಾಪಟ. ಮಹಿಳೆಯರು ಅವರ ದಾರಿಗೆ ಬರದದ್ದನ್ನು ಕಂಡು, ಕೋಪೊದ್ರೇಕದಿಂದ ತನ್ನನ್ನು ಬಾಯಿಗೆ ಬಂದಂತೆ ನಿಂದಿಸಿದರು. ಕೊನೆ ಕೊನೆಗೆ ಅವರ ಶೀಲದ ಬಗ್ಗೆ ಹಗುರವಾಗಿ ಮಾತನಾಡತೊಡಗಿದರು.

ಇಂದು ಮಹಿಳೆಯರು ಉದ್ಯೋಗ ಮಾಡುವುದು ಸರ್ವೇಸಾಮಾನ್ಯವಾಗುತ್ತಿದೆ. ಗಂಡ ಹೆಂಡತಿ ಇಬ್ಬರೂ ದುಡಿಯದಿದ್ದರೆ, ಸಂಸಾರ ರಥ ಹೇಗೆ ಸಾಗಬೇಕು ಎಂದು ಶ್ರೀಮಂತ ವರ್ಗದವರನ್ನು ಬಿಟ್ಟು ಉಳಿದವರೆಲ್ಲರೂ ಹೇಳತೊಡಗಿದ್ದಾರೆ. ಕೆಲಸದಲ್ಲಿರುವ ಹುಡುಗಿ ಬೇಕು ಎಂಬುದು

ಮದುವೆಯಾಗ ಬಯಸುವ ವರಗಳ ಬೇಡಿಕೆ. ವಿದ್ಯಾಭ್ಯಾಸದಲ್ಲಿ ಹುಡುಗರಿಗಿಂತ ಮುಂದಿರುವ ಹುಡುಗಿಯರು, ತಮ್ಮ ಓದು ವ್ಯರ್ಥವಾಗಬಾರದು ಎಂದು ಉದ್ಯೋಗಸ್ಥರಾಗುವುದಕ್ಕೆ ಸಹಜವಾಗಿ ಇಷ್ಟಪಡುತ್ತಾರೆ. ಹೀಗಾಗಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರು ದುಡಿಯುವುದನ್ನು ಕಾಣಬಹುದಾಗಿದೆ. ಸ್ತ್ರೀ ಹೊರಗಡೆ ಹೋಗಿ ಕೆಲಸ ಮಾಡುವುದು ಸಾಂಪ್ರದಾಯಿಕ ದೃಷ್ಟಿಯಿಂದ ಸರಿ ಅಲ್ಲ ಎಂದು ನಂಬುವ ಗಂಡ, ಅತ್ತೆ ಮಾವಂದಿರು ಸ್ತ್ರೀಗೆ ಮಗ್ಗುಲ ಮುಳ್ಳಾಗಬಲ್ಲರು. ಸ್ತ್ರೀಯ ಕಷ್ಟ, ನೋವುಗಳಿಗೆ ಅವರು ಸ್ಪಂದಿಸುವುದಿಲ್ಲ, ಆಕೆಗೆ ನೆರವಾಗುವುದಿಲ್ಲ. ಈರ್ಷ್ಯೆಯಿಂದ ಆಕೆಯತ್ತ ನೋಡುತ್ತಾರೆ. ಸ್ತ್ರೀಗೆ ಸಂಪಾದಿಸುವ ಅವಕಾಶ ಕೊಡಲು ಗಂಡ ಮತ್ತು ಆತನ ಮನೆಯವರು ಒಪ್ಪಿದರೂ, ಆಕೆಗೆ ಆರ್ಥಿಕ ಸ್ವಾತಂತ್ರ್ಯ ನೀಡಲು ಸುತಾರಾಂ ಒಪ್ಪುವುದಿಲ್ಲ. ಸಂಪಾದಿಸಿದ ಹಣವನ್ನು ಆಕೆ, ತನ್ನದೇ ಆದ ರೀತಿಯಲ್ಲಿ ಖರ್ಚು ಮಾಡುವಂತಿಲ್ಲ. ಹಣವನ್ನು ಗಂಡನಿಗೆ ಒಪ್ಪಿಸಿ ಶರಣಾಗಬೇಕು. ಸಾಕಷ್ಟು ಜನ ಸ್ತ್ರೀಯರು ಅನಿವಾರ್ಯವಾಗಿ ಉದ್ಯೋಗಸ್ಥ ರಾಗುತ್ತಾರೆ. ತಮ್ಮ ಓದು ವ್ಯರ್ಥವಾಗುತ್ತದೆ ಎಂದೋ, ಹಣದ ಅಗತ್ಯಕ್ಕಾಗಿಯೋ ಅಥವಾ ಇತರರ ಒತ್ತಾಯಕ್ಕಾಗಿಯೇ ಉದ್ಯೋಗ ಹಿಡಿಯುತ್ತಾರೆ. ಆದರೆ ಮನಸ್ಸಿನೊಳಗೆ ತಾನು ಗೃಹಿಣಿಯಾಗಿ ಮನೆಯಲ್ಲಿದ್ದರೆ ಚೆನ್ನಾಗಿತ್ತೆಂದು ಕೊಳ್ಳುತ್ತಾರೆ. ಉದ್ಯೋಗವನ್ನು ಪ್ರೀತಿಸಿ, ಅದನ್ನು ಮಾಡಿ ತೃಪ್ತಿ, ಹೆಮ್ಮೆಪಡುವ ಮನೋಭಾವವನ್ನು ಬೆಳೆಸಿಕೊಳ್ಳುವುದಿಲ್ಲ. ಗೊಣಗಿಕೊಂಡು ಕೆಲಸಕ್ಕೆ ಹೋಗುತ್ತಾರೆ. ಕೆಲಸ ಮುಂದುವರೆಸಲೋ, ಬಿಟ್ಟುಬಿಡಲೋ ಎಂಬ ದ್ವಂದ್ವ ಪ್ರತಿದಿನ ಅವರನ್ನು ಕಾಡುತ್ತಿರುತ್ತದೆ. ಮಹಿಳಾ ಉದ್ಯೋಗಿಗಳ ಬಗ್ಗೆ ಪುರುಷ ಸಹೋದ್ಯೋಗಿಗಳು ಮತ್ತು ಮೇಲಾಧಿಕಾರಿಗಳ ಧೋರಣೆ ಎಷ್ಟೋ ವೇಳೆ ಚೆನ್ನಾಗಿರುವುದಿಲ್ಲ. ಮಹಿಳೆ ಮನೆಯಲ್ಲಿರಲೇ ಲಾಯಕ್, ತಮ್ಮ ಸರಿಸಮಕ್ಕೆ ಅವಳು ಬರುವುದು ಬೇಡ, ಮಹಿಳೆಯರು ಮಂದಗತಿಗಳು ಇತ್ಯಾದಿ ಅವೈಜ್ಞಾನಿಕ ಹಾಗೂ ಪುರುಷ ಪ್ರತಿಷ್ಠೆಯನ್ನು ವೈಭವೀಕರಿಸುವ ನಿಲುವನ್ನು ಅವರು ಹೊಂದಿರುತ್ತಾರೆ. ಪುರುಷರ ಅವಕಾಶಗಳನ್ನು ಸ್ತ್ರೀಯರು ಲಪಟಾಯಿಸಿದ್ದಾರೆ ಎಂದು ಬಹಿರಂಗವಾಗಿಯೇ ಮತ್ಸರ ಸೂಚಿಸುವ ಪುರುಷರ ಸಂಖ್ಯೆ ಕಡಿಮೆ ಏನಿಲ್ಲ. ಹೀಗಾಗಿ ಕೆಲಸ ಮಾಡುವಾಗ ಪ್ರತಿ ಸಂದರ್ಭದಲ್ಲಿ ಪ್ರತಿದಿನ, ಪುರುಷ ಸಹೋದ್ಯೋಗಿ, ಮೇಲಾಧಿಕಾರಿಗಳ ಟೀಕಾಸ್ತ್ರಗಳನ್ನು, ಅಸಹಕಾರವನ್ನು ಮಹಿಳೆ ಎದುರಿಸಬೇಕಾಗುತ್ತದೆ. ಮಹಿಳೆಗೆ ಬೇಕಾದ 'ಪ್ರೈವೆಸಿ' ಅಥವಾ ಕೆಲವು ಸೌಲಭ್ಯಗಳು ಎಷ್ಟೋ ಉದ್ಯೋಗ ಸ್ಥಳಗಳಲ್ಲಿ ಇರುವುದೇ ಇಲ್ಲ. ಇದು ಆಕೆಯ ಮನೋಕ್ಲೇಶವನ್ನು ಹೆಚ್ಚಿಸುತ್ತದೆ. ಇನ್ನು ಮಹಿಳೆಯ ಕೈ ಕೆಳಗೆ ಕೆಲಸ ಮಾಡಬೇಕಾದ ಪುರುಷ ಉದ್ಯೋಗಿಗಳಂತೂ ಇದು ತಮ್ಮ

ಪುರುಷತನಕ್ಕೆ ಅವಮಾನ ಎಂದು ಭಾವಿಸುತ್ತಾರೆ. ಆಕೆಯ ಆಣತಿಗಳನ್ನು ಬೇಕೆಂತಲೇ ಪಾಲಿಸುವುದಿಲ್ಲ. ಅವರನ್ನು ಶಿಸ್ತಿಗೆ ಒಳಪಡಿಸಿ, ಅವರಿಂದ ಕೆಲಸ ಮಾಡಿಸುವಲ್ಲಿ ಮಹಿಳೆ ದಣಿಯಬೇಕಾಗುತ್ತದೆ. ಆಕೆ ಮಾನಸಿಕ ಒತ್ತಡ ಏರತೊಡಗುತ್ತದೆ.

ಮನೆಯಿಂದ ಹೊರಕ್ಕೆ ಕಾಲಿಡುವ ಯುವ ಮಹಿಳೆ ರಸ್ತೆಯಲ್ಲಿ, ಬಸ್, ರೈಲುಗಳಲ್ಲಿ ಹೋಟೆಲ್, ಮಾರ್ಕೆಟ್, ಬಸ್‌ನಿಲ್ದಾಣಗಳಂತಹ ಸಾರ್ವಜನಿಕ ಸ್ಥಳಗಳಲ್ಲಿ ಆಫೀಸ್‌ನಲ್ಲಿ ನೇರ ಅಥವಾ ಪರೋಕ್ಷ ಲೈಂಗಿಕ ಕಿರುಕುಳಕ್ಕೆ ಒಳಗಾಗುವ ಸಂಭವ ಹೆಚ್ಚು. ಆಕೆ ಇತರರೊಡನೆ ಮಾತು, ನಡವಳಿಕೆಯನ್ನು ಕಡಿಮೆ ಮಾಡಿದರೆ 'ಜಂಬ, ಅಹಂಕಾರ' ಇವಳಿಗೆ ಎಂಬ ಟೀಕೆ ಬಂದರೆ, ಹೆಚ್ಚು ಮಾತು, ಸಲೀಸು, ಸ್ನೇಹಪರ ನಡವಳಿಕೆ ತೋರಿಸದಿದ್ದರೆ "ಆಕೆಯ ನಡತೆ ಚೆನ್ನಾಗಿಲ್ಲ" ಎಂಬ ಬಿರುದು ಬರುತ್ತದೆ. ಎಲ್ಲಾ ಸ್ಥಳಗಳಲ್ಲಿ ಕಂಡುಬರುವ ಕಾಮುಕರ ಕಾಮದೃಷ್ಟಿ ಆಕೆಯನ್ನು ಕಾಡಬಹುದು. ಇದು ಆಕೆಗೆ ಸಾಕಷ್ಟು ಮಾನಸಿಕ ಹಿಂಸೆಯನ್ನುಂಟು ಮಾಡುತ್ತದೆ. ಸ್ತ್ರೀಯ ಕೆಲವು ನೈಸರ್ಗಿಕ ಬದಲಾವಣೆ ಕ್ರಿಯೆಗಳು ಋತುಚಕ್ರ, ಗರ್ಭಧಾರಣೆ, ಬಾಣಂತಿತನ ಇತ್ಯಾದಿ ಹಾಗೂ ಆಕೆಯಿಂದ ಸಾಂಪ್ರದಾಯಿಕ ನಡಳಿಕೆಯನ್ನು ನಾಚಿಕೆ, ಹಿಂಜರಿಕೆ, ತ್ಯಾಗ, ಕ್ಷಮೆ, ಧೈರ್ಯ ತೋರದೆ ಭಯ ವ್ಯಕ್ತಪಡಿಸುವುದು ಇತ್ಯಾದಿ. ಅಪೇಕ್ಷಿಸುವ ಸಮಾಜ, ಮಹಿಳೆ ಮುನ್ನುಗ್ಗಲು, ಸ್ಪರ್ಧಿಸಲು, ಹೊಸತನ್ನು ಸಾಧಿಸಲು ತನ್ನ ಕೆರಿಯರ್‌ನಲ್ಲಿ ಮೇಲೆರಲು ಅಡ್ಡಗಾಲು ಹಾಕುತ್ತದೆ. ಉದ್ಯೋಗಸ್ಥೆ ಮಹಿಳೆ ಮಾನಸಿಕ ಸಮಸ್ಯೆಗಳ ನಿವಾರಣೆ ಆಗಬೇಕಾದರೆ ಈ ಸಮಸ್ಯೆಗಳನ್ನುಂಟು ಮಾಡುವ ಕುಟುಂಬ, ಸಮಾಜದ ಧೋರಣೆಗಳು ಬದಲಾಗಬೇಕು. ಮೊದಲನೆಯದಾಗಿ ಸ್ತ್ರೀ ತನ್ನ ದ್ವಂದ್ವಂವನ್ನು ಬಿಟ್ಟು ಉದ್ಯೋಗ ಮಾಡಲು ತಾನು ಸಮರ್ಥಳು, ಉದ್ಯೋಗಸ್ಥೆಯಾಗುವುದು ತನ್ನ ಹಕ್ಕು ಎಂದು ತಿಳಿಯಬೇಕು. ಇತರರೊಡನೆ ಸ್ಪರ್ಧಿಸಲು, ಮುನ್ನುಗ್ಗಲು ಹಿಂಜರಿಯಬಾರದು. ಗಂಡಂದಿರು, ಅತ್ತೆ-ಮಾವಂದಿರು "ಅಕ್ಕಿಯ ಮೇಲೂ ಆಸೆ, ನೆಂಟರ ಮೇಲೂ ಪ್ರೀತಿ" ಎಂಬ ಧೋರಣೆ ಬಿಡಬೇಕು. ಹೆಂಡತಿಯು ಸಂಪಾದಿಸಬೇಕು ಎನ್ನುವುದಾದರೆ ಆಕೆಗೆ ಪ್ರೋತ್ಸಾಹ ಹಾಗೂ ಕೆಲವು ವಿಶೇಷ ಸವಲತ್ತುಗಳನ್ನು ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಕೊಡಲು ಮುಂದಾಗಬೇಕು. ಮನೆ ಕೆಲಸಗಳು ಮತ್ತು ಮಕ್ಕಳ ಲಾಲನೆ, ಪಾಲನೆಯನ್ನು ಪೂರ್ಣವಾಗಿ ಆಕೆಯ ಮೇಲೆ ಹಾಕದೆ, ತಾವೂ ಜವಾಬ್ದಾರಿಯನ್ನು ಹೊರಬೇಕು. ದುಡಿದು, ದಣಿದು ಬರುವ ಆಕೆಗೆ ಪ್ರೀತಿ, ಮಮತೆ, ಆಸರೆಯನ್ನು ತೋರಿಸಬೇಕು. ಉದ್ಯೋಗಸ್ಥ ಮಹಿಳೆಗೆ ವೇಳೆ ಅತ್ಯಮೂಲ್ಯ. ತನ್ನ ವೇಳೆಯನ್ನು ಸರಿಯಾಗಿ ಬಳಸಿಕೊಳ್ಳುವ ಯೋಜನೆ ಇರಬೇಕು.

ಮೊದಲೇ ವ್ಯವಸ್ಥಿತವಾಗಿ ತನ್ನೆಲ್ಲ ಚಟುವಟಿಕೆಯನ್ನು ಯೋಜಿಸಿಕೊಂಡರೆ, ಮಾನಸಿಕ ಒತ್ತಡ ಕಡಿಮೆಯಾಗುತ್ತದೆ. ಹೆಚ್ಚು ಶ್ರಮ, ವೇಳೆ ತೆಗೆದುಕೊಳ್ಳದ ತಿಂಡಿ ಪದಾರ್ಥಗಳನ್ನು ತಯಾರು ಮಾಡುವುದು, ಮನೆಗೆಲಸಗಳ ಒಂದು ಪಾಲನ್ನು ಗಂಡ, ಅತ್ತೆ ಮಾವಂದಿರಿಗೆ ಬಿಡುವುದು, ಮನೆಗೆಲಸಗಳನ್ನು ಎಲ್ಲರೂ ಒಟ್ಟಿಗೆ ಮಾಡುವುದು, ಒಟ್ಟಿಗೆ ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು. ರಜೆಯ ಸಂಪರ್ಕ ಬಳಕೆ, ಉದ್ಯೋಗ ಸ್ಥಳದ ಸಮಸ್ಯೆಗಳನ್ನು ಗಂಡನೊಂದಿಗೆ ಆಗಾಗ ಚರ್ಚಿಸಿ, ಆತನ ಆಸರೆ ಮಾರ್ಗದರ್ಶನವನ್ನು ಪಡೆಯುವುದು. ತಾನು ಮಾಡುವ ಕೆಲಸವನ್ನು ಪ್ರೀತಿಸಿ, ಅದರ ಬಗ್ಗೆ ಹೆಮ್ಮೆಪಡುವುದು. ಉದ್ಯೋಗ ತೃಪ್ತಿ(Job Satisfaction)ಯನ್ನು ಸಾಧಿಸುವುದು ಇವುಗಳಿಂದ ಸಮಸ್ಯೆಗಳು ಹಗುರವಾಗುತ್ತವೆ.

ಮಹಿಳೆಯರ ಸ್ಥಿತಿಗತಿಗಳ ಮುಖ್ಯಕಾರಣ ಅವರ ಆರ್ಥಿಕ ಸ್ಥಿತಿಗತಿಗಳೊಂದಿಗೆ ನೇರವಾಗಿ ಸಂಬಂಧಿಸಿರುತ್ತದೆ ಎಂದು ಬಹಳ ಜನ ವಾದಿಸುತ್ತಾರೆ. ಆಸ್ತಿಯ ಒಡೆತನ ವೈದಕೀಯ ರಕ್ಷೆ, ಕೊನೆಗೆ ಸ್ತ್ರೀ-ಪುರುಷ ಸಂಖ್ಯಾ ಪ್ರಮಾಣ ಯಾವುದರಲ್ಲೂ ಭಾರತೀಯ ಮಹಿಳೆಯರ ಸ್ಥಿತಿ ಇಲ್ಲಿನ ಪುರುಷರಿಗೆ ಸರಿಸಮಾನವಾಗಿಲ್ಲ. ಕಾಲಕ್ರಮದಲ್ಲಾದರೂ ಮಹಿಳೆಯರ ಬದುಕು ಉತ್ತಮ ಸ್ಥಿತಿಗೆ ಬಂದಿರುವುದೆಷ್ಟು ಎಂದು ಹೇಳುವುದೆ ಕಷ್ಟ, ಏಕೆಂದರೆ ಚರಿತ್ರೆಕಾರರೂ ಎಂದೂ ಈ ಅಂಶವನ್ನು ಮುಖ್ಯವೆಂದು ಪರಿಗಣಿಸಿಯೇ ಇಲ್ಲ. ಸ್ವಾತಂತ್ರ್ಯ ಪೂರ್ವದಲ್ಲಂತೂ ಮಹಿಳೆಯರ ಮೇಲೆ ಬೀಳುವ ಕಾರ್ಯಭಾರ, ಅವರ ಬದುಕಿನ ಪರಿಸ್ಥಿತಿಗಳು, ದುಡಿಯುವ ಮಹಿಳೆಯರ ಅಭಿಪ್ರಾಯಗಳು ಎಂಬಂತಹ ಸಂಗತಿಗಳನ್ನು ಯಾರೂ ಲಕ್ಷಿಸಿ ನೋಡಲು ಹೋಗಿದ್ದೇ ಇಲ್ಲ. ಎಲ್ಲೋ ಕೆಲವು ಸಂದರ್ಭಗಳಲ್ಲಷ್ಟೇ ಕೆಲವು ಸಮಿತಿಗಳೋ, ಆಯೋಗಗಳೋ ದುಡಿಮೆಯನ್ನು ಕುರಿತು ತಮಗೆ ತೋಚಿದ ಕೆಲವು ಪ್ರಶ್ನೆಗಳನ್ನು ರೂಪಿಸಿಕೊಂಡು ದುಡಿಮೆಗಾರರೊಂದಿಗೆ ನೇರವಾಗಿ ಸಂದರ್ಶನಗಳನ್ನು ನಡೆಸಿದವು. ಇವೂ ಕೂಡ ಪುರುಷ ದುಡಿಮೆಗಾರರನ್ನು ಮಾತನಾಡಿಸುತ್ತಿದ್ದವೇ ಹೊರತು ಮಹಿಳೆಯರ ಬಳಿಗೆ ಹೋಗುತ್ತಲೇ ಇರಲಿಲ್ಲ. ಅಲ್ಲದೆ ಆಧುನಿಕತೆಯ ಕಲ್ಪನೆಯನ್ನು, ಮಹಿಳೆಯರ ಬಗೆಗಿನ ಕಲ್ಪಿತ ಅಭಿಪ್ರಾಯಗಳನ್ನು ಕುರಿತು ಇತ್ತೀಚಿನ ವಿದ್ವಾಂಸರು ಹೊಸ ಚರ್ಚೆಗಳನ್ನು ಬೆಳೆಸುತ್ತಿದ್ದಾರೆ. ಆಧುನಿಕತೆಯ ಪ್ರವಾದಿಗಳೆನಿಸಿದ ಜಾಣರು ತಂತ್ರಜ್ಞಾನ, ಔದ್ಯಮೀಕರಣ, ಬಂಡವಾಳ ಹೂಡಿಕೆಯಂಥವು ಇಡೀ ಪ್ರಜಾ ಸಮುದಾಯದ ಜೀವನ ಪರಿಸ್ಥಿತಿಗಳನ್ನು ಸುಧಾರಿಸಿ ಬಿಡುತ್ತವೆ ಯೆಂದೂ, ಸಹಜವಾಗಿ ಪುರುಷರಂತೆಯೇ ಮಹಿಳೆಯರೂ ಈ ಆರ್ಥಿಕ ಬದಲಾವಣೆಯ ಅನುಭವ ವನ್ನು ಪಡೆಯಲ್ಲಿದ್ದಾರೆಂದೂ ದಂತ ಗೋಪುಗಳನ್ನು ನಿರ್ಮಿಸುತ್ತಾರೆ. ಸ್ವತಂತ್ರ ಭಾರತದ ಮೊದ

ಮೊದಲ ನಾಯಕರೂ ಈ ತಂತ್ರಜ್ಞಾನ, ಔದ್ಯೋಗೀಕರಣದ ಬಗೆಗಿನ ಈ ಕಲ್ಪನಾ ಅಭಿಪ್ರಾಯಗಳಿಗೆ ತುಂಬಾ ಬೆಲೆ ಕೊಟ್ಟರು. ಬಂಡವಾಳಶಾಹಿಯ ಬಗೆಗೆ ಇದ್ದ ತೀವ್ರನಿಂದೆ ಹಾಗೂ ವಿರೋಧಗಳನ್ನು ಸ್ಪಷ್ಟ ದೀರ್ಘಕಾಲಿನ ಪ್ರಭುತ್ವಗಳು ನಿರಂತರ ಯೋಜನೆಗಳಲ್ಲಿ ತೊಡಗಿಕೊಳ್ಳುವ ಮೂಲಕ ಬಗೆ ಹರಿಸಿಯೇ ಬಿಡಬಹುದೆಂದು ನಂಬಿ ಪ್ರಯತ್ನಿಸಿದರು. ಈ ಯೋಜಿತ ಬದಲಾವಣೆಯು ಲಾಭದಾಯಕ ವಾದಿತು ಎಂಬುದನ್ನು ಒಪ್ಪಿದ ಮಾರ್ಕ್ಸ್‌ವಾದಿ ವಿದ್ವಾಂಸರಂತೂ ಇದ್ದೇ ಇದ್ದರು ಆದರೆ ಯೋಜನೆಯ ಎರಡನೆಯ ಪರಿಣಾಮವೆಂದರೆ ಮಹಿಳೆಯರೂ ಈ ಎಲ್ಲ ಲಾಭಗಳ ಪಾಲುದಾರ ರಾಗುತ್ತಾರೆ. ಎಂಬ ನಿರೀಕ್ಷೆ ಹುಸಿಯಾದುದೆಂದು ಹೇಳಿದವರು ಮಾತ್ರ ಯಾರೂ ಇಲ್ಲ. ಕ್ರಮೇಣ ವಾಗಿ ಬೆಳೆದ ಸ್ತ್ರೀವಾದಿ ವಿದ್ವಾಂಸರು ಈ ಹುಸಿಯನ್ನು ಸ್ಪಷ್ಟಪಡಿಸಲು ಯತ್ನಿಸಿದರಷ್ಟೆ. ಆರ್ಥಿಕತೆ ಯಲ್ಲಿ ಮಹಿಳೆಯರ ಭಾಗವಹಿಸುವಿಕೆ ತೀರಾ ಅತ್ಯಲ್ಪವಿದೆ ಎಂಬುದು ಹಾಗೂ ಮನುಷ್ಯ ಮಾತ್ರದವರೆಂದು ಅವರಿಗೆ ಸಮಾನ ಮನ್ನಣೆ ದೊರೆಯುತ್ತಿಲ್ಲವೆಂಬುದು ಕೂಡಿಯೇ ಹೀಗಾಗುತ್ತದೆ ಎಂಬುದೇ ಹೆಚ್ಚು ಒಪ್ಪಿಗೆಯಾಗಬಹುದಾದ ವ್ಯಾಖ್ಯಾನವಾಗಿ ತೋರುತ್ತದೆ.

ಸಮಾನತೆಯ ಎಡಗೆ ವರದಿಯಲ್ಲಿ ಮಹಿಳೆಯರ ಆರ್ಥಿಕ ದುಸ್ಥಿತಿಗೆ ಸಾರ್ವಜನಿಕ ನೀತಿಗಳೇ ಕಾರಣವೆಂದು ದೂಷಿಸಲಾಗಿದೆ. ಸಾರ್ವಜನಿಕ ಬದುಕಿನಲ್ಲಿ ಮಹಿಳೆಯ ದುಡಿಮೆಯನ್ನು ಕುಟುಂಬದ ಪೂರಕ ಆದಾಯವೆಂದಷ್ಟೇ ಪರಿಗಣಿಸಲಾಗುತ್ತದೆ. ಮಹಿಳೆಯ ಆರ್ಥಿಕ ವಲಯಗಳಲ್ಲೂ ಇದೇ ನೀತಿಯೇ ರೂಢಿಯಲ್ಲಿರುವುದು. ಔಪಚಾರಿಕ ಆರ್ಥಿಕ ವಲಯಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಇಳಿಮುಖಗೊಳ್ಳುತ್ತಾ ಇರುವುದನ್ನು ಜನಗಣತಿಯ ಅಂಕಿ-ಅಂಶಗಳು ಹೇಳುತ್ತವೆ. ಒಟ್ಟಿನ ಮಹಿಳಾ ಸಂಖ್ಯೆಯ ಸಂದರ್ಭದಲ್ಲೂ, ಒಟ್ಟಾರೆ ಜನಸಂಖ್ಯೆಯ ಸಂದರ್ಭದಲ್ಲೂ ಪ್ರತಿಶತ ಇಳಿಕೆ ಪ್ರಮಾಣ ಇದೇ ರೀತಿಯಾಗಿದೆ. "ಗೃಹ ಕಸುಬು ಹಾಗೂ ಸಣ್ಣ ಕೈಗಾರಿಕೆಗಳು ರಾಷ್ಟ್ರೀಯ ಆರ್ಥಿಕತೆಯಾಗಿ ಸ್ಥಿತ್ಯಂತರಗೊಂಡದ್ದರ ಮೊದಲ ಪರಿಣಾಮವಿದು" ಎಂದು ಸಮಿತಿಗಳು ಈ ಪರಿಸ್ಥಿತಿಯನ್ನು ವಿಶ್ಲೇಷಿಸಿದವು. ಉತ್ಪಾದನೆ ಎಂಬುದು ಗೃಹ ಕಸುಬುಗಳ ಹಂತದಿಂದ ವ್ಯವಸ್ಥಿತ ಆರ್ಥಿಕ ವಲಯ ಗಳಿಗೆ ಚಲಿಸಿಬಿಟ್ಟಾಗ, ಅದರ ಬಹುಪಾಲಿನ ನಷ್ಟವನ್ನು ಮಹಿಳೆಯರು ಭರಿಸಬೇಕಾಯಿತು. ಹೊಸ ಉದ್ಯಮಗಳಲ್ಲಿ ನೌಕರಿಗಳನ್ನು ಪಡೆಯುವ ಸ್ಪರ್ಧೆ ಅವರಿಗೆ ಅಸಾಧ್ಯದ್ದಾಯಿತು. ಏಕೆಂದರೆ ಈ ಹೊಸ ಉದ್ಯಮಗಳು ತಂತ್ರಜ್ಞಾನಗಳನ್ನು ಹೆಚ್ಚಾಗಿ ಅವಲಂಬಿಸಿದ್ದವು. ವಿಶೇಷ ಕುಶಲತೆ, ಶಿಕ್ಷಣಗಳ ಅಭಾವವಿದ್ದ ಹೆಂಗಸರು ಹಿಂದುಳಿದುಬಿಟ್ಟರು. ಎರಡನೆಯದಾಗಿ ಆಧುನಿಕ ದುಡಿಮೆಯ ವಲಯದಲ್ಲಿ ಹೆಂಗಸರ ಪ್ರವೇಶವನ್ನು ಅಪೇಕ್ಷಿಸುವವರೂ ಇರಲಿಲ್ಲ. ಸಮಾಜದಲ್ಲಿ ಹೆಂಗಸಿಗೆ ಉಚಿತವಾದ

ಪಾತ್ರವನ್ನು ಕಲ್ಪಿಸಿರುವ ಈ ಸಂಪ್ರದಾಯ ನಿಷ್ಠ ಸಮಾಜವು ಆರ್ಥಿಕ ಚಟುವಟಿಕೆಗಳಲ್ಲಿ ಹೊಸದಾಗಿ ಸಿಗತೊಡಗಿದ್ದ ಅವಕಾಶಗಳಲ್ಲಿ ಮಹಿಳೆಯರು ಭಾಗವಹಿಸುವುದನ್ನು ತೀವ್ರವಾಗಿ ವಿರೋಧಿಸತೊಡಗಿತು" ಎಂದು ಸಮಾನತೆಯ ಎಡೆಗೆ ವರದಿಯಲ್ಲಿ ಬರೆಯಲಾಗಿದೆ. ಅಸಂಘಟಿತ ಆರ್ಥಿಕ ವಲಯಗಳಲ್ಲಿ ಮಹಿಳೆಯರು ಪ್ರವೇಶ ಪಡೆಯುವಲ್ಲಿಯೂ ಸಮಾಜದ ಈ ಧೋರಣೆಯೇ ಪ್ರವೃತ್ತವಾಗುತ್ತದೆ. ತಾರತಮ್ಯ, ಶೋಷಣೆಗಳ ಸಮಸ್ಯೆ ಈ ವಲಯದಲ್ಲಿ ಮಹಿಳೆಯರನ್ನು ಇನ್ನಷ್ಟು ಹೆಚ್ಚಿಗೆ ಕಾಡುತ್ತದೆ. ಇಷ್ಟೆಲ್ಲದರ ನಡುವೆ ಪರಿಣಿತ ವೃತ್ತಿಗಳಲ್ಲಿ ಹಾಗೂ ಕೆಲವು ವಿಶಿಷ್ಟ ಸೇವಾ ವಲಯಗಳಲ್ಲೂ ಮಹಿಳೆಯರ ಪ್ರವೇಶ ಹಾಗೂ ಸಾಧನೆ ಸಾಕಷ್ಟು ಉತ್ತಮವಾಗಿದೆ ಎಂಬುದು ಸಮಾಧಾನದ ವಿಷಯ. ಉಳಿದೆಲ್ಲ ಆರ್ಥಿಕ ವಲಯಗಳಲ್ಲೂ ಮಹಿಳೆಯು ಗೈರು ಹಾಜರಾಗಿದ್ದಾಳೆಂಬ ಸಂಗತಿ ಯಿಂದಾಗಿ, ಒಂದೆರಡು ಕಡೆಗಳಲ್ಲಿನ ಅವಳ ಅವಕಾಶಗಳು ಅಷ್ಟೇನೂ ಮಹತ್ವದವಾಗದಿರಬಹುದು ಎಂದು ಅಂಕಿ-ಅಂಶಗಳು ತೋರಿಸಬಹುದು. ಏನಾದರಾಗಲಿ, ಈ ಪರಿಣಿತ ವೃತ್ತಿಗಳಲ್ಲಿ ಹಾಗೂ ಕೆಲವು ಸೇವಾ ಕ್ಷೇತ್ರಗಳಲ್ಲಷ್ಟೇ ಆಗಲಿ, ಮಹಿಳೆಯರು ಪ್ರವೇಶಪಡೆದಿದ್ದಾರೆಂಬ ಸಂದರ್ಭಗಳೂ ಸಹ ವಸತಿ, ಸಂಚಾರ, ಲೈಂಗಿಕ ಕಿರುಕುಳ, ಸಾಂಪ್ರದಾಯಿಕ ಪ್ರವೃತ್ತಿಗಳು ಎಂಬಂತಹ ಅಲ್ಲಿಗೆ ವಿಶಿಷ್ಟವಾದ ಕೆಲವು ಮಹಿಳಾ ಸಮಸ್ಯೆಗಳನ್ನು ಹೊಸದಾಗಿ ಸೃಷ್ಟಿಸುತ್ತಲೂ ಇವೆ.

ಆರ್ಥಿಕತೆಯು ಆಧುನೀಕರಣಗೊಂಡಷ್ಟಕ್ಕೆ ಮಹಿಳೆಯರ ಸ್ಥಿತಿಗತಿಗಳೂ ತಮ್ಮಷ್ಟಕ್ಕೇ ಸುಧಾರಿಸಿ ಬಿಡುತ್ತವೆ ಎಂಬ ಕಲ್ಪನೆ ವಾಸ್ತವವೇನಲ್ಲ ಎಂಬುದನ್ನು ಅಂಕಿ-ಅಂಶಗಳು ವಿವರಿಸುತ್ತವೆ. ಅದಕ್ಕೆ ತದ್ವಿರುದ್ಧವಾಗಿಯೇ ಆಗುತ್ತದೆಂದೂ ಅನಿಸುತ್ತದೆ; ದುಡಿಮೆಯು ಮನೆಯಿಂದ ಕಾರ್ಖಾನೆ ಅಥವಾ ಗಣಿಗಳಿಗೆ ಚಲಿಸಿತೆಂದರೆ ಅದರ ಮೊದಲ ನಷ್ಟದ ಬಿಸಿ ಮಹಿಳೆಗೆ ತಟ್ಟುವುದು. ಉದಾಹರಣೆಗೆ ಸಾಂಪ್ರದಾಯಿಕ ಬೀಡಿ ಉದ್ಯಮದಲ್ಲಿ ಮಹಿಳೆಗೆ ತನ್ನದೆ ದುಡಿಮೆ ಇತ್ತು. ಆಧುನಿಕ ಕಾರ್ಖಾನೆಗಳಲ್ಲಿ ಬೀಡಿ ತಯಾರಿಕೆಗೆ ಯಂತ್ರಗಳು ಬಂದು, ಅಲ್ಲಿ ಮಹಿಳೆಯರು ದುಡಿಮೆಗೆ ತೊಡಗಿದರೂ, ಉತ್ತಮ ಕೂಲಿ ಅಥವಾ ಕೆಲಸದ ವಾತಾವರಣವೇನೂ ಅವರಿಗೆ ದೊರೆಯುವುದಿಲ್ಲ. ಬದಲಿಗೆ ವಿವಿಧ ಬಗೆಯ ಶೋಷಣೆಗಳ ಆಗರವಾಗಿ ಕಾರ್ಖಾನೆ ಮಹಿಳೆಯರನ್ನು ಕಾಡುತ್ತದೆ.

ಶ್ರೀಮಂತ ಕುಟುಂಬದ ಸಂಪತ್ತಿನ ಲಾಭಗಳಲ್ಲಾದರೂ ಮಹಿಳೆಯರಿಗೆ ಸಮಾನ ಅವಕಾಶ ಗಳಿರುತ್ತವೆ ಎಂಬ ಕಲ್ಪನೆ ಕೂಡ ದೊಡ್ಡ ಭ್ರಮೆ ಎಂಬುದನ್ನು ಇತ್ತೀಚಿನ ಮಾಹಿತಿಗಳು ಹೇಳುತ್ತವೆ. ಭಾರತದ ಆರ್ಥಿಕ ಅಭಿವೃದ್ಧಿಯನ್ನು ಕುರಿತು ಆಸಕ್ತಿ ತಳೆದ ಬಹುತೇಕ ಸಮಾಜ ವಿಜ್ಞಾನಿಗಳು ಶ್ರೀಮಂತ ಕುಟುಂಬಗಳು ತಮ್ಮ ಗಂಡುಮಕ್ಕಳಿಗೆ ಹೇಗೋ ಹಾಗೆ ಹೆಣ್ಣುಮಕ್ಕಳಿಗೂ ಒಳ್ಳೆಯ

ಆಹಾರ, ವಸ್ತ್ರಭೂಷಣ ಹಾಗೂ ವೈದ್ಯಕೀಯ ಲಕ್ಷ್ಯ ಕೊಡುತ್ತವೆ ಎಂದು ಗ್ರಹಿಸಿಕೊಂಡು ಬಿಟ್ಟಿದ್ದಾರೆ. ಆದರೆ ನಿಜ ಅದಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಶಿಶು ಆಹಾರ ಪೋಷಣೆಯನ್ನು ಕುರಿತು ಹಲವು ಅಧ್ಯಯನಗಳು ನಡೆದಿವೆ. ಆ ರೈತ ಕುಟುಂಬಗಳು ಗಂಡು ಮಕ್ಕಳಿಗಾಗಿ ಎಷ್ಟು ಬೇಕಾದರು ಖರ್ಚು ಮಾಡಲು ಸಿದ್ಧರಿರುತ್ತಾರಾದರೂ, ಹೆಣ್ಣು ಮಕ್ಕಳ ವಿಚಾರಕ್ಕೆ ಕೈ ಹಿಡಿತ ಮಾಮೂಲಿನದೇ ಎಂಬ ಸಂಗತಿ ಈ ಅಧ್ಯಯನಗಳಲ್ಲಿ ವ್ಯಕ್ತವಾಗಿದೆ. ಅಂದರೆ ಶ್ರೀಮಂತ ಕುಟುಂಬಗಳಲ್ಲೂ ಹೆಣ್ಣು ಮಕ್ಕಳಿಗೊಂದು ನ್ಯಾಯ ಗಂಡು ಮಕ್ಕಳಿಗೊಂದು ನ್ಯಾಯ ಎಂಬುದೇ ರೂಢಿಯಲ್ಲಿರುವುದು. ಶ್ರೀಮಂತರ ಮನೆಗಳಲ್ಲಿ ಹೆಣ್ಣು ಮಕ್ಕಳಿಗೆ ಕಷ್ಟವೇನಿರುತ್ತದೆ ಎಂಬ ಪ್ರಶ್ನೆಗೆ ಉತ್ತರ ಬಲು ಸುಲಭ. ಗರ್ಭ ಪರೀಕ್ಷಿಸಿ ಅದರಲ್ಲಿ ಹೆಣ್ಣು ಮಗು ಇದೆ ಎಂದು ತಿಳಿದರೆ 'ಹೆಣ್ಣು ಭ್ರೂಣ'ವನ್ನು ನಿರ್ದಾಕ್ಷಿಣ್ಯವಾಗಿ ಹತ್ಯೆ ಮಾಡುವ ಪ್ರವೃತ್ತಿ ಇದನ್ನು ವಿವರಿಸಬಹುದು. ಮಧ್ಯಮ ವರ್ಗದವರಿಗೆ ಸಣ್ಣ ಕುಟುಂಬಗಳು ಅಗತ್ಯ, ಆದರೆ ಗಂಡು ಮಕ್ಕಳಂತೂ ಇರಲೇಬೇಕು. "ಹೆಣ್ಣು ಭ್ರೂಣಹತ್ಯೆ" ಈ ಸಂದಿಗ್ಧಕ್ಕೆ ಅವರು ಕಂಡುಕೊಳ್ಳುವ ಉತ್ತರವಾಗಿ ಬಿಡುತ್ತದೆ.

ಉದ್ಯೋಗಸ್ಥ ಮಹಿಳೆಯರು ತಮಗೆ ಅನುಕೂಲಕರ ಸಾಮಾಜಿಕ ಬದಲಾವಣೆಗಳನ್ನು ಒತ್ತಾಯಿಸುತ್ತಾರೆ. ಎಂಬುದು ಇನ್ನೊಂದು ತಪ್ಪು ಕಲ್ಪನೆ ಎನ್ನುತ್ತದೆ ಪ್ರಸ್ತುತ ಸಂಶೋಧನೆ ಈ ಭಾರತದಲ್ಲಿ ಉದ್ಯೋಗಸ್ಥ ಮಹಿಳೆಯರ ಕೆಲಸ ಪರಿಸ್ಥಿತಿಗಳಲ್ಲಿ ಸುಧಾರಣೆ ತರಲು, ಮಹಿಳೆಯರ ಬೇಡಿಕೆಗಳನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಒಕ್ಕೂಟಗಳನ್ನು ಉತ್ತೇಜಿಸಲು ಹಾಗೂ ಕೆಲಸದ ಸ್ಥಳದಲ್ಲಿ ಉಂಟಾಗುವ ಲೈಂಗಿಕ ಕಿರುಕುಳಗಳನ್ನು ಸಾರ್ವಜನಿಕರಿಗೆ ತಿಳಿಸಲು ಕೆಲಸ ಮಾಡುವ ಅನೇಕಾನೇಕ ಸಂಸ್ಥೆಗಳೇನೋ ಇವೆ. ಆದರೆ ಸಾರ್ವಜನಿಕ ನೀತಿಗಳಲ್ಲಿ ಯಾವುದೇ ಬದಲಾವಣೆಗಳನ್ನು ತರುವುದು ಅವಕ್ಕೆ ಸಾಧ್ಯವಾಗಿಯೇ ಇಲ್ಲ. ಸಂಘಟಿತ ವಲಯಗಳಲ್ಲಾದರೂ ಅಲ್ಪಸ್ವಲ್ಪ ಪ್ರಭಾವವನ್ನು ಬೀರಿ ವ್ಯವಸ್ಥೆಯಲ್ಲಿ ಒಂದಿಷ್ಟು ಅನುಕೂಲಗಳನ್ನು ಮಾಡಿಕೊಳ್ಳಲು ಮಹಿಳೆಯರಿಗೆ ಸಾಧ್ಯವಾಗಿದೆಯೇನೋ. ಇದ್ದದರಲ್ಲೇ ತಮ್ಮ ಪಾಲಿಗೆ ಬರಬೇಕಾದುದರಲ್ಲಿ ಸ್ವಲ್ಪ ಹೆಚ್ಚಿಗಾದರೂ ಪಡೆದಿದ್ದಾರೋ ಏನೋ. ಉದಾಹರಣೆಗೆ ಅಹಮದಾಬಾದಿನ ಎಸ್‌ಇಡಬ್ಲ್ಯೂಎ ಮಹಿಳೆಯರು ವ್ಯವಹಾರ ಹೂಡಲು ಬೇಕಾದ ಸಣ್ಣ ಸಾಲಗಳನ್ನು ಪಡೆಯಲು ನೆರವು ನೀಡುವಲ್ಲಿ ಸಫಲವಾಗಿದೆ. ಆದರೆ ಎಲ್ಲೋ ಅಲ್ಪಸ್ವಲ್ಪ ಆರ್ಥಿಕ ಸ್ಥಿತಿ ಸುಧಾರಿಸಿತೆಂದ ಮಾತ್ರಕ್ಕೆ ಈ ಮಹಿಳೆಯರು ತಮ್ಮನ್ನು ತುಳಿದಿಟ್ಟಿರುವ ವ್ಯವಸ್ಥೆಯ ವಿರುದ್ಧ ಸಿಡಿದು ಸವಾಲಾಗಿ ನಿಲುವ ಸಾಮರ್ಥ್ಯವನ್ನು ಪಡೆದು ಬಿಡುತ್ತಾರೆಂಬುದು ಸುಳ್ಳು. ಇನ್ನೂ ಹೇಳಬೇಕೆಂದರೆ ಇದ್ದ ವ್ಯವಸ್ಥೆಯಲ್ಲಿ ಒಂದಿಷ್ಟು ಮೇಲಿನ ಸ್ಥಾನಮಾನಕ್ಕೆ

ಎಳಸುವ ಪ್ರವೃತ್ತಿಯನ್ನು ಬೆಳೆಯುತ್ತದೆ. ಅಂದರೆ, ತನ್ನ ಶ್ರಮದ ದುಡಿಮೆಯಿಂದ ಗಳಿಸಿದ ಹಣವನ್ನು ಆ ಮಹಿಳೆ ಮಗಳ ಶಿಕ್ಷಣಕ್ಕಾಗಿ ಖರ್ಚು ಮಾಡುವಳೋ ಅಥವಾ ಅವಳ ಮದುವೆಯ ವರದಕ್ಷಿಣೆಗಾಗಿ ಬಳಸುವಳೋ ಎಂದರೆ, ಎರಡನೆಯದೇ ಅವಳ ಆಯ್ಕೆಯಾಗಬೇಕಾಗುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಪುರುಷರು ಇಲ್ಲಿನ ಮಹಿಳೆಯರ ಪಾತ್ರವನ್ನು ಆಧುನೀಕರಿಸುವ ಬಗ್ಗೆ ತಲೆಕೆಡಿಸಿಕೊಳ್ಳದೆ ಹೋಗಿದ್ದಿದ್ದರೆ ಭಾರತದಲ್ಲಿ ಮಹಿಳಾ ಚಳುವಳಿ ಎನ್ನುವುದೇ ಹುಟ್ಟುತ್ತಿರಲಿಲ್ಲವೆನಿಸುತ್ತದೆ. ಆ ಕಾಲದ ಗಂಡಸರು ಸತಿ, ಬಾಲ್ಯವಿವಾಹ, ವಿಧವಾ ವಿವಾಹ ಹಾಗೂ ಸ್ತ್ರೀ ಶಿಕ್ಷಣಗಳಂತಹ ವಿಷಯಗಳಿಗಷ್ಟೇ ಗಮನ ಕೊಟ್ಟದ್ದು. ಅವರು ಇಡೀ ಜಗತ್ತನ್ನು ವಿಶಿಷ್ಟ ಜಾತಿ ವರ್ಗಗಳ ಕನ್ನಡಕವನ್ನು ಧರಿಸಿಯೇ ನೋಡಿದರು. ಅವರ ಇಡೀ ಪ್ರಯತ್ನಗಳಲ್ಲಿ ಮಹಿಳೆಯರನ್ನು, ಅದರಲ್ಲೂ ತಮ್ಮ ತಮ್ಮ ಕುಟುಂಬದ ಮಹಿಳೆಯರನ್ನು ವಸಾಹತು ಆಡಳಿತವು ರೂಪಿಸುತ್ತಿದ್ದ ಹೊಸ ಜಗತ್ತಿಗೆ ಕರೆತರುವ ಉದ್ದೇಶವಷ್ಟೇ ಇದ್ದದ್ದು. ಹೀಗೆ ಪುರುಷರು ಒಮ್ಮೆ ತೀರ್ಮಾನಿಸಿಕೊಂಡದ್ದೆ, ಮಹಿಳೆಯರಿಗೆ ಇದು ಬೇಕಿತ್ತೋ ಬೇಡವಾಗಿತ್ತೋ ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲದಂತೆ, ಮಹಿಳೆಯರು ಹೊಸ ಸಮಾಜದ ಭಾಗವಂತೂ ಆಗಿಹೋದರು. ಈ ಹೊಸ ಜಗತ್ತನ್ನು ಇಷ್ಟಪಟ್ಟ ಮಹಿಳೆಯರು ತಮಗೆ ದೊರೆತ ಅವಕಾಶದಲ್ಲಿ ಬದುಕುಳಿದಷ್ಟೇ ಅಲ್ಲ, ತಮದೇ ಹೊಸ ಜಗತ್ತುಗಳನ್ನು ಕಲ್ಪಿಸಲು ಕೂಡ ಸಮರ್ಥರಾದರು. ರೂಢಿಯಲ್ಲಿದ್ದ ಲಿಂಗ ಪ್ರತ್ಯೇಕತೆ ಹಾಗೂ ಹೆಣ್ಣುಗಳ ಅಸ್ಪೃಶ್ಯತೆಯ ಸಂಗತಿಗಳನ್ನು ಅವರು ತಮ್ಮ ಸ್ವಂತ ಸಂಸ್ಥೆಗಳನ್ನು ಕಟ್ಟಿಕೊಳ್ಳುವ ಅವಕಾಶಗಳನ್ನಾಗಿ ಪರಿವರ್ತಿಸಿಕೊಂಡರು. ಇವು ಪಿತೃವ್ಯವಸ್ಥೆಯಿಂದ ಅವರನ್ನು ಪಾರು ಮಾಡಿಬಿಟ್ಟಿತೆಂದಲ್ಲವಾದರೂ, ಗಂಡಸರ ನಿಯಂತ್ರಣದ ಕಪಿಮುಷ್ಠಿಯಿಂದ ಸ್ವಲ್ಪ ಮಟ್ಟಿಗಾದರೂ ಹೊರಬಂದು ಉಸಿರಾಡಿಸಿದ್ದು ನಿಜ.

ಹಿಂದೂ ಸಮಾಜದಲ್ಲಿ ಸ್ತ್ರೀ ಉನ್ನತ ಸ್ಥಾನವಿದ್ದಾಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಉತ್ತರಾಧಿಕಾರದ ಹಕ್ಕು ಇರಲಿಲ್ಲ. ಸ್ತ್ರೀಯರಿಗೂ ಆಸ್ತಿಯ ಹಕ್ಕು ದೊರಕಬೇಕೆಂದು ಯಾಜ್ಞವಲ್ಕ್ಯ ಪ್ರತಿಪಾದಿಸಿದರು. ಅವರ ಪ್ರಕಾರ ಗಂಡು ಸಂತಾನವಿಲ್ಲದವನ ಆಸ್ತಿಯು ಆತನ ಪತ್ನಿಗೆ ಸೇರಬೇಕು. ಅವಿಭಕ್ತ ಕುಟುಂಬದಲ್ಲಿ ಗಂಡು ಮಕ್ಕಳೊಂದಿಗೆ ಹೆಂಡತಿ ಹಾಗೂ ತಾಯಿಗೂ ಪಾಲು ದೊರೆಯಬೇಕು. ಸ್ತ್ರೀ ಧನದ ಬಗ್ಗೆ ಉಲ್ಲೇಖವಿದೆ. ಒಂದು ಹೆಣ್ಣಿಗೆ ಮದುವೆ ಅಥವಾ ಇನ್ನಿತರ ಸಂದರ್ಭದಲ್ಲಿ ತಂದೆತಾಯಿ, ಸಂಬಂಧಿಕರು ಅಥವಾ ಯಾರೇ ನೀಡದ ಉಡುಗೊರೆ, ಆಸ್ತಿ ಹಾಗೂ ಅವಳ ಸ್ವಂತ ಅರ್ಜನೆಯಿಂದ ಬಂದ ಧನವು ಸ್ತ್ರೀ ಧನವಾಗುತ್ತದೆ. ಇಂಥ ಸ್ತ್ರೀ ಧನಕ್ಕೆ ಆಕೆಯದೇ

ಪರಮಾಧಿಕಾರ. ಅದರಲ್ಲಿ ಪತಿಗೆ ಯಾವ ಅಧಿಕಾರವೂ ಇರುವುದಿಲ್ಲ. ನಂತರ ಈ ಧನವು ಆಕೆಯ ಹೆಣ್ಣು ಮಕ್ಕಳಿಗೆ ಸೇರಬೇಕು. ಸ್ತ್ರೀ ಧನದ ಹಂಚಿಕೆಯಲ್ಲಿ ಮದುವೆಯಾಗದ ಮಗಳಿಗೆ ಆದ್ಯತೆ ಕೊಡಬೇಕು ಹಾಗೂ ಮದುವೆಯಾಗಿಯೂ ಆರ್ಥಿಕವಾಗಿ ದುರ್ಬಲರಾದವರೆಗೆ ತಾಯಿಯ ಆಸ್ತಿ ಸೇರಬೇಕು. ವ್ಯಾಖ್ಯಾನಕಾರರು ಕೂಡಾ ಸ್ತ್ರೀ ಧನದ ಸಂದರ್ಭದಲ್ಲಿ ಹೆಣ್ಣು ಮಕ್ಕಳಿಗೆ ಉತ್ತರಾಧಿಕಾರ ನಿಡಿದ್ದಾರೆ. ಪುತ್ರ ಸಂತಾನವಿಲ್ಲದ ವಿಧವೆಗೆ ಪತಿಯ ಆಸ್ತಿಯಲ್ಲಿ ಜೀವನ ನಿರ್ವಹಣೆಗೆ ಸಾಕಾಗುವಷ್ಟು ವ್ಯವಸ್ಥೆ ಮಾಡಬೇಕು. ಆದರೆ ಆಕೆ ತನ್ನ ಜೀವನಾಂಶದ ಆಸ್ತಿಯನ್ನು ಪರಭಾರೆ ಮಾಡುವ ಅಧಿಕಾರ ಹೊಂದಿರುವುದಿಲ್ಲ. ತಂದೆಯ ಆಸ್ತಿಯಲ್ಲಿ ಗಂಡು ಹಾಗೂ ಹೆಣ್ಣು ಮಕ್ಕಳಿಗೆ ಪಾಲು ದೊರೆಯಬೇಕೆಂದು ಸ್ಮೃತಿಗಳು ಹಾಗೂ ಅವುಗಳ ವ್ಯಾಖ್ಯಾನಕಾರರು ಪ್ರತಿಪಾದಿಸಿದರು, ಹೆಣ್ಣು ಮಕ್ಕಳಿಗೂ ಆಸ್ತಿಯ ಹಕ್ಕು ದೊರೆಯುವಂತಾಗಲು ಆಸ್ತಿಭಾರ ಹಾಕಿದವು.

ಸ್ವತಃ ಯಾಜ್ಞವಲ್ಕ್ಯ ಕೂಡಾ ಸನ್ಯಾಸ ಸ್ವೀಕರಿಸುವ ಮುಂಚಿತವಾಗಿ ತಮ್ಮ ಸಂಪತ್ತನೆಲ್ಲಾ ಇಬ್ಬರು ಪತ್ನಿಯರಾದ ಕಾತ್ಯಾಯಿನಿ ಮತ್ತು ಮೈತ್ರೇಯಿಗೆ ಸಮನಾಗಿ ಹಂಚುತ್ತಾರೆ. ಮೈತ್ರೆಯಿ ತನಗೆ ಆಸ್ತಿ ಬೇಡವೆಂದು, ಅಮರತ್ವ ಪಡೆಯುವ ಜ್ಞಾನ ಬೋಧಿಸಬೇಕೆಂದು ವಿನಂತಿಸಿಕೊಳ್ಳುತ್ತಾಳೆ. ಯಾಜ್ಞವಲ್ಕ್ಯನು ಆಧ್ಯಾತ್ಮದ ಸುಧೆಯನ್ನು ಆಕೆಗೆ ಬೋಧಿಸುತ್ತಾರೆ. ಅಂದರೆ ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು ಇಲ್ಲದ ಕಾಲದಲ್ಲೇ ತಮ್ಮ ಆಸ್ತಿಯನ್ನು ಪತ್ನಿಯರಿಗೆ ಹಂಚಿ ಸ್ತ್ರೀಯರ ಆಸ್ತಿ ಹಕ್ಕನ್ನು ತಮ್ಮ ಸ್ವಂತ ನಡುವಳಿಕೆ ಮೂಲಕ ಜಗತ್ತಿಗೆ ತಿಳಿಸುತ್ತಾರೆ. ಸ್ತ್ರೀಯರಿಗೆ ವೇದಧ್ಯಾಯನಕ್ಕೆ ಅವಕಾಶ ವಿಲ್ಲದಿದ್ದ ಕಾಲದಲ್ಲೆ ಪತ್ನಿಗೆ ಅಂತಹ ಅವಕಾಶ ಕಲ್ಪಿಸಿಕೊಡುತ್ತಾರೆ. ಇತ್ತೀಚಿನ ಹಿಂದೂ ಉತ್ತರಾಧಿಕಾರ ಅಧಿನಿಯಮ ಹೊಸ ತಿದ್ದುಪಡಿ ೧೯೫೬ ಪ್ರಕಾರ ಕೂಡಾ ಕುಟುಂಬದಲ್ಲಿ ಆಸ್ತಿ ಹಂಚಿಕೆಯ ಕಾನೂನು ಜಾರಿಗೊಳಿಸಲಾಗಿದೆ. ಅವರೆಗೂ ಪುತ್ರಿಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಯಾವುದೇ ಪಾಲು ದೊರೆಯುತ್ತಿರಲಿಲ್ಲ. ಗಂಡು ಸಂತಾನವೇ ಆಸ್ತಿಯ ಉತ್ತರಾಧಿಕಾರಿ. ವಿಧವೆ, ವಿಚ್ಛೇದಿತೆ ಮತ್ತು ಅವಿವಾಹಿತ ಮಹಿಳೆಯರಿಗೆ ಮಾತ್ರ ತವರಿನಲ್ಲಿ ಹಕ್ಕು ಲಭಿಸುತ್ತಿತ್ತು. ಆದರೆ ಈ ಹೊಸ ತಿದ್ದುಪಡೆಯ ಪ್ರಕಾರ ಸ್ತ್ರೀ ಯಾವುದೇ ಸ್ಥಿತಿಯಲ್ಲಿದ್ದರೂ ತವರಿನಲ್ಲಿ ವಾಸಿಸಬಹುದು ಹಾಗೂ ಆಸ್ತಿಯಲ್ಲಿ ಸಮಪಾಲು ಹೊಂದಬಹುದು.

ಕೌಟುಂಬಿಕ ದೌರ್ಜನ್ಯ ಈಗ ಕೇವಲ ಅಪರಾಧವಷ್ಟೇ ಅಲ್ಲ, ಅದೊಂದು ಜಾಗತಿಕ ಮಟ್ಟದ ಸಾಮಾಜಿಕ ಸಮಸ್ಯೆಯಾಗಿದೆ. ಮಹಿಳೆಯರ ಸಂರಕ್ಷಣೆ ಮತ್ತು ಸುರಕ್ಷತೆ ದೃಷ್ಟಿಯಿಂದ ಸರ್ಕಾರ ಅವರಿಗಾಗಿಯೇ ಪ್ರತ್ಯೇಕ ಕಾನೂನುಗಳನ್ನು ರಚಿಸಲು ನಮ್ಮ ಸಂವಿಧಾನದಲ್ಲಿ ಅವಕಾಶಗಳಿವೆ.

ವರದಕ್ಷಿಣೆ ಕಿರುಕುಳ, ಅತ್ಯಾಚಾರ, ಲೈಂಗಿಕ ಕಿರುಕುಳ ಇವುಗಳಿಗೆ ಒಳಗಾದ ಮಹಿಳೆಯರು ಭಾರತೀಯ ದಂಡ ಸಂಹಿತೆ ಮತ್ತು ಭಾರತೀಯ ದಂಡ ಪ್ರಕ್ರಿಯಾ ಸಂಹಿತೆಯಡಿ ರಕ್ಷಣೆ ಪಡೆಯಲು ಅವಕಾಶವಿದೆ. ಇವಳ ಸಾಮಾಜಿಕ ಮತ್ತು ಆಸ್ತಿ ಹಕ್ಕುಗಳ ರಕ್ಷಣೆಗಾಗಿ ವಾರಸುದಾರ ಕಾಯಿದೆ, ದತ್ತಕ ಕಾಯಿದೆ, ವಿಧವಾ ಪುನರ್ವಿವಾಹ ಕಾಯಿದೆ ಹೀಗೆ ಹಲವು ಕಾಯಿದೆಗಳು ಚಾಲ್ತಿಯಲ್ಲಿವೆ. ಆದರೆ, ಕೌಟುಂಬಿಕ ದೌರ್ಜನ್ಯದಿಂದ ತತ್ತರಿಸಿದ ಮಹಿಳೆಯರ ಹಿತಾಸಕ್ತಿ ಉದ್ದೇಶವಾಗಿಟ್ಟುಕೊಂಡು ಯಾವುದೇ ಕಾನೂನು ರಚಿತವಾಗಿಲ್ಲ ಎಂದು ಮಹಿಳಾ ಸಂಘಟನೆಗಳು ನಡೆಸಿದ ಹೋರಾಟಕ್ಕೆ ಜಯಸಿಕ್ಕಿದ್ದು ಜೂನ್ ೨೩, ೨೦೦೫ ರಂದು. ಆ ದಿನವನ್ನು "ಭಾರತೀಯ ಕೌಟುಂಬಿಕ ದೌರ್ಜನ್ಯ ತಡೆಗಟ್ಟುವಿಕೆ ಮಸೂದೆ, ೨೦೦೫" ಇದಕ್ಕೆ ಕೇಂದ್ರ ಸರ್ಕಾರ ಅಂಗೀಕಾರ ನೀಡಿತು. ಈಗ ಅಂದರೆ ೨೬, ಅಕ್ಟೋಬರ್, ೨೦೦೬ ರಿಂದ ಈ ಕಾಯಿದೆ ಜಾರಿಗೆ ಬಂದಿದೆ.

ಈ ಮಸೂದೆಯ ವ್ಯಾಖ್ಯಾನದ ಪ್ರಕಾರ ಕೌಟುಂಬಿಕ ಸಂಬಂಧಗಳಿಂದಾಗಿ ಮತ್ತು ವಿವಾಹವಲ್ಲದ ಸಹ ಬಾಳ್ವೆಯಿಂದಾಗಿ, ಯಾವುದೇ ಮಹಿಳೆ ಅನುಭವಿಸುವ ಮಾನಸಿಕ ಹಿಂಸೆ, ಆರ್ಥಿಕ ಅಭದ್ರತಾ ಭಾವನೆ, ದೈಹಿಕ ನೋವು, ಲೈಂಗಿಕ ಕಿರುಕುಳ ಇವೆಲ್ಲ ವಸ್ತುಶಃ ವಾಗಿರಲಿ ಅಥವಾ ಬೆದರಿಕೆ ರೂಪದಲ್ಲಿರಲ್ಲಿ ಅದು ಕೌಟುಂಬಿಕ ದೌರ್ಜನ್ಯ ಎನ್ನಿಸಿಕೊಳ್ಳುತ್ತದೆ. ಇಂತಹ ಕೃತ್ಯವೆಸಗಿದ ಅಪರಾಧಿಗೆ ನ್ಯಾಯಾಲಯವು ಕನಿಷ್ಟ ಒಂದು ವರ್ಷ ಸೆರೆವಾಸ ಮತ್ತು ೨೦,೦೦೦ ರೂಪಾಯಿವರೆಗೂ ದಂಡ ವಿಧಿಸಬಹುದು. ಕೌಟುಂಬಿಕ ದೌರ್ಜನ್ಯವೆನ್ನುವುದು ಕೇವಲ ಗಂಡ-ಹೆಂಡತಿಗೆ ಸಂಬಂಧಪಟ್ಟ ವಿಷಯವಲ್ಲ, ಒಂದೇ ಮನೆಯಲ್ಲಿ ವಾಸಿಸುತ್ತಿರುವ ಯಾವುದೇ ಪುರುಷ ಸಂಬಂಧಿಯಿಂದ ಸಂಕಷ್ಟಕ್ಕೊಳಗಾಗಿರುವ ವಿಧವೆ, ಮಗಳು, ತಾಯಿ, ಸಹೋದರಿ ಹಾಗೂ ವಿವಾಹದ ಮೂಲಕ ಸಂಬಂಧಿ ಮಹಿಳೆ ಮತ್ತು ಒಂದೇ ಸೂರಿನಡಿ ವಾಸಿಸುತ್ತಿರುವ ಒಬ್ಬಂಟಿ ಮಹಿಳೆಯರು ಈ ಕಾನೂನಿನ ಸಹಾಯ ಪಡೆಯಬಹುದು. ಪತಿ ಹಾಗೂ ಇತರ ಯಾವುದೇ ಗಂಡು ಸಂಬಂಧಿಯು ಮಹಿಳೆಗೆ ವರದಕ್ಷಿಣೆ ಕಿರುಕುಳ ನೀಡುವುದು, ಹಣಕ್ಕಾಗಿ ಬೇಡಿಕೆ ಒಡ್ಡುವುದು, ಬೆದರಿಸುವುದು, ಹೊಡೆಯುವುದು ಅವಾಚ್ಯ ಶಬ್ದಗಳಿಂದ ನಿಂದಿಸುವುದು, ಮನೆಯಲ್ಲಿಯೇ ಕೂಡಿ ಹಾಕುವುದು, ಗರ್ಭಪಾತಕ್ಕಾಗಿ ಬಲವಂತ ಮಾಡುವುದು, ಯಾವುದೇ ರೀತಿಯ ದೈಹಿಕ ಮಾನಸಿಕ ಕಿರುಕುಳ ನೀಡುವುದು ಮತ್ತು ಆರ್ಥಿಕ ಅಭದ್ರತೆಗೆ ಒಳಪಡಿಸುವುದಾಗಿ ಬೆದರಿಸುವುದು ಸಹ ಈ ಕಾನೂನಿನ ಪ್ರಕಾರ ಶಿಕ್ಷಾರ್ಹ ಅಪರಾಧ. ಪ್ರಸ್ತುತ ಜಾರಿಗೆ ಬಂದಿರುವ ಮಸೂದೆಯಡಿ ಮಹಿಳೆಯು ಸಿವಿಲ್ ಹಾಗೂ ಕ್ರಿಮಿನಲ್ ಎರಡೂ ವಿಧದ ಮೊಕದ್ದಮೆ ಹೂಡಿ ಪರಿಹಾರ ಪಡೆಯಬಹುದು. ತನಗೆ

ಬರಬೇಕಾದ ಸಾಮಾನು ಹಾಗೂ ಆಸ್ತಿ ಹಕ್ಕನ್ನು ಪಡೆಯಲು ಸಿವಿಲ್ ಪ್ರಕ್ರಿಯೆ ಸಹಾಯ ಮಾಡಿದರೆ, ಕೌಟುಂಬಿಕ ಹಿಂಸೆ ನೀಡಿದ ಅಪರಾಧಿಗೆ ದಂಡ, ಸೆರೆವಾಸದಂತಹ ಶಿಕ್ಷೆಗಾಗಿ ಕ್ರಿಮಿನಲ್ ಮೊಕದ್ದಮೆ ಹೂಡಬಹುದು.

**ಕಾನೂನಿನ ಪ್ರಯೋಜನ ಪಡೆಯುವುದು ಹೇಗೆ?**

ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾದ ಮಹಿಳೆಯು ಮೊದಲು ಪೊಲೀಸ್ ಠಾಣೆಯಲ್ಲಿ ಲಿಖಿತ ದೂರು ದಾಖಲಿಸಬೇಕು. ನಂತರ ಆ ವ್ಯಾಪ್ತಿಯ ಮ್ಯಾಜಿಸ್ಟ್ರೇಟ್ ಸಂರಕ್ಷಣಾ ಕ್ರಮಾದೇಶ ಹೊರಡಿಸುವ ಮೂಲಕ ಮಹಿಳೆಗೆ ರಕ್ಷಣೆ ಒದಗಿಸಲು ಮುಂದಾಗಬಹುದು. ಅಪರಾಧ ಸಾಬೀತು ಆದಲ್ಲಿ ನ್ಯಾಯಾಲಯವು ಅಪರಾಧಿಗೆ ಸೆರೆವಾಸದಂತಹ ಶಿಕ್ಷೆ ವಿಧಿಸುವುದು ಮಾತ್ರವಲ್ಲ ದೌರ್ಜನ್ಯಕ್ಕೊಳಗಾದ ಮಹಿಳೆಯ ಆಸ್ತಿ ರಕ್ಷಣೆಯನ್ನು ಮಾಡಿಸಬಹುದು. ಈ ನಿಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳನ್ನು 'ಸಹಾಯ ಸೇವೆ ನೀಡುವವರು' ಎಂದು ಗುರುತಿಸಲಾಗಿದೆ. ತೊಂದರೆ ಗೀಡಾದ ಮಹಿಳೆಯರಿಗೆ ಕಾನೂನು, ವೈದ್ಯಕೀಯ ಮತ್ತು ತಾತ್ಕಾಲಿಕ ವಸತಿ ನೆರವು ನೀಡಬಯಸುವ ಸರ್ಕಾರೇತರ ಸಂಸ್ಥೆಗಳು ಈ ಕಾನೂನಿನಡಿ ನೋಂದಾಯಿಸಿಕೊಳ್ಳಬೇಕಾಗುತ್ತದೆ.

ಮಹಿಳೆಯ ಸಂದರ್ಭದಲ್ಲಿ ಅತ್ಯಂತ ಪ್ರಮುಖವಾದ ಅಂಶ ಹಾಗೂ ಸಾಮಾಜೀಕಕ್ಕೆ ಸಾಮಿಪ್ಯ ವಾಗಿ ವಾಸ್ತವವಾಗಿರುವ 'ಸಂಪನ್ಮೂಲ' ಎಂಬ ವಿಷಯವನ್ನು ಗಮನದಲ್ಲಿಟ್ಟುಕೊಂಡು ಆಧುನಿಕ ಕುಟುಂಬಗಳಲ್ಲಿನ ಸ್ತ್ರೀಯ ಸಂಪನ್ಮೂಲಗಳ ಹಂಚಿಕೆಯಲ್ಲಿ ಹೊಂದಿರುವ ತನ್ನ ಸಂಬಂಧ ಸ್ವರೂಪವನ್ನು ವಿಶ್ಲೇಷಿಸುವ ಉದ್ದೇಶದಿಂದ ಈ ಅಧ್ಯಯನದ ಭಾಗವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಕೇವಲ ೧೦೦ ಕುಟುಂಬಗಳನ್ನು ಮಾತ್ರ ಸೀಮಿತವಾಗಿಟ್ಟು ಕೊಂಡು ಸಂದರ್ಶನವನ್ನು ಕೈಗೊಳ್ಳಲಾಗಿದೆ. ಈ ಕ್ಷೇತ್ರಾಧಾರಿತ ವಿವರಗಳನ್ನು ಈ ಕೆಳಗಿನಂತೆ ಗುರತಿಸಿಕೊಳ್ಳಬಹುದಾಗಿದೆ.

**ಗುರುತಿಸಿಕೊಳ್ಳಲಾದ ಪ್ರಶ್ನೆಗಳು**

೧. ಹೆಣ್ಣು ಮಕ್ಕಳು ಒಡವೆ ಹೊಂದುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೨. ನೀವು ಮಾಡುವ ಆಸ್ತಿ ಯಾರ ಹೆಸರಿನಲ್ಲಿರಬೇಕು?

೩. ಮಕ್ಕಳ ಲಾಲನೆ ಪಾಲನೆ ಮಾಡುವ ಕುರಿತು ಸ್ತ್ರೀಗೆ ಹೆಚ್ಚಿನ ಹಕ್ಕುಗಳಿರಬೇಕೆ?

೪. ಹೆಣ್ಣು ಮಕ್ಕಳ ದುಡಿಮೆಯ ಮೇಲೆ ಆತನ ಕುಟುಂಬದವರ ಪಾಲೇನು?

೫. ಮನೆಯಲ್ಲಿ ಕೊಳ್ಳುವ ವಸ್ತುಗಳ ಆಯ್ಕೆ ಯಾರದು?

೬. ಸಿನಿಮಾ / ಪ್ರವಾಸ / ಸ್ನೇಹಿತ / ಸಂಬಂಧಿಕರ ಮನೆಗೆ ಹೋಗುವ ಹವ್ಯಾಸವಿದೆಯೇ? ಹೇಗೆ ಹೋಗುತ್ತೀರಿ?

೭. ಹೆಣ್ಣು ಮಕ್ಕಳ ಉದ್ಯೋಗದ ಗುರಿ ಏನಾಗಿರಬೇಕು?

೮. ಕುಟುಂಬದ ಆದಾಯ ವೆಚ್ಚದ ಹೊಣೆ ಯಾರದು?

೯. ಗಂಡ ಮಕ್ಕಳು ಮನೆಯಲ್ಲಿ ಇಲ್ಲದ ಸಮಯದಲ್ಲಿ ನೀವು ಒಬ್ಬರೇ ಇದ್ದಾಗ ನಿಮ್ಮ ಊಟದ ವ್ಯವಸ್ಥೆ ಹೇಗಿರುತ್ತದೆ?

೧೦. ಗಂಡನ ದುಡಿಮೆಯ ಮೇಲೆ ಆತನ ಕುಟುಂಬದವರ ಪಾಲೇನು?




ಮೇಲಿನ ೩.೧ರ ವೃತ್ತಚಿತ್ರದಲ್ಲಿ ಕಾಣುವಂತೆ ಒಡವೆಗಳ ಅಗತ್ಯತೆ ಕುರಿತು ಪ್ರಶ್ನಿಸಿದಾಗ ಶೇ. ೪೮ ರಷ್ಟು ಕುಟುಂಬಗಳು ಅಲಂಕಾರಕ್ಕಾಗಿ ಒಡವೆಗಳು ಅಗತ್ಯವೆಂದು ಹೇಳಿದರೆ. ಶೇ. ೨೯ ರಷ್ಟು ಕುಟುಂಬದ ಮಹಿಳೆಯರು ಭದ್ರತೆಗೆ ಎನ್ನುತ್ತಾರೆ. ಶೇ. ೯ ರಷ್ಟು ಕುಟುಂಬದವರು ಪ್ರತಿಷ್ಠೆಗಾಗಿ ಒಡವೆಗಳು ಅಗತ್ಯವಾಗಿರುತ್ತದೆ ಎಂದಾದರೆ, ಶೇ. ೧೪ ರಷ್ಟು ಕುಟುಂಬದ ಸ್ತ್ರೀಯರು ತಮಗೆ ಒಡವೆಗಳ ಅಗತ್ಯವೇ ಇಲ್ಲವೆನ್ನುತ್ತಾರೆ. ಒಟ್ಟಾರೆಯಾಗಿ ಅಲಂಕಾರ, ಭದ್ರತೆ ಹಾಗೂ ಪ್ರತಿಷ್ಠೆಗಳಿಗೆ ಒಡವೆಗಳ ಅಗತ್ಯತೆಯನ್ನು ಹೊಂದಿರಬೇಕು ಎಂಬ ಕುಟುಂಬಗಳು ಹೆಚ್ಚಿನ ಅಭಿಪ್ರಾಯ ವನ್ನು ವ್ಯಕ್ತಪಡಿಸುವುದು ಕಾಣಸಿಗುತ್ತದೆ. ಒಡವೆಗಳ ಅಗತ್ಯ ತೋರಿಸುವಂತೆ ಆಧುನಿಕ ಕುಟುಂಬ ಗಳಲ್ಲಿ ಮಹಿಳೆಯರು ಒಡವೆ ಹೊಂದುವುದರ ಬಗ್ಗೆ ತಿಳಿದುಕೊಳ್ಳುವುದಗೋಸ್ಕರ ಈ ಪ್ರಶ್ನೆಯನ್ನು ಕೇಳಲಾಯಿತು. ಹೆಚ್ಚಿನ ರೀತಿಯ ಮಹಿಳೆಯರ ಹೇಳಿಕೆ ಅಲಂಕಾರಕ್ಕೆಂದು ಹೇಳಿದರೂ ಸಹ ಇನ್ನೊಂದು ಅರ್ಥದಲ್ಲಿ ಬೇರೆಯ ಸ್ವರೂಪ ಪಡೆದುಕೊಳ್ಳುತ್ತದೆ. ಅದು ಏನೆಂದರೆ ಅವಳು

ಒಡವೆ ಹೊಂದುವುದು ಸ್ವಂತ ಅಭಿಪ್ರಾಯದ ಮೇರೆಗೆ ಇಲ್ಲ. ಗಂಡನಿಗೋಸ್ಕರ ಹಾಕಿಕೊಳ್ಳಬೇಕು. ಮಹಿಳೆಯರು ಅಭರಣ ಪ್ರೀಯರು ಎಂದು ಹೇಳುತ್ತಿದೆ ಈ ಸಮಾಜ. ಆದರೆ ಮೇಲ್ನೋಟಕ್ಕೆ ಹಾಗೆ ಎನಿಸಿದರೂ ಒಳರ್ಥದಲ್ಲಿ ಅದರ ಹಿಂದಿನ ಉದ್ದೇಶವೇ ಬೇರೆಯಾಗಿ ಕಂಡುಬರುತ್ತದೆ. ತಮ್ಮ ಕಷ್ಟದ ಸಂದರ್ಭದಲ್ಲಿ ತಮಗೆ ಬೇರೆ ಯಾರು ಸಹಾಯ ಮಾಡದಿದ್ದ ಪಕ್ಷದಲ್ಲಿ ಈ ವಸ್ತುಗಳನ್ನಾದರೂ ಅಡವಿಟ್ಟು ಬದುಕಬಹುದೆಂಬ ಉದ್ದೇಶ ಹೊಂದಿರುತ್ತಾರೆ. ಬದಲಾವಣೆಯ ಆಧುನಿಕ ಸಂದರ್ಭದಲ್ಲಿಯೂ ಮಹಿಳೆಯರು ನೀಡಿರುವ ಮಾಹಿತಿಯಿಂದ ತಿಳಿದುಬರುವ ಅಂಶವೆಂದರೆ ತನ್ನ ದುಡಿಮೆಯಿಂದ ತಾನು ಸ್ವತಂತ್ರವಾಗಿ ಖರ್ಚು ಮಾಡುವಂತಹ ಅಧಿಕಾರ ಅವಳು ಇನ್ನೂ ಪಡೆದುಕೊಳ್ಳುತ್ತಿಲ್ಲ. ತನಗಾಗಿಯೇ ಎಂದು ಯಾವತ್ತು ಏನನ್ನೂ ಪಡೆಯುತ್ತಿಲ್ಲ. ಇಂದಿಗೂ ಸಂಪ್ರದಾಯ ಚೌಕಟ್ಟನ್ನು ಮುಂದವರೆಸಿಕೊಂಡೇ ಅವಳು ಜೀವನ ಸಾಗಿಸುವಂತಾಗಿದೆ. ಒಡವೆಗಳನ್ನು ಮಹಿಳೆ ಹಠಮಾಡಿ ಪಡೆದರೂ ಅಲ್ಲಿ ಅವಳ ಸ್ವಾರ್ಥ ಬುದ್ಧಿ ಇರುವುದಿಲ್ಲ.




ಮೇಲ್ಕಾಣಿಸಿದ ೩.೨ರ ವೃತ್ತಚಿತ್ರವನ್ನು ಗಮನಿಸಿದಾಗ ಆಸ್ತಿ ಯಾರ ಹೆಸರಿನಲ್ಲಿ ಇರಬೇಕು ಎಂದು ಕುಟುಂಬಗಳಿಗೆ ಕ್ಷೇತ್ರಕಾರ್ಯದಲ್ಲಿ ಪ್ರಶ್ನಿಸಿದಾಗ ಶೇ. ೧೩ ರಷ್ಟು ಕುಟುಂಬದ ಸ್ತ್ರೀಯರು ಗಂಡನ ಹೆಸರಿನಲ್ಲಿ ಆಸ್ತಿ ಇರಬೇಕು ಎಂದು ವ್ಯಕ್ತಪಡಿಸುತ್ತಾರೆ. ಶೇ. ೧೫ ರಷ್ಟು ಕುಟುಂಬದ ಮಹಿಳೆಯರು ತಮ್ಮ ಹೆಸರಿನಲ್ಲಿರಬೇಕು ಎಂದಾದರೆ, ಶೇ. ೭೨ ರಷ್ಟು ಪ್ರಮಾಣದ ಕುಟುಂಬವರ್ಗವು ಇಬ್ಬರ ಹೆಸರಿನಲ್ಲಿ ಆಸ್ತಿಯನ್ನು ಇರಿಸಬೇಕು ಎಂದು ಬಯಸುತ್ತಾರೆ. ಇದರಿಂದ ಪ್ರಸ್ತುತ ಕುಟುಂಬ ಗಳಲ್ಲಿ ಆಸ್ತಿ ಯಾರ ಹೆಸರಿನಲ್ಲಿ ಇರುತ್ತದೆ ಎಂದು ತಿಳಿದುಕೊಳ್ಳುವುದರ ಮೂಲ ಉದ್ದೇಶವಾಗಿದೆ. ಗಂಡ-ಹೆಂಡತಿ ಇಬ್ಬರೂ ಆಧುನಿಕ ಕುಟುಂಬಗಳಲ್ಲಿ ಉದ್ಯೋಗ ಮಾಡುತ್ತಲ್ಲಿದಿದ್ದರೂ ಕೂಡ ಇಂದಿಗೂ ಸಂಪೂರ್ಣ ಆಸ್ತಿಯ ಹೆಸರು ಗಂಡಂದಿರೇ ಮಾಡಿಕೊಂಡಿರುತ್ತಾನೆ. ಇಲ್ಲಿ ಹೇಳಿಕೆ

ನೋಡಿದರೆ ತನ್ನ ಹೆಸರಿಗೆ ಎಂಬುವವರು ಕೇವಲ ಬೆರಳೆಣಿಕೆಯಷ್ಟು ಜನರು ಮಾತ್ರ. ಮಹಿಳೆಯರು ಇಂದು ಅರಿವಿನ ಜ್ಞಾನ ಪಡೆದಿದ್ದಾರೆ ಆದ್ದರಿಂದಲೇ ಗಂಡ ಹೆಂಡತಿ ಇಬ್ಬರ ಹೆಸರಿನಲ್ಲಿ ಬ್ಯಾಂಕಿನಲ್ಲಿ ಖಾತೆ ಹೊಂದುತ್ತಿದ್ದಾರೆ. ಇಬ್ಬರ ಹೆಸರಿನಲ್ಲಿ ಆಸ್ತಿ ಇರುವುದರಿಂದ ಯಾರಿಗೂ ಸಂಶಯ ಬೇಡ ಇಬ್ಬರೂ ಸೇರಿಯೇ ಹಣ ತೆಗೆದುಕೊಳ್ಳಬಹುದು ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ತನ್ನ ಹೆಸರಿಗೆ ಅಂತ ಪ್ರತ್ಯೇಕವಾದ ಖಾತೆಗಳನ್ನು ಇಂದಿಗೂ ಮಹಿಳೆಯರು ತೆಗೆದುಕೊಳ್ಳಲು ಹಿಂಜರಿಯುತ್ತಾರೆ. ವಿನಃ ಕಾರಣ ಮನೆಯಲ್ಲಿ ಜಗಳ ಉಂಟಾಗಬಹುದು. ಗಂಡನ ಅನುಮತಿ ಪಡೆಯದೇ ಯಾವುದೇ ಕೆಲಸಕ್ಕೂ ಅವಳು ಮುಂದಾಗುವಂತಿಲ್ಲ. ಕಾರಣ ಅವಳ ಸಂಪೂರ್ಣ ಜವಾಬ್ದಾರಿಯು ಆತನದೆಂದು ನಂಬಿ ಬಂದಿರುತ್ತಾಳೆ. ಇಂದಿಗೂ ಎಷ್ಟೋ ಮಹಿಳೆಯರು ತಾವು ದುಡಿದ ಸಂಬಳವನ್ನೆಲ್ಲಾ ಗಂಡನ ಕೈಗೆ ಹಾಕಿ ದಿನನಿತ್ಯ ತಮ್ಮ ಖರ್ಚಿಗೆ ಬೇಕಾದಷ್ಟು ಹಣವನ್ನು ಕೈಯೊಡ್ಡಿ ಕೇಳಿ ಪಡೆದುಕೊಳ್ಳುತ್ತಾರೆ. ಗಂಡನಿಗೆ ಕೇಳದೆ ತಾನೇ ಏನಾದರೂ ಖರೀದಿಸಿದಿದರೆ ಅದರ ಲೆಕ್ಕಚಾರವನ್ನು ತಂದು ಗಂಡನಿಗೆ ಒಪ್ಪಿಸಬೇಕು.




ಮೇಲ್ಕಾಣಿಸಿದ ೩.೩ರ ವೃತ್ತಚಿತ್ರದಿಂದ ತಿಳಿದುಬರುವ ಅಂಶ ಮಕ್ಕಳ ಪಾಲನೆ ಯಾರ ಜವಾಬ್ದಾರಿಯಾಗಿರುತ್ತದೆ. ಆಧುನಿಕ ಕುಟುಂಬಗಳಲ್ಲಿ ಮಕ್ಕಳ ಪಾಲನೆ-ಪೋಷಣೆಯಲ್ಲಿ ತಂದೆ-ತಾಯಿಯರ ಜವಾಬ್ದಾರಿ ಅರಿತುಕೊಳ್ಳುವುದಾಗಿದೆ. ಈ ಪ್ರಶ್ನೆಗೆ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದರೆ ಸ್ವಲ್ಪ ಮಟ್ಟಿಗೆ ಬದಲಾವಣೆ ಕಾಣಬಹುದು. ಇಬ್ಬರ ಜವಾಬ್ದಾರಿಯನ್ನುವ ಕುಟುಂಬಗಳು ಕೇವಲ ಶೇ. ೨೫ ರಷ್ಟು ಆದರೆ ಶೇ. ೭೫ ರಷ್ಟು ಮಹಿಳೆಯರು ತಮ್ಮ ಜವಾಬ್ದಾರಿಯೆಂದೇ ಒಪ್ಪಿಕೊಂಡಿದ್ದಾರೆ. ಕಾರಣ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯನ್ನು ಮುಂಚಿನಿಂದಲೂ ಮಕ್ಕಳ,

ಪಾಲನೆ-ಪೋಷಣೆ ಇವಳದೇ ಎಂದು ವಿಧಿಸಿರುವುದರಿಂದಾಗಿಯೇ ಅದನ್ನು ಅವಳು ಮೀರದಂತೆ ಮುಂದುವರೆಸಿಕೊಂಡು ಹೋಗುತ್ತಿದ್ದಾಳೆ. ಇಂದಿನ ದಿನಗಳಲ್ಲಿ ಪುರುಷ ಮತ್ತು ಮಹಿಳೆ ಇಬ್ಬರು ಸೇರಿಯೇ ನೋಡಿಕೊಳ್ಳಬೇಕೆಂಬ ನಿರ್ಣಯಕ್ಕೆ ಬರುತ್ತಿದ್ದಾರೆ. ಆದರೂ ಕಾರ್ಯ ನಿರತದಲ್ಲಿ ನೋಡಿದರೆ ಮಹಿಳೆಯ ಜವಾಬ್ದಾರಿಯೇ ಹೆಚ್ಚಿನ ರೀತಿಯಲ್ಲಿರುವುದನ್ನು ಕಾಣಬಹುದಾಗಿದೆ.




ವೃತ್ತಚಿತ್ರ ೩.೪ರಿಂದ ಕಾಣಸಿಗುವ ಅಂಶ ತವರಿಗೆ ಹೆಣ್ಣಿನ ದುಡಿಮೆಯ ಪಾಲಿದೆಯೇ ಎಂಬ ಪ್ರಶ್ನೆಗೆ ಶೇ. ೫೭ ರಷ್ಟು ಮಹಿಳೆಯರು ತಮಗೆ ತವರಿನ ಮೇಲೆ ಯಾವುದೇ ಪಾಲಿಲ್ಲ ಎಂದಾದರೆ, ಶೇ. ೪೩ ರಷ್ಟು ಮಹಿಳೆಯರು ತಮಗೂ ತಮ್ಮ ತವರಿನ ಮೇಲೆ ಪಾಲು ಇದೆ ಎನ್ನುವ ಅಭಿಪ್ರಾಯಕ್ಕೆ ಬರುವುದನ್ನು ನಾವು ವೃತ್ತಚಿತ್ರದಿಂದ ಕಾಣಸಿಗುವುದು. ಅನೇಕ ಕುಟುಂಬ ದವರು ಹಿಂದಿನಿಂದಲೂ ಮಹಿಳೆಯ ದುಡಿಮೆಯ ಮೇಲೆ ತವರು ಮನೆಯವರು ಯಾವುದೇ ಪಾಲನ್ನು ಪಡೆದುಕೊಂಡಿರುವುದಿಲ್ಲ. ಕಾರಣ ತಮ್ಮ ಮಗಳು ಬೇರೆಯವರ ಮನೆಯಲ್ಲಿ ಬದುಕಿ ಬಾಳುವಳು. ಹೀಗಾಗಿ ತನ್ನ ಗಂಡನನ್ನೇ ಎಲ್ಲದಕ್ಕೂ ಹಣ ಕೇಳುವಂತಾಗಬಾರದು, ಎಂದೇ ಶಿಕ್ಷಣ ಮತ್ತು ಉದ್ಯೋಗ ಮಾಡಲು ಪ್ರೋತ್ಸಾಹಿಸಿರುತ್ತಾರೆ. ಹೀಗಾಗಿಯೇ ಹೆಣ್ಣುಮಕ್ಕಳ ಹಣ ತಿಂದರೆ ತಮಗೆ ಪಾಪ ಬರುತ್ತದೆ ಎಂಬ ಕಲ್ಪನೆಯಲ್ಲಿಯೇ ಇರುತ್ತಾರೆಯೇ ವಿನಃ ಅವಳಿಂದ ಯಾವುದೇ ಅಪೇಕ್ಷೆ ಬಯಸುವುದಿಲ್ಲ. ಮೇಲಿನ ವೃತ್ತಚಿತ್ರವನ್ನು ಗಮನಿಸಿದಾಗ ಇಲ್ಲಿ ಮಹಿಳೆಯರ ಹೇಳಿಕೆ ಶೇ. ೪೩ ರಷ್ಟು ಜನರು ಪಾಲು ಇದೆ ಎಂದು ಹೇಳುತ್ತಾರೆ. ಆದರೆ ಹೇಳುವ ಮಟ್ಟಿಗೆ ಜ್ಞಾನ ಪಡೆದಿದ್ದಾರೆ. ಅದನ್ನು ಕಾರ್ಯರೂಪದಲ್ಲಿ ಇನ್ನೂ ಬರುವುದು ದುಸ್ತರವಾಗಿದೆ. ಇವರಿಗಾಗಿ ಕೊಡಲು ಬಯಸಿದರೂ ಇವರಿಗೆ ಅಲ್ಲಿ ಅಧಿಕಾರವಿರುವುದಿಲ್ಲ. ತಂದೆ-ತಾಯಿಗಳು ಮಗಳು ಎಂಬ ಅಭಿಪ್ರಾಯ ದಿಂದ ಕೇಳಲೂ ಮುಂದಾಗುವುದಿಲ್ಲ. ಕಾರಣ ಅವಳ ಸಂಪೂರ್ಣ ಅಧಿಕಾರದ ಜವಾಬ್ದಾರಿ ಗಂಡ ಹೊತ್ತಿಕೊಂಡಿರುತ್ತಾನೆ.




೩.೫ರ ವೃತ್ತಚಿತ್ರದಿಂದ ಗಮನಿಸಬೇಕಾಗಿರುವ ಅಂಶವೆಂದರೆ ಮನೆಯಲ್ಲಿ ಯಾವುದೇ ವಸ್ತುಗಳನ್ನು ಕೊಳ್ಳುವ ಆಯ್ಕೆ ಯಾರದು ಎಂಬ ಪ್ರಶ್ನೆಯಿಂದ ಅನೇಕ ಕುಟುಂಬದವರ ಅಭಿಪ್ರಾಯ ಗಳು ಈ ರೀತಿಯಾಗಿವೆ. ಶೇ. ೧೫ ರಷ್ಟು ಗಂಡ ಮತ್ತು ಮಕ್ಕಳು ಸೇರಿ ಎಂದಾದರೆ, ಶೇ. ೪೦ ರಷ್ಟು ಮಹಿಳೆಯರದು ಎಂಬುದಾಗಿದೆ. ಶೇ. ೪೫ ರಷ್ಟು ಕುಟುಂಬಗಳು ಕುಟುಂಬದವರೆಲ್ಲರೂ ಸೇರಿ ಆಯ್ಕೆ ಮಾಡುವ ಅಭಿಪ್ರಾಯವನ್ನು ನೀಡಿದ್ದಾರೆ. ಒಟ್ಟಾರೆಯಾಗಿ ಶೇ. ೬೦ರಷ್ಟು ಕುಟುಂಬ ಗಳಲ್ಲಿ ಮಹಿಳೆಗೆ ಆಯ್ಕೆಯಲ್ಲಿ ಅವಕಾಶ ನೀಡುತ್ತಿರುವುದು ಕಾಣಬಹುದಾಗಿದೆ. ಈ ಹಿಂದಿನ ದಿನಗಳಲ್ಲಿ ಎಲ್ಲಾ ವಸ್ತುಗಳನ್ನು ಖರೀದಿಸ ಬೇಕಾದರೂ ಗಂಡಸರೇ ನಿರ್ಧರಿಸುತ್ತಿದ್ದರೂ. ಆದರೆ ಆಧುನಿಕ ಕುಟುಂಬಗಳಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆ ಅನ್ನುವುದಕ್ಕಿಂತಲೂ ಮಹಿಳೆಯ ಅಭಿಪ್ರಾಯಕ್ಕೆ ಮನ್ನಣೆ ನೀಡುತ್ತಿರುವುದು ಕಾಣಬಹುದು. ಕುಟುಂಬದ ಎಲ್ಲಾ ಸದಸ್ಯರುಗಳು ಸೇರಿಯೇ ಆಯ್ಕೆ ಮಾಡುವ ಪರಿಸ್ಥಿತಿಗೆ ಬಂದಿದ್ದಾರೆ. ಬದಲಾವಣೆ ಯಾಗುತ್ತಿರುವುದು ಕಾಣಬಹುದು. ಹಿಂದಿನ ದಿನಗಳಲ್ಲಿ ತಮ್ಮ ಗಂಡದಿರು ತಂದ ಯಾವುದೇ ವಸ್ತುಗಳಿಗೂ ಅವಳು ತಿರಸ್ಕರಿಸುತ್ತಿರ ಲಿಲ್ಲ. ಆದರೆ ಇವತ್ತಿನ ಸಂದರ್ಭದಲ್ಲಿ ನೀವು ತಂದಿರುವ ಸಾಮಾನು ಸರಿಯಾದುದಿಲ್ಲ ಎಂದು ಹೇಳುವಷ್ಟರ ಮಟ್ಟಿಗೆ ಅಲ್ಲದೆ ತಮ್ಮ ಗಂಡನ ಜೊತೆಗೆ ತಾವು ಹೋಗಿ ಇಬ್ಬರ ಆಯ್ಕೆಯ ಮೇರೆಗೆ ತರುವುದನ್ನು ನೋಡುತ್ತಿದ್ದೇವೆ.

ಮುಂದಿನ ೩.೬ರ ವೃತ್ತಚಿತ್ರದಿಂದ ಕಂಡುಬರುವ ಅಭಿಪ್ರಾಯಗಳು ಹೊರಗಡೆ ಹೋಗುವ ಆಯ್ಕೆ ಯಾರದ್ದಾಗಿರುತ್ತದೆ ಎಂಬ ಪ್ರಶ್ನೆಯನ್ನು ಕುಟುಂಬಗಳಿಗೆ ಕೇಳಿದಾಗ. ಶೇ. ೧೪ ರಷ್ಟು ಕುಟುಂಬಗಳು ಗಂಡ ಮತ್ತು ಮಕ್ಕಳು ಹೊರಗಡೆ ಹೋಗುವ ಆಯ್ಕೆಯನ್ನು ಮಾಡುತ್ತಾರೆ ಎಂಬ ಅಭಿಪ್ರಾಯವನ್ನು ನೀಡುತ್ತಾರೆ. ಶೇ. ೧೨ ರಷ್ಟು ಕುಟುಂಬಗಳಲ್ಲಿ ಮಹಿಳೆಯರೇ ಎಂದಾದರೆ,




ಶೇ. ೭೪ ರಷ್ಟು ಕುಟುಂಬಗಳು ಕುಟುಂಬದವರೆಲ್ಲ ಸೇರಿ ಹೊರಗಡೆ ಹೋಗುವ ಆಯ್ಕೆಯನ್ನು ಮಾಡುತ್ತೇವೆ ಎಂದು ಹೇಳುತ್ತಾರೆ. ಈ ಎಲ್ಲಾ ಹೇಳಿಕೆಗಳನ್ನು ಗಮನಿಸಿದಾಗ ಮಹಿಳೆಯೂ ಆಧುನಿಕ ಸಂದರ್ಭದಲ್ಲಿ ಶಿಕ್ಷಣ ಪಡೆದು ಉದ್ಯೋಗ ಮಾಡಿ ಎಲ್ಲದರಲ್ಲೂ ಗಂಡನಿಗೆ ಸರಿಸಮಾನ ವಾಗಿ ಕೆಲಸ ನಿರ್ವಹಸಿದರೂ ಸಹ ಅವಳು ಸ್ವತಂತ್ರವಾಗಿ ತಮ್ಮ ಸ್ನೇಹಿತರ ಮನೆಗೆ / ಬಂಧಬಳಗ ದವರ ಮನೆಗೆ / ಸೀನಿಮಾಕ್ಕೆ ಹೋಗಬೇಕಾದರೂ ಅವಳು ಯಾವುದೇ ಸ್ವಂತ ಆಯ್ಕೆ ಎನ್ನುವುದು ಪಡೆದಿಲ್ಲದಿರುವುದನ್ನು ಕಾಣುತ್ತಿದ್ದೇವೆ. ಸ್ವಲ್ಪಮಟ್ಟಿಗಿನ ಬದಲಾವಣೆಯನ್ನು ಕಂಡುಬಂದರೂ ಮೂಲದಿಂದಲೂ ಸಂಪ್ರದಾಯವನ್ನು ಮೈಗೂಡಿಸಿಕೊಂಡು ಬೆಳೆದಿರುವುದರಿಂದಾಗಿಯೇ ಅದನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದಾಳೆ. ಅರಿವಿನ ಜ್ಞಾನವೃದ್ಧಿಯಾಗುತ್ತಲಿದ್ದರೂ ಸಂಪೂರ್ಣವಾದ ಬದಲಾವಣೆ ಇನ್ನೂ ಆಗುತ್ತಿಲ್ಲ. ಹಂತಹಂತವಾಗಿ ಬದಲಾವಣೆಯಾಗುತ್ತಿರುವುದನ್ನು ಕಾಣಬಹು ದಾಗಿದೆ. ಹಿಂದಿನ ಕಾಲದಲ್ಲಿ ಎಲ್ಲವೂ ಗಂಡನ ಆಯ್ಕೆಯ ಮೇರೆಗೆ ನಡೆಯುತ್ತಿತ್ತು. ಆದರೆ ಈಗ ಅವಳ ಅಭಿಪ್ರಾಯಕ್ಕೂ ಸ್ಪಂದನೆ ಇರುತ್ತಲಿದೆ. ಮಹಿಳೆಯೂ ತನ್ನ ಸ್ನೇಹಿತೆಯರೊಂದಿಗೆ ಹೊರಗಡೆ ಹೋಗಲು ಇಚ್ಛಿಸಿದರೂ. ಅನುಮತಿ ಇಲ್ಲದಾಗ, ತನ್ನ ಸಹ ಕುಟುಂಬದವರೆಲ್ಲರೂ ಸೇರಿ ಹೋಗಿ ಬರುವುದಾಗಿ ತಿಳಿಸಿರುತ್ತಾರೆ.

೩.೭ರ ವೃತ್ತಚಿತ್ರದಲ್ಲಿ ಕಾಣುವಂತೆ ಹೆಣ್ಣು ಮಕ್ಕಳ ಉದ್ಯೋಗದ ಗುರಿ ಏನಾಗಿರುತ್ತದೆ ಎಂಬ ಪ್ರಶ್ನೆಯನ್ನು ಕೇಳಿದಾಗ. ಶೇ. ೨೪ ರಷ್ಟು ಕುಟುಂಬದ ಮಹಿಳೆಯರು ಸ್ವಾವಲಂಬನೆಗಾಗಿ ನಮ್ಮ ಉದ್ಯೋಗದ ಗುರಿಯಾಗಿರುತ್ತದೆ ಎಂದಾದರೆ, ಶೇ. ೭೬ ರಷ್ಟು ಕುಟುಂಬದ ಸ್ತ್ರೀಯರು ತಮ್ಮ ಕುಟುಂಬದ ಒಳಿತಿಗಾಗಿ ನಾವು ಉದ್ಯೋಗದ ಗುರಿಯನ್ನು ಹೊಂದಿರುತ್ತೇವೆ ಎನ್ನುತ್ತಾರೆ. ಆಧುನಿಕ ಕುಟುಂಬಗಳಲ್ಲಿ ಮಹಿಳೆಯರು ಶಿಕ್ಷಣ ಹೊಂದಿದ್ದರೂ ಅವರ ಉದ್ಯೋಗದ ಬಗ್ಗೆ




ಇರುವ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದಾಗಿದೆ. ಪ್ರಸ್ತುತ ಸಂದರ್ಭದಲ್ಲಿಯೂ ಮಹಿಳೆಯರಿಗೆ ತಾನು ಯಾವ ರೀತಿಯ ಶಿಕ್ಷಣ ಪಡೆಯಬೇಕು ಎನ್ನುವ ವಿಷಯದಲ್ಲಿ ನಿರ್ಧಾರ ತೆಗೆದುಕೊಳ್ಳುವವರು ಇಂದಿಗೂ ಅವರ ತಂದೆ-ತಾಯಂದಿರೇ. ತಾನು ಇಂತಹದೇ ಶಿಕ್ಷಣವೇ ಪಡೆಯಬೆಕೆಂದರೂ ಅವರು ತಮ್ಮ ಆರ್ಥಿಕ ಪರಿಸ್ಥಿತಿಯ ಕಾರಣ ಒಡ್ಡಿಯೋ ಇಲ್ಲ ನಾಳೆ ನೀನು ಏನೇ ಓದಿದರೂ ಗಂಡನ ಮನೆಗೆ ಸೇರುವವಳು ನಿನಗೇಕೆ? ಇಷ್ಟೊಂದು ಖರ್ಚು ಮಾಡುವುದು? ಜ್ಞಾನಕ್ಕೆ ಎಷ್ಟು ಶಿಕ್ಷಣ ಬೇಕು ಅಷ್ಟು ಹೆಚ್ಚಿನ ಶಿಕ್ಷಣ ಪಡೆದುದಕ್ಕೆ ಸಾಧಿಸುವುದಾದರೂ ಏನು? ಎಂದು ಅವಳ ತಲೆಯಲ್ಲಿ ತುಂಬಿರುವುದರಿಂದಾಗಿಯೇ ಅವಳು ಕೂಡ ಅವರ ಹೇಳಿಕೆಗೆ ಒಪ್ಪಿಕೊಳ್ಳುತ್ತಾರೆ. ಮನೆಯಿಂದಲೇ ಲಿಂಗ ತಾರತಮ್ಯತೆಯಿಂದ ಬೆಳೆಸಿರುತ್ತಾರೆ. ಈ ಪುರುಷ ಪ್ರಧಾನ ವ್ಯವಸ್ಥೆ. ಹೀಗಾಗಿಯೆ ಅವಳು ಅದನ್ನು ನಿರಾಕರಿಸುವಂತಿಲ್ಲ.




೩.೮ರ ವೃತ್ತಚಿತ್ರದಿಂದ ಕುಟುಂಬದ ಆದಾಯ ವೆಚ್ಚದ ಹೊಣೆಗಾರಿಕೆ ಯಾರದ್ದಾಗಿರುತ್ತದೆ ಎಂಬ ಪ್ರಶ್ನೆಯನ್ನು ಕುಟುಂಬಗಳಿಗೆ ಕೇಳಿದಾಗ ಶೇ. ೧೫ ರಷ್ಟು ಮನೆಯ ಯಜಮಾನನಾದ

ಗಂಡನ್ನೇ ನಿರ್ವಹಿಸುತ್ತಾರೆ ಎಂದಾದರೆ, ಶೇ. ೯ ರಷ್ಟು ಕುಟುಂಬದ ಮಹಿಳೆಯರೇ ತಮ್ಮದೇ ಹೊಣೆಗಾರಿಕೆ ಯಾಗಿರುತ್ತದೆ ಎಂದು ಹೇಳುತ್ತಾರೆ. ಶೇ. ೭೬ ರಷ್ಟು ಕುಟುಂಬದವರು ಇಬ್ಬರೂ ಸೇರಿ ಕುಟುಂಬದ ಆದಾಯ ವೆಚ್ಚದ ಹೊಣೆಗಾರಿಕೆಯ ನಿರ್ವಹಣೆಯಾಗಿರುತ್ತದೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಆಧುನಿಕ ಕುಟುಂಬಗಳಲ್ಲಿ ಮಹಿಳೆ ಮನೆಯ ಕೆಲಸದೊಂದಿಗೆ ಹೊರಗಡೆಯ ಕೆಲಸವನ್ನು ನಿರ್ವಹಿಸಿದರೂ ತನ್ನ ಸಂಬಳವನ್ನೆಲ್ಲ ತಂದು ಗಂಡನ ಕೈಯಲ್ಲಿ ಕೊಟ್ಟು ತಮ್ಮ ದಿನನಿತ್ಯದ ಖರ್ಚಿಗೆ ಬೇಕಾದಷ್ಟು ಹಣ ಕೇಳಿ ಪಡೆದುಕೊಳ್ಳುತ್ತಾರೆ. ಒಂದು ವೇಳೆ ಗಂಡನೇ ತನ್ನ ಸಂಬಳ ತಂದು ಹೆಂಡತಿಯ ಕೈಯಲ್ಲಿ ಕೊಟ್ಟರೂ ಪ್ರತಿಯೊಂದರ ಖರ್ಚುಗಳ ಯಾದಿಯನ್ನು ತೋರಿಸಬೇಕು. ಇವತ್ತಿನ ಸಂದರ್ಭದಲ್ಲಿಯೂ ಮಹಿಳೆಯರ ಹೆಸರಿನಲ್ಲಿಯೆ ಪ್ರತ್ಯೇಕ ವಾದ ಬ್ಯಾಂಕ್ ಖಾತೆಗಳಿರುವುದಿಲ್ಲ. ಇಂದು ಬದಲಾವಣೆಗಳು ಕಂಡುಬರುತ್ತಿರುವುದರಿಂದಾಗಿ ಇಬ್ಬರ ಹೆಸರಿನಲ್ಲಿ ಜಾಯಿಂಟ್ ಆಕೌಂಟ್(Joint Account) ತೆಗೆಯುತ್ತಿದ್ದಾರೆ. ಮನೆಯ ಯಜಮಾನನು ಹೊರಗಡೆ ಎಷ್ಟೇ ಖರ್ಚು ಮಾಡಿದರೂ ಅದಕ್ಕೆ ಯಾವುದೇ ರೀತಿಯ ಲೆಕ್ಕಚಾರದ ಯಾದಿ ಇರುವುದಿಲ್ಲ. ಆದರೆ ಅದೇ ಮಹಿಳೆಯೂ ಗಂಡನಿಗೆ ಕೇಳದೆ ಏನೇ ಒಂದು ವಸ್ತುಗಳನ್ನು ಖರೀದಿಸಿದರೂ ಅದಕ್ಕೆ ಅವರ ಗಂಡಂದಿರು ಚಕಾರವೆತ್ತುತ್ತಾರೆ. ಅದು ಅಷ್ಟು ಅವಶ್ಯಕವೇ? ಎಂದೆಲ್ಲ ಪ್ರಶ್ನೆಗಳು ಕೇಳುತ್ತಾ ಅವಳ ಮನಸ್ಸನ್ನು ವಿನಾಃಕಾರಣ ನೋಯಿಸುತ್ತಾರೆ. ಅದು ಅವಳು ಸ್ವಂತಕ್ಕೆ ಎಂದು ಮಾಡದಿದ್ದರೂ ಮನೆಗಾಗಿಯೇ ಮಾಡಿದರೂ ಕೊನೆಗೆ ಅವಳೇ ನೋವನ್ನು ಅನುಭವಿಸಬೇಕು.



ವೃತ್ತಚಿತ್ರ: ೩.೯

ಮೇಲ್ಕಾಣಿಸಿದ ೩.೯ರ ವೃತ್ತಚಿತ್ರದಿಂದ ಗಂಡ, ಮಕ್ಕಳು ಇಲ್ಲದಾಗ ಊಟದ ವ್ಯವಸ್ಥೆ ಯಾವ ರೀತಿಯಾಗಿರುತ್ತದೆ ಎಂಬ ಪ್ರಶ್ನೆಯನ್ನು ಕುಟುಂಬದ ಮಹಿಳೆಯರಲ್ಲಿ ಕೇಳಿದಾಗ. ಶೇ. ೧೮

ರಷ್ಟು ಅಲ್ಪಸ್ವಲ್ಪ ತಯಾರಿಸಿಕೊಳ್ಳುತ್ತೇವೆ ಎಂದಾದರೆ, ಶೇ. ೭೭ ರಷ್ಟು ಪ್ರತಿನಿತ್ಯದಂತೆ ಸ್ವ ಪದ್ಧತಿಯನ್ನು ಅನುಸರಿಸಿ ಊಟದ ವ್ಯವಸ್ಥೆ ಮಾಡಿಕೊಳ್ಳುವುದಾಗಿರುತ್ತದೆ ಎಂಬ ಅಭಿಪ್ರಾಯ ನೀಡಿದರೆ, ಶೇ. ೩ ಹಾಗೂ ಶೇ. ೨ ರಷ್ಟು ಕುಟುಂಬದ ವರ್ಗವು ಯಾವುದೇ ಗೊಜಿಗೆ ಹೋಗುವುದಿಲ್ಲ ಮತ್ತು ತಾಯಿ ಮನೆಯಲ್ಲಿ ಇರುವುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ನಾವು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ: ಗಂಡ, ಮಕ್ಕಳು ಮನೆಯಲ್ಲಿ ಇರುವಾಗ ಊಟದ ವ್ಯವಸ್ಥೆ ಹೇಗೆ ಇರುತ್ತದೆಯೋ ಹಾಗೆಯೇ ಅವರುಗಳು ಮನೆಯಲ್ಲಿ ಇಲ್ಲದ ಸಂದರ್ಭದಲ್ಲಿಯೂ ಮಹಿಳೆ ಮುಂದುವರೆಸಿಕೊಂಡು ಹೋಗಿರುತ್ತಾಳೆಯೋ ಎಂದು ತಿಳಿದುಕೊಳ್ಳುವುದಾಗಿದೆ. ಇಂದಿಗೂ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದಾಗ ತಮ್ಮೊಬ್ಬರಿಗೆ ಏನು ತಯಾರಿಸಿಕೊಳ್ಳಲು ಆಸಕ್ತಿ ತೋರಿಸುವುದಿಲ್ಲ. ತಮ್ಮ ಆರೋಗ್ಯದ ಯೋಚನೆಯೂ ಸಹ ಮಾಡುವುದಿಲ್ಲ. ಅರಿವಿನ ಜ್ಞಾನದಿಂದಾಗಿ ಬದಲಾವಣೆಯ ರೂಪವನ್ನು ಪಡೆದುಕೊಳ್ಳುತ್ತಿದ್ದಾರೆ. ಆದರೂ ಭಾರತೀಯ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ಮಹಿಳೆಗೆ ಹೇಳಿರುವ ಪಾಠವೆಂದರೆ ಪತಿಯೇ ಪರದೈವ, ಆತನ ಊಟದ ನಂತರ ತನ್ನ ಊಟ ಎನ್ನುವ ಭಾವನೆ ತುಂಬಿಕೊಂಡಿರುವುದರಿಂದಾಗಿಯೇ ಹಳೆಯ ಸಂಸ್ಕೃತಿಗಳೊಂದಿಗೆ ಇಂದಿನ ಜೀವನ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.




ಮೇಲಿನ ೩.೧೦ರ ವೃತ್ತಚಿತ್ರದಿಂದ ಗಂಡಿನ ದುಡಿಮೆಯ ಮೇಲೆ ಆತನ ಕುಟುಂಬದವರ ಪಾಲು ಯಾವರೀತಿಯಲ್ಲಿ ಇರುತ್ತದೆ ಎಂಬ ಪ್ರಶ್ನೆಯನ್ನು ಕುಟುಂಬದವರಿಗೆ ಪ್ರಶ್ನಿಸಿದಾಗ ಮೇಲಿನ ಪ್ರಶ್ನೆಯಲ್ಲಿ ಉದ್ಯೋಗ ಆಧುನಿಕ ಕುಟುಂಬಗಳಲ್ಲಿ ಗಂಡನ ದುಡಿಮೆ ಮೇಲೆ ಆತನ ಕುಟುಂಬದವರ ಪಾಲು ಶೇ. ೮೬ ರಷ್ಟು ಇದೆ ಎನ್ನುತ್ತಾರೆ. ಶೇ. ೧೪ ರಷ್ಟು ಕುಟುಂಬದವರು ಇಲ್ಲ ಎನ್ನುವವರು.

ಇದೆ ಎನ್ನುವ ಅಭಿಪ್ರಾಯ ಪಡೆದರೂ ಹೆಂಡತಿ ಮಕ್ಕಳು ಆದ ಮೇಲೆ ನಮ್ಮ ಜವಾಬ್ದಾರಿ ಅವರದೂ ಅದನ್ನು ಬಿಟ್ಟು ತನ್ನ ಮನೆಯವರಿಗೆ ಮಾಡಿದರೆ ನಮ್ಮ ಪಾಲು ಏನು ಎಂದು ಕೇಳುವ ಮಟ್ಟಿನ ಜ್ಞಾನ ಮಹಿಳೆಯರು ಪಡೆದಿದ್ದಾರೆ. ಆದರೆ ಇಲ್ಲ ಅನ್ನುವುದಕ್ಕೆ ಸಮಾಜ ಒಪ್ಪಿಕೊಳ್ಳುವುದಿಲ್ಲ. ಹಿಂದಿನಿಂದಲೂ ಗಂಡು ಮಕ್ಕಳು ತಾವು ದುಡಿದು ತಮ್ಮ ಮನೆಯವರ ಜವಾಬ್ದಾರಿ ಹೊರಬೇಕು ಎನ್ನುತ್ತಾರೆ. ಸ್ವಲ್ಪ ಕಳುಹಿಸುವುದು ಕಡಿಮೆ ಮಾಡಿದರೆ ಹೆಂಡತಿ ಮಾತು ಕೇಳುತ್ತಾನೆ. ಅವಳು ಏನೋ ಮೋಡಿ ಮಾಡಿರಬೇಕೆಂದು ಸುಮ್ಮಸುಮ್ಮನೆ ಅವಳನ್ನು ಗೋಳು ಹಾಕುತ್ತಾರೆ. ಇಲ್ಲವೆ ನಿಂದನೆಗೆ ಗುರಿ ಮಾಡುತ್ತಾರೆ. ಹೀಗಾಗಿಯೇ ಎಷ್ಟೋ ಕುಟುಂಬಗಳಲ್ಲಿ ಗಂಡನ ಸಂಬಳ ಆತನ ಮನೆಯವರಿಗಾದರೆ, ಹೆಂಡತಿ ಸಂಬಳದಲ್ಲಿ ತಾವು ಇಬ್ಬರೂ ಜೀವನ ಸಾಗಿಸುತ್ತಿರುತ್ತಾರೆ.

## ಆಧಾರಗಳು


೧. ಮುಳಗುಂದ ಚ.ವಿ., ನಾಗೇಶ್ ಎಚ್.ವಿ., (ಸಂ) ***ಆಧುನಿಕ ಮಹಿಳೆ ಮತ್ತು ಸಮಾಜ***, ಪ್ರಕಟಣೆ-೨, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, (ಲೇ) 'ಮಹಿಳೆ ಮತ್ತು ಉದ್ಯೋಗ', ಚೂಡಾರತ್ನ ತಿಗಡಿ, ೧೯೮೬

೨. ಆರ್. ಇಂದಿರಾ., ***ಮಹಿಳೆ ಮತ್ತು ಕೌಟುಂಬಿಕ ಹಿಂಸೆ***, (ಶ್ರೀಮತಿ ಕವಿತಾ ಸ್ಮಾರಕ ಉಪನ್ಯಾಸ ಮಾಲೆ-೩) ಶ್ರೀಮತಿ ಯಶೋಧನಾ ರಾಗೌ ಟ್ರಸ್ಟ್, ಮೈಸೂರು, ೨೦೦೨

೩. ಸಮತಾ ಬಿ. ದೇಶಮಾನೆ., ***ಸಮಾಜಶಾಸ್ತ್ರ ಮತ್ತು ಮಹಿಳೆ***, ಚೇತನ ಬುಕ್‌ಹೌಸ್ ಮೈಸೂರು, ೨೦೦೩

೪. ಹೇಮಲತಾ ಮಹರ್ಷಿ., ***ಇಪ್ಪತ್ತೊಂದನೆಯ ಶತಮಾನದತ್ತ ಮಹಿಳೆ, ಕಾನೂನು, ಸಮಾಜ ಮತ್ತು ಮಹಿಳೆ***, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

೫.. ಎಚ್.ಎಸ್. ಶ್ರೀಮತಿ., ***ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ***, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೬. ಚೈತನ್ಯ (ಲೇ) 'ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಸಮಪಾಲು', ವಿಜಯ ಕರ್ನಾಟಕ ದಿನಪತ್ರಿಕೆ, ಸಾಪ್ತಹಿಕ ವಿಜಯ, ದಿ. ೨.೧.೨೦೦೫

'ತವರು ಮನೆ' ಮಹಿಳೆಯ ಭಾವಕೋಶವನ್ನು ಜಿನುಗಿಸುವ ಭಾವ ಗಂಗೋತ್ರಿ, ನಿತ್ಯ ಪರಿವರ್ತನ ಶೀಲ ಸಮಾಜ ಶತಮಾನಗಳಿಂದ ಬಲಾಗುತ್ತಲೇ ಇದೆ. ಆದರೆ ಮಹಿಳೆ ಮಾತ್ರ ಈಗೀಗ ಬದಲಾಗುತ್ತಿದ್ದಾಳೆ, ಬೆಳೆಯುತ್ತಿದ್ದಾಳೆ. ಶೈಕ್ಷಣಿಕವಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಸಾಧಿಸುತ್ತಿರುವ ಮಹಿಳೆಗೆ ಸ್ವಂತಿಕೆಯ ರುಚಿ ಸಿಕ್ಕಿದೆ. ಅವಳಿಗೆ ಸಾಮಾಜಿಕ ಚೌಕಟ್ಟಿಗೆ ಮಣೆ ಹಾಕಿದೆ. ಸ್ವಾಭಿಮಾನಕ್ಕೆ ಮನ್ನಣೆ ನೀಡುವಂತಾಗಿದ್ದಾಳೆ. ಅವಳು ಭಾವುಕ ಜಗತ್ತು ವಾಸ್ತವದೊಂದಿಗೆ ಸಂಕೀರ್ಣಗೊಂಡಿದೆ. ಹಾಗಾಗಿ ತವರು ಮನೆ ಕಲ್ಪನೆ ಬದಲಾಗಿದೆ. ತವರು ಮನೆ ಪರಿಕಲ್ಪನೆ ವಿಶ್ವ ವ್ಯಾಪಿಯೂ ಅಲ್ಲ. ಸ್ವಾಭಾವಿಕವಾಗಿ ಅವಿರ್ಭವಿದ್ದೂ ಅಲ್ಲ. ಅದೊಂದು ಸಾಮಾಜಿಕ ಸೃಷ್ಟಿಯಾದ್ದರಿಂದ ಆಯಾ ಸಮಾಜದ ಸಂಕಲ್ಪ ಆಶಯಗಳ ನಕ್ಷೆಗೆ ಸೀಮಿತ. ಆದರೆ ನಮ್ಮ ಸಾಮಾಜಿಕ ನೆಲೆಯಲ್ಲಿ ಅದೊಂದು ನೈಸರ್ಗಿಕ ಸೃಷ್ಟಿಯೇನೋ ಎಂಬಂತೆ ಬಿಂಬಿತವಾಗಿದೆ. ನಮ್ಮ ಜನಪದರು ಅದಕ್ಕೊಂದು ಸಂವಿಧಾನಿಕ ರೂಪವಿತ್ತು ಸಿಂಹಿತೆಗಳನ್ನು ಹೇರಿ ವೈಭವೀಕೃತ ಭಾಷೆಯ ಭದ್ರಕೋಟೆಯಲ್ಲಿ ಅವಳನ್ನಿಟ್ಟಿದ್ದಾರೆ. ನಿಸರ್ಗ ನಿರ್ದೇಶಿತವಾದ ಹೊರುವ ಹೆರುವ ಖಾತೆಗೆ ಮಹಿಳೆ ಬದ್ಧಳಾಗಬೇಕಾದದ್ದು ಸಹಜ. ಅದರ ವಿರುದ್ಧ ಧ್ವನಿಯೆತ್ತುವುದು ಈಗಾಗಲೇ ಹಳಸಲಾದ ಸ್ತ್ರೀವಾದಿ ಧೋರಣೆಯಡಿ ಹಾಸ್ಯಾಸ್ಪದವಾಗಲು ಸಾಧ್ಯ. ಆದರೆ ಹುಟ್ಟಿನೊಂದಿಗೆ ಬೆಸೆದುಕೊಂಡ ಬದುಕನ್ನು ಕಸಿದುಕೊಂಡ ನೆಲೆಯಲ್ಲಿ 'ತವರು ಮನೆ' ಸೃಷ್ಟಿಯಾಗಿದೆ!

ಇದೊಂದು ಸಮಾಜದ ನಿರ್ದಯ ನಿರ್ಧಾರ. 'ತನ್ನ ಹುಟ್ಟಿನ ಪರಿಸರದೊಂದಿಗೆ "ತನ್ನ ಬದುಕು ಎಂಬ ಅವಳ ಜನ್ಮ ಸಿದ್ಧ ಹಕ್ಕಿಗೆ ಬಿದ್ದ ಕೊಡಲಿ ಪೆಟ್ಟು! ಎರಡು ದಶಕಗಳಷ್ಟು ಕಾಲ ಬದುಕಿದ ರೀತಿ-ನೀತಿಯಿಂದ ಹೊರಬಂದು ಅಪರಿಚಿತ ನೆಲೆಯಲ್ಲಿ ಬಾಳಬೇಕಾದ ಅನಿವಾರ್ಯತೆ

ಅವಳಿಗಿದೆಯೇ? ಹೀಗೆ ಪ್ರಶ್ನಿಸಲು ಅವಕಾಶವಿಲ್ಲದಂತೆ ಅದಕ್ಕೊಂದು ಭಾವನಾತ್ಮಕ ನೆಲೆ ಸೃಷ್ಟಿಸಿ ಮೌಲಿಕ ಚೌಕಟ್ಟಿನಲ್ಲಿ ಇಡಲಾಗದು. ಇದು ಸ್ತ್ರೀ ಸಂವೇದನೆಯಿಂದ ಹೊರಹೊಮ್ಮಿದ ವೇದನೆ-ನಿವೇದನೆಯೇ ಹೊರತು ಸ್ತ್ರೀವಾದಿ ಧೋರಣೆಯಲ್ಲ. ಇಂದಿನ ಬೆಳೆದ ಮಹಿಳೆಯರ ಮನದಾಳವನ್ನು ಪ್ರತಿನಿಧಿಸಬಲ್ಲ ಹಾಗೂ ಸ್ತ್ರೀಯ ಸಂವೇದನೆಯನ್ನು ಸಮರ್ಥವಾಗಿ ಅಭಿವ್ಯಕ್ತಿಸಬಲ್ಲ ಉದಯೋನ್ಮುಖ ಲೇಖಕಿ-ಕವಯಿತ್ರಿ ಗೀತಾ ವಸಂತರಿಂದ ಹೊಮ್ಮಿದ ಕೆಲ ಸಾಲುಗಳು ಹೀಗಿವೆ-

"ನಾವು ಅಪ್ಪಟ ನಾರಿಯರು
ತತ್ವಗಳಲ್ಲಿ ದೇವಿಯಾದವರು
ಭ್ರೂಣವಾಗಿರುವಾಗಲೆ ಬೇಡವಾದವರು
ಬೆಳೆಯುತ್ತಾ ಹೊರೆಯಾದವರು
ಮದುವೆ ಮಾರುಕಟ್ಟೆಯಲ್ಲಿ
ಸರ್ಕಾರದವರು ಬದುಕೀಡಿ ಯಾರದೋ
ದಯೆಗೆ ಕೈಯೊಡ್ಡಿ ಒಗ್ಗಿ ಹೋದವರು
ನಾವು ಮಗಳಾದೇವು, ಹೆಂಡತಿ
ತಾಯಿಯಾದೇವು ಬದುಕಿಡೀ ಯಾರದೋ
ನೆರಳಾದೇವು ಕೊನೆಗೂ ನಾವು ನಾವಾಗಲೇ ಇಲ್ಲ".

"ಇಂತಹ ಸಂ.... ವೇದನೆಯನ್ನು ತವರು ಮನೆ ವೈಭವೀಕರಣ ಎಷ್ಟು ದಿನ ತಡೆಯಬಲ್ಲದು? ಮಹಿಳೆ ಬದಲಾಗಿದ್ದಾಳೆ! ಈಗವಳು ಅಣ್ಣ ಕೊಟ್ಟೆಮ್ಮೆ ಹೊಡ್ಕೊಂಡು ತಿಟ್ಹತ್ತಿ ತಿರುಗಿ ನೋಡುತ್ತಾ ಅಣ್ಣನ ಪೋಷಣೆ, ಅತ್ತಿಗೆಯ ಶೋಷಣೆ ಬಗೆಗೆ ಪದ ಕಟ್ಟಿ ಹಾಡುತ್ತಾ ಕೊರಗುವ ಅಬಲೆಯಲ್ಲ! 'ತವರಿಂದ ದೂರಾದೆ ಹೊಸ ಮರಕೆ ಬೇರಾದೆ, ಸಂತೋಷ ಸಾಮ್ರಾಜ್ಯ ಸಂಪನ್ನೆಯಾದೆ. ಮನೆ ಮಂದಿಗೆಲ್ಲ ಸುಖ ನೀಡಬಲ್ಲ ಸತಿ ನಿನ್ನ ಧರ್ಮ ಸದಾ ಕಾವುದಮ್ಮ' ಎಂಬೀ ಸಾಲುಗಳು ಎಂತಹ ಸ್ತ್ರೀವಾದಿ ಮನಸ್ಸುಗನ್ನು ಸಹ ಮಣಿಸಬಲ್ಲವು! ಆದರೂ ಇಂತಹ ತ್ಯಾಗದ ಒಡವೆ ಧರಿಸಿ ಭಾವುಕ ಪರಿಧಿಯಲ್ಲೇ ಇದ್ದು ಬಿಡುಂವತಹ ಅಮಾಯಕಳೇ ಅವಳು ಸಮಾಜದ ಒಪ್ಪು-ನೆಪ್ಪುಗಳಿಗೆ ಸೊಪ್ಪುಹಾಕದೇ ತನ್ನೊಳಗನ್ನು ಹೊರಹಾಕುವ ಧಾಷ್ಟ್ಯ ಬೆಳೆಸಿಕೊಂಡಿದ್ದಾಳೆ"(ವಿಶ್ವಕನ್ನಡ ದಿನಪತ್ರಿಕೆ;೨೦೦೬:೪). ಅಲ್ಲಿರುವುದೇ ನಮ್ಮ ಮನೆ, ಇಲ್ಲಿರುವೇನು ಸುಮ್ಮನೆ ಎಂದು ನೇರ ನೇರ ಪ್ರಕಟಗೊಳ್ಳುವಂತಹ ನಡವಳಿಕೆ ಹೆಚ್ಚಿದೆ. ತವರು ಮನೆ ಪರಿಕಲ್ಪನೆಯಲ್ಲಿ ರಾಯಭಾರಿಯಂತಿದ್ದ

ಬಳೆಗಾರ ಚೆನ್ನಯ್ಯನಿಗೆ ಅಭಿವೃದ್ಧಿ ಸಾಧಿಸಿದ ಸಂಪರ್ಕ ಮಾಧ್ಯಮಗಳು ಕಡ್ಡಾಯ ನಿವೃತ್ತಿ ಘೋಷಿಸಿವೆ! ಮನೆಯ ಕೋಣೆ ಕೋಣೆಯಲ್ಲಿ ಟೆಲಿಫೋನ್, ಇಂಟರ್‌ನೆಟ್, ದೂರದರ್ಶನಗಳು ಲಗ್ಗೆ ಇಟ್ಟಿವೆ. ಶಿಕ್ಷಣ, ಉದ್ಯೋಗ, ಅವಳ ಕತ್ತನ್ನು ನೇರಗೊಳಿಸಿವೆ. ವರದಕ್ಷಿಣೆ ಸಾವು ಮೊದಲ್ಗೊಂಡು ಅನೇಕ ರೋಚಕ-ಶೋಚನೀಯ ವಿಷಯಗಳಿಂದ ಅವಳು ರೋಷಿಸಿದ್ದಾಳೆ. ಬದುಕು ಮೊದಲು ಭಾವನೆ ನಂತರ ಎನ್ನುವಂತಾಗಿದ್ದಾಳೆ.

ಹೆಚ್ಚಿನ ಉದ್ಯೋಗಸ್ಥ ಮಹಿಳೆಯರಂತೂ ತಮ್ಮ ಮಕ್ಕಳ ಲಾಲನೆ-ಪಾಲನೆ ಪೋಷಣೆಗೆ ತವರು ಮನೆಯನ್ನೇ ಅವಲಂಬಿಸಿರುತ್ತಾರೆ. ಈ ಹಿಂದೆ ಹೇಳಿಕೊಟ್ಟಿರುವುದೆಂದರೆ ಹೆಣ್ಣು ಹುಟ್ಟಿದ ಮನೆಗೆ ಎರವಾಗಿ ಹೋಗಲೇಬೇಕು ಅದು ಸಮಾಜದ ನಿಯಮ. ಅದನ್ನು ಅವಳು ಮೀರುವಂತೆಯೂ ಇಲ್ಲ. ಆಲದ ಮರಕ್ಕೆ ಹೇಗೆ ಹೂವು ಇರುವುದಿಲ್ಲವೋ, ಜಾಲಿಯ ಮರದಿಂದ ನೆರಳಿಲ್ಲವೋ ಹಾಗೆಯೇ ತಾಯಿಯ ಮನೆಯು ಸ್ಥಿರವಲ್ಲ ಎಂಬುದನ್ನು ಸುಳ್ಳಾಗಿಸಿ ತಾಯಿಯ ಮನೆ ಇಲ್ಲದ ಬದುಕು ಸಾಧ್ಯವಿಲ್ಲ ಎಂಬಂತಾಗಿದ್ದಾರೆ. ತವರಿನ ಮೇಲಿನ ಹಂಬಲ ಎಂದಿಗೂ ಮರೆಯಲಾಗ ದಂತಹದು. "ಎಷ್ಟೋ ಕಡೆ ಮಹಿಳೆ ಹಂಗಿನ ಅರಮನೆ ಎನಿಸಿಕೊಂಡ ತವರು ಮನೆ ಗಂಜಿಗೆ ಆಧಾರವಾಗಿ ಗಂಡನ ಮನೆಗೂ ಗಂಜಿ ಪೂರೈಸುವಷ್ಟು ಬಲಿಷ್ಠಳಾಗಿದ್ದಾಳೆ. ಅವಳಿಗೆ ನೇರ ಮನೆಯ ಸಿರಿದೇವಿಯಷ್ಟೇ ಅಲ್ಲ ಹುಟ್ಟಿದ ಮನೆಗೂ ಉರುಗಂಬವಾಗಿರುವುದುಂಟು"(ಎಚ್.ಬಿ. ರುದನೂರ; ೨೦೦೪:೩). ಮದುವೆಯಾದೊಡನೆ ಎಳೆ ಮಗಳೇ ಬಳುವವರ ಮನೆಗೆ ನಡೆ ಬೇಗ ಎಂದರೆ ಸಾಕು ಕಣ್ತುಂಬ ನೀರು ತುಂಬಿಕೊಂಡು ತಲೆ ತಗ್ಗಿಸಿ ಗಂಡನ ಹಿಂದೆ ಹೆಜ್ಜೆ ಇಡುತ್ತಾ ಸಾಗಿ ಬಿಡವ ಮೌನ ಗೌರಿಯರೀಗ ವಿರಳ ನಾನು ಏಕೆ ಹೋಗಬೇಕು ಎಂದು ಕೇಳಿದರೆ ಆಶ್ಚರ್ಯ ಪಡಬೇಕಿಲ್ಲ. ಅಭಿವೃದ್ಧಿಯ ಹಾದಿಯಲ್ಲಿರುವ ಮಹಿಳೆಯರಲ್ಲಿ ಕಾಣಿಸುತ್ತಿರುವ ಇಂತಹ ಬದಲಾವಣೆಗಳು ಕುಟುಂಬದ ಸ್ವಾಸ್ಥ್ಯ ಕಾಪಾಡುವಲ್ಲಿ ಸ್ವಾಗತಾರ್ಹವೆ ಎಂಬುದು ಚರ್ಚಾರ್ಹ ವಿಷಯ. ಎಲ್ಲೋ ಹುಟ್ಟಿ ಎಲ್ಲೋ ಜೀವನ ಸಾಗಿಸಲು ತವರಿನ ಸರ್ವಸಂಪತ್ತನ್ನು ತ್ಯಾಗ ಮಾಡುವುದರೊಂದಿಗೆ ತವರಿನಲ್ಲಿರುವ ಅಣ್ಣ-ತಮ್ಮ, ಅಕ್ಕ-ತಂಗಿ, ತಾಯಿ-ತಂದೆ ಹೀಗೆ ಎಲ್ಲರಿಂದಲೂ ದೂರವಾಗಿ ಗಂಡನ ಮನೆಯಲ್ಲಿ ಗಂಜಿಯಿದ್ದರೂ ಲೇಸೆಂದು ಬಯಸಿ ಬರುವ ಹೆಣ್ಣು ಮಗಳಿಗೆ ಗಂಡನ ಮನೆಯಲ್ಲಿ ಎಂತಹ ವೈಭೋಗವಿರಲಿ, ಬಡತನವಿರಲಿ ತವರಿನಲ್ಲಿನ ತನ್ನ ಕುಟುಂಬದಲ್ಲಿನ ಸ್ವಾರಸ್ಯಕರ ಜೀವನದ ನೆನಪುಗಳನ್ನು ಮೆಲುಕು ಹಾಕುತ್ತ ಕಾಲ ನೂಕುತ್ತಾಳೆ.

ಅತ್ತೆ-ಸೊಸೆಯರ ಸಂಬಂಧವು ವಿವಾಹ ಪದ್ಧತಿಯಷ್ಟೇ ಪುರಾತನವಾದುದು. ಮಗನು ವಯಸ್ಸಿಗೆ

ಬಂದರೆ ಸಾಕು ಅವನಿಗೊಂದು ಮದುವೆ ಮಾಡಿಸಿ ಲಕ್ಷಣ, ಯೋಗ್ಯ ಹಾಗೂ ಅಜ್ಞಾಕಾರಿಣಿಯಾದ ಸೊಸೆಯನ್ನು ಮನೆಗೆ ತಂದಿಕೊಳ್ಳುವ ಸುಂದರ ಸ್ವಪ್ನ ಅತ್ತೆ ಮಾವಂದಿರಲ್ಲಿರುತ್ತದೆ. ಯಾವುದೋ ಮನೆಯ ಹೆಣ್ಣು ಮಗಳು ತಾನು ಹೆಂಡತಿಯಾಗುವ ಮತ್ತು ಸುಂದರ ದಾಂಪತ್ಯ ಜೀವನ ನಡೆಸುವ ಹತ್ತಾರು ಮಧುರ ಕಲ್ಪನೆ ಅತ್ತೆಯು ಆಕೆಯನ್ನು ಆರತಿ ಎತ್ತುವ ಮೂಲಕ ಸ್ವಾಗತಿಸುತ್ತಾಳೆ. ಕಾರಣ ಸೊಸೆ ಮನೆಗೆ ಬಂದರೆ ತನ್ನೆಲ್ಲಾ ಹೆಚ್ಚಿನ ಭಾರವನ್ನು ಅವಳ ಮೇಲೆ ಹೇರಿ ತಾನು ವಿಶ್ರಾಂತಿಯ ಜೀವನ ಸಾಗಿಸಬಹುದು ಎಂಬ ಮಹತ್ವಾಕಾಂಕ್ಷೆಯೂ ಇರುತ್ತದೆ. "ಅತ್ತೆ ಕುಟುಂಬದ ಅಡಿಗಲ್ಲದರೆ ಸೊಸೆ ಆ ಅಡಿಗಲ್ಲಿನ ಭವಿಷ್ಯವಾಗಿರುತ್ತಾಳೆ. ಈ ಮಾತು ಯಥಾರ್ಥವಾದರೂ, ಅತ್ತೆ-ಮಾವಂದಿರು ಸೊಸೆಯನ್ನು ಸಂತೋಷದಿಂದ ಸ್ವಾಗತಿಸುತ್ತಾರೆಂದಾದರೂ ಆಕೆಯಿಂದ ಅವರ ಅಪೇಕ್ಷೆಗಳು ನಿರೀಕ್ಷಿತ ಮಟ್ಟದಲ್ಲಿ ಪೂರ್ಣಗೊಳ್ಳದಿದ್ದಾಗ ಕೌಟುಂಬಿಕ ಶಾಂತಿ ಅಲುಗಾಡ ಲಾರಂಭಿಸಿದೆ. ಅತ್ತೆ-ಸೊಸೆಯ ಔಪಚಾರಿಕ ಸಂಬಂಧ ಮುಂದೆ ಭಾವನಾತ್ಮಕ ಸಂಬಂಧವಾಗಿ ಪರಿಣಮಿಸದಿರುವುದು ವಿರಸಕ್ಕೆ ನಾಂದಿಯಾಗುತ್ತದೆಂಬುದು ಕಟು ಸತ್ಯವಾಗಿದೆ. ಹೀಗಾಗಿ ಈ ಸಂಬಂಧ ಕೇವಲ ಔಪಚಾರಿಕ ಮತ್ತು ತೋರಿಕೆಯದ್ದಾಗಿಯೇ ಮುಂದುವರೆಯುತ್ತದೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ವಿದ್ಯೆ ಉದ್ಯೋಗಕ್ಕಿಂತಲೂ ಮದುವೆಯೇ ಅನಿವಾರ್ಯ ವೆಂಬುದನ್ನು ಆಕೆಯು ಬಾಲ್ಯದಿಂದಲೇ ತರಬೇತಿ ನೀಡಲಾಗುತ್ತದೆ. ಮನೆಯ ಒಳಗಿನ ಹೊರಗಿನ ದುಡಿತ ಆಕೆಯದೇ ಆಗಿದ್ದು, ಮಕ್ಕಳ ಕುಟುಂಬದ ಎಲ್ಲಾ ಸದಸ್ಯರ ಸೇವೆ ಕೂಡ ಆಕೆಗೆ ಕಟ್ಟಿಟ್ಟ ಬುತ್ತಿಯಾಗಿರುತ್ತದೆ. ವಿನಯಶೀಲತೆ, ತ್ಯಾಗ, ವಿಧೇಯತೆ, ಕ್ಷಮೆ, ತಾಳ್ಮೆ ಸಂಯಮವೆಂಬ ಪ್ರತಿಭಟನಾ ರಹಿತ ಮೌಲ್ಯಗಳನ್ನು ಆಕೆಯಲ್ಲಿ ಬಿತ್ತುತ್ತಿರುವ ಕಾರಣದ ಫಲಿತಾಂಶವಾಗಿ ಇಂದು ಅನೇಕ ಮಹಿಳೆಯರು ವಧುದಹನ, ವರದಕ್ಷಿಣೆ ಸಾವು, ಆತ್ಮಹತ್ಯೆ ಅಸಹಜ ಸಾವುಗಳಿಗೆ ಈಡಾಗು ತ್ತಿರುವರು. ಹೊಸದಾಗಿ ಮನೆಗೆ ಬಂದ ಸೊಸೆಯನ್ನು ಅತ್ತೆಯಾದವಳು ಕೆಲವೊಂದು ರೀತಿ ರಿವಾಜುಗಳು ಹಾಕಬಾರದು. ಕೆಲಸ ಬರದಿದ್ದರೆ ಅವಳು ತಾಯಿಗೆ ದೋಷಿಸುವುದು ಹಳೆಯುವುದು ಬೇಡ. ಸೊಸೆಯ ತಂದೆ-ತಾಯಿಗಳನ್ನು ಅತ್ತೆಯು ಪರೋಕ್ಷವಾಗಿ ಅತ್ತೆ-ಸೊಸೆಯ ಬಿಕ್ಕಟ್ಟಿಗೆ ಪ್ರಮುಖ ಕಾರಣವಾಗಿರುತ್ತದೆ. ಮಾತು ಮಾತಿಗೆ ಸೊಸೆಯ ತವರು ಮನೆಯವರನ್ನು ಟೀಕಿಸುತ್ತ, ಹಂಗಿಸುತ್ತ ಹೋಗುವುದು ಸರಿಯಲ್ಲ. ಸೊಸೆಯ ಉಡುಗೆತೊಡಗೆ, ಅವಳು ಮಾಡುವ ಅಡುಗೆ, ಅವಳ ನಡೆ-ನುಡಿ ಮದುವೆಯಲ್ಲಿ ಕೊಟ್ಟ ವರದಕ್ಷಿಣೆ ಹೀಗೆ ಒಂದಲ್ಲ ಒಂದು ನೆಪಮಾಡಿಕೊಂಡು ಅತ್ತೆ ವ್ಯಂಗ್ಯ ಬಾಣಗಳನ್ನೆಸೆಯುತ್ತಿದ್ದರೆ. ಹೊಸದಾಗಿ ಬಂದ ಸೊಸೆಯ ಕೋಮಲ ಮನಸ್ಸಿಗೆ ಆಘಾತವಾಗ ದಿರುವುದಿಲ್ಲ. ಆರಂಭದಲ್ಲಿ ಆಕೆ ಎಲ್ಲವನ್ನು ಸಹಿಸಿಕೊಳ್ಳುತ್ತಾಳೆ. ಆನಂತರ ಆಕೆಯು ಬಾಯಿ

ಮುಚ್ಚಿ ಕುಳಿತುಕೊಳ್ಳುವುದಿಲ್ಲ. ಆಕೆ ಅತ್ತೆಗೆ ಉತ್ತರ ಕೊಡಲಾರಂಭಿಸುತ್ತಾಳೆ. ಇದು ಜಗಳಕ್ಕೆ ನಾಂದಿಯಾಗುತ್ತದೆ. ಈ ಘರ್ಷಣೆಯಿಂದ ಮನೆಯ ಶಾಂತಿ ಭಂಗವಾಗುತ್ತದೆ. ನಿಮ್ಮ ಮನೆಗೆ, ಕುಟುಂಬಕ್ಕೆ ಕೆಟ್ಟ ಹೆಸರು ಬರುತ್ತದೆಂಬುದನ್ನು ಮರೆಯಬೇಡಿ. ಜೊತೆಗೆ ಅತಿಮುಖ್ಯವಾದ ವಿಷಯವೆಂದರೆ ನಿಮ್ಮ ಮಗಳು ಬೇರೆ ಮನೆಯ ಸೊಸೆಯಾಗಿ ಹೋಗುತ್ತಾಳೆಂಬುದನ್ನು ಸದಾ ನೆನಪಿನಲ್ಲಿಟ್ಟುಕೊಳ್ಳಿ.

> "ಹೆಣ್ಣು ಹುಟ್ಟಿದರೆ ಹೆಗ್ಗಣ ಹುಟ್ಟಿದ್ಹಾಂಗ" ಎನ್ನುವ ಒಂದು ಜನಪದ ಕವನದ ಸಾಲು ಹೆಣ್ಣಿನ ಆಗಮನ ಎಷ್ಟೊಂದು ಅಹಿತಕರ ಎಂದು ತೋರಿಸುತ್ತದೆ. ಈ ಹೆಣ್ಣು ಹುಟ್ಟಿ ಬೆಳೆದು ದೊಡ್ಡವಳಾದಾಗ ಇವಳನ್ನು ವಿವಾಹವಾಗುವವನಿಗೆ ವಿವಾಹದ ಸಮಯದಲ್ಲಿ ವರದಕ್ಷಿಣೆಯನ್ನು ನೀಡಬೇಕಷ್ಟೇ ಅಲ್ಲ ಗಂಡನ / ಆತನ ಮನೆಯವರ ಬೇಡಿಕೆಗಳನ್ನು ಹೊತ್ತು ಪದೇ, ಪದೇ ಈ ಮಗಳು ತಾಯಿಯ ಮನೆಗೆ ಬರುತ್ತಾಳೆ. ಈ ಪರಿಸ್ಥಿತಿಯನ್ನು ತಪ್ಪಿಸುವುದು ಹೇಗೆ ಎಂದು ಯೋಚಿಸು ತ್ತಿದ್ದವರಿಗೆ ಭ್ರೂಣ ಪರೀಕ್ಷೆಯನ್ನು ಸಾಧ್ಯವಾಗಿಸಿದಂಥ ಅಮಿನಿಯೋಸೆಂಟಿಸಿಸ್/ ಸ್ಕ್ಯಾನಿಂಗ್ ವಿಧಾನಗಳು ಪರವಾಗಿ ಪರಿಣಮಿಸಿದವು. ಈ ಹೆಣ್ಣು ಇದ್ದರೆ ತಾನೇ ಅವಳು ನಮಗೆ ಭಾರವಾಗುವುದು, ಅವಳನ್ನು ಜನಿಸುವ ಮುನ್ನವೇ ಚಿವುಟಿ ಬಿಟ್ಟರೆ ಈ ತೊಂದರೆಯೇ ಇರುವುದಿಲ್ಲ ಎಂದು ವಾದ ಮಾಡುವ ಪೋಷಕರು ತಮ್ಮ ದುಷ್ಕೃತ್ಯವನ್ನು ಸಮರ್ಥಿಸಿ ಕೊಳ್ಳುತ್ತಾರೆ"(ಆರ್.ಇಂದಿರಾ;೨೦೦೨:೬೪).

ಹೆಣ್ಣು ಭ್ರೂಣ ಹತ್ಯೆಯಂಥ ಅಮಾನವೀಯ ಕೃತ್ಯಕ್ಕೆ ಪ್ರೇರಣೆ ನೀಡುವಂಥ ಕಾರಣಗಳಾದರೂ ಯಾವುದು? ಗಂಡು ಸಂತಾನದ ಹಂಬಲ, ಇಂದು ನಿನ್ನೆಯದೇನಲ್ಲ. ಗಂಡು ಹುಟ್ಟಿದರೆ ವಂಶೋದ್ಧಾರವಾಗುವುದಷ್ಟೇ ಅಲ್ಲ, ತಂದೆ-ತಾಯಿಗಳಿಗೆ ಮೋಕ್ಷವೂ ದೊರೆಯುತ್ತದೆ ಎಂಬ ನಂಬಿಕೆ ಹಳೆಯದು. ಹೆಣ್ಣು ಶಿಶುಗಳನ್ನು ಹತ್ಯೆ ಮಾಡುವ ಪದ್ಧತಿ ಬಹು ಹಿಂದೆಯೇ ಜಾರಿಯಲ್ಲಿತ್ತು ಎಂಬುದನ್ನು ನಾವು ಐತಿಹಾಸಿಕ ದಾಖಲೆಗಳಲ್ಲಿ ಓದಿದ್ದೇವೆ. ಹೆಣ್ಣು ಶಿಶುವನ್ನು ಹತ್ಯೆ ಮಾಡಲು ವೈದ್ಯರು/ವಿಜ್ಞಾನದ ನೇರವಾಗಲಿ ಬೇಕಿಲ್ಲ.

> "ಓರ್ವ ಹೆಣ್ಣೇ ತನ್ನ ದೇಹವನ್ನು ಭ್ರೂಣ ಪರೀಕ್ಷೆಗಾಗಿ ಹಾಗೂ ಭ್ರೂಣ ಹತ್ಯೆಗಾಗಿ ಒಪ್ಪಿಸುತ್ತಾಳೆ. ಹೆಣ್ಣಿಗೆ ಹೆಣ್ಣೇ ಶತೃವಲ್ಲವೇ ಎನ್ನುತ್ತಾರೆ ಅನೇಕರು. ಈ ಗಾದೆ ಮಾತನ್ನು 'ಹೆಣ್ಣಿಗೆ ಹೆಣ್ಣಿನ ಸಹಾನುಭೂತಿಯೇ ಮೇಲು' ಎಂದು ಬದಲಾಯಿಸಿದರೆ ಒಳ್ಳೆಯದು. ಭ್ರೂಣ ಹತ್ಯೆ ವಾಸ್ತವ್ಯದಲ್ಲಿ ಎರಡು ಹೆಣ್ಣುಗಳ ಮೇಲೆ ಏಕಕಾಲದಲ್ಲಿ ನಡೆಯುವಂತಹ ದೌರ್ಜನ್ಯವಾಗಿದೆ. ತಾಯಿಯಾಗಲಿರುವವಳು ಹಾಗೂ ಹೆಣ್ಣು ಭ್ರೂಣ ಇವರಿಬ್ಬರ ದೇಹದ ಮೇಲೂ ಆಕ್ರಮಣ ನಡೆಯುತ್ತದೆ. ಆದರೆ ಈ ಸಮಾಜದಲ್ಲಿ ತಮ್ಮ ದೇಹ ಹಾಗೂ ಮನಸ್ಸುಗಳ ಮೇಲೆ ನಡೆಯು

> ತ್ತಿರುವ ಈ ದೌರ್ಜನ್ಯವನ್ನು ವಿರೋಧಿಸುವ ಶಕ್ತಿ ಹೆಣ್ಣಿಗೆ ಇದೆಯೇ. ಆರ್ಥಿಕ ಸ್ವಾತಂತ್ರ್ಯವಾಗಲಿ, ಸಾಮಾಜಿಕ ಭದ್ರತೆಯಾಗಲಿ ಇಲ್ಲದಿರುವಂಥ ಮಹಿಳೆಯರು ಅಸಹಾಯಕರಾಗಿ ತಮ್ಮ ದೇಹವನ್ನು ಭ್ರೂಣ ಪರೀಕ್ಷೆಗೆ ಒಪ್ಪಿಸಿರಬಹುದು" (ಆರ್.ಇಂದಿರಾ;೨೦೦೨:೬೬).

ಇಷ್ಟೇ ಅಲ್ಲ ತಮ್ಮ ಬದುಕಿನಲ್ಲಿ ನಿರಂತರವಾಗಿ ಕಷ್ಟಗಳನ್ನು ಅನುಭವಿಸುತ್ತಾ ಬಂದಿರುವ ಮಹಿಳೆಯರನೇಕರು ತಾವು ಪಟ್ಟಕಷ್ಟ ತಮ್ಮ ಹೆಣ್ಣು ಮಕ್ಕಳಿಗೆ ಬರದಿರಲಿ ಎಂದೇ ಹೆಣ್ಣು ಭ್ರೂಣ ಹತ್ಯೆಗೆ ಒಪ್ಪುವುದು. ಪುರುಷ ಪ್ರಧಾನ ಮೌಲ್ಯಗಳು ಹಾಗೂ ಆಚರಣೆಗಳಿಂದ ಆವೃತ್ತ ವಾಗಿರುವ ಈ ಸಮಾಜದಲ್ಲಿ ಹೆಣ್ಣು ಶಿಶು ಹತ್ಯೆಗೆ ಒಂದು ಬೃಹತ್ ಇತಿಹಾಸವಿದೆ. ಗಂಡು ಸಂತಾನದಿಂದ ಮಾತ್ರ ಮೋಕ್ಷ ಸಾಧ್ಯ ಎನ್ನುವ ನಂಬಿಕೆಗೆ ಬದ್ಧವಾದ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಮಕ್ಕಳ ಜನನ ಬೇಡವಾದಂಥ ಒಂದು ಘಟನೆಯಾಗಿತ್ತು. ಇಷ್ಟೇ ಅಲ್ಲದೆ, ಹೆಣ್ಣು ಮಗು ತಾನು ಜನಿಸಿದ ಕುಟುಂಬಕ್ಕೆ ಒಂದು ಆರ್ಥಿಕ ಹೊರೆ ಎಂಬ ಭಾವನೆ ಬಹುಮಂದಿ ಪೋಷಕರಲ್ಲಿ ಜಾಗೃತವಾಗಿದ್ದು. ಈ ಮಗುವನ್ನು ಬದುಕುಳಿಯಲು ಬಿಟ್ಟರೆ, ಮುಂದೆ ಕುಟುಂಬಕ್ಕೆ ಆರ್ಥಿಕ ನಷ್ಟಗಳ ಸರಮಾಲೆಯನ್ನೇ ಆಕೆ ತೊಡಿಸಬಹುದು ಎಂಬ ಕಾರಣವನ್ನು ಮುಂದಿಟ್ಟು, ಹೆಣ್ಣು ಶಿಶುಹತ್ಯೆಯಲ್ಲಿ ತೊಡಗುತ್ತಾರೆ. ಹೆಣ್ಣು ಶಿಶುಹತ್ಯೆಯಂಥ ಅಮಾನವೀಯ, ಘೋರ ಕೃತ್ಯಗಳು ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದವೇ ಹೊರತು, ನಮ್ಮಂಥ ನಾಗರೀಕರು ಇರುವಂಥ ಈ ಕಾಲದಲ್ಲೆಲ್ಲ ಎಂಬ ಗೊಡ್ಡು ವಾದಕ್ಕೆ ಇಳಿಯುತ್ತಾರೆ. ಅನೇಕರು. "ಹೆಣ್ಣು ಮಕ್ಕಳ ವಿವಾಹ ಪೂರ್ವದಲ್ಲಿ ಹಾಗೂ ವಿವಾಹದನಂತರ ಒದಗಿಬರುವ ಖರ್ಚುಗಳನ್ನು ನಿಭಾಯಿಸಲು ತಮ್ಮ ಬಡತನ ಅಡ್ಡಿ ಬರುತ್ತದೆಂಬ ಕಾರಣವನ್ನು ಮುಂದೊಡ್ಡಿ, ಹೆಣ್ಣು ಶಿಶುಗಳನ್ನು ಕೊಲೆಗೈಯುತ್ತಾರೆ ಪೋಷಕರು. ಹೆಣ್ಣು ಭ್ರೂಣ ಹತ್ಯೆ ಮಾಡಲು ಹಣವಾದರೂ ಖರ್ಚಾಗುತ್ತದೆ. ಏಕೆಂದರೆ, ಆ ಕೃತ್ಯವನ್ನೆಸಗುವ ಇತರರ ನೇರವು ಅಗತ್ಯ. ಹೆಣ್ಣುಶಿಶು ಹತ್ಯೆಗೆಯ್ಯಲು ಹಣದ ನೇರವಾಗಲಿ, ಇತರರ ಬೆಂಬಲವಾಗಲಿ ಅಗತ್ಯವಲ್ಲ. ಬಹುತೇಕ ಸಂದರ್ಭಗಳಲ್ಲಿ ಈ ಕೃತ್ಯವನ್ನೆಸಗುವವರು ತಾಯಂದಿರೇ ಆಗುತ್ತಾರೆ.

> "ಒಂದು ಹೆಣ್ಣು ಜೀವ ಮತ್ತೊಂದು ಹೆಣ್ಣು ಜೀವವನ್ನು ಬಲಿತೆಗೆದುಕೊಳ್ಳುವ ಈ ಪರಿಸ್ಥಿತಿ 'ಹೆಣ್ಣಿಗೆ ಹೆಣ್ಣೆ ಶತ್ರು' ಎನ್ನುವವರಿಗೆ ಒಂದು ಸಿದ್ಧ ಆಯುಧ. ಆದರೆ ಎಷ್ಟೋ ಮಂದಿ ಮಹಿಳೆಯರಿಗೆ ತಾವು ಜನ್ಮವಿತ್ತ ಈ ಹೆಣ್ಣು ಜೀವವನ್ನು ಬದುಕಿಸುವ ಸ್ವಾತಂತ್ರ್ಯವಿದೆ. ಎನ್ನುವುದನ್ನು ತಾವು ಮೊದಲು ಯೋಚಿಸಬೇಕಾಗಿದೆ. ಒಂದೆಡೆ ಆಧುನಿಕತೆಯ ಪರಾಕಾಷ್ಠೆಯನ್ನು ಮುಟ್ಟಿದೇವೆ ಎಂದು ಹೆಮ್ಮೆಯಿಂದ ಎದೆ ತಟ್ಟಿಕೊಳ್ಳುತ್ತಿರುವ ನಾವು ನಮ್ಮೆದುರಿನಲ್ಲೆ ನಡೆಯುತ್ತಿರುವ ಮಾರಣ

ಹೋಮಕ್ಕೆ ಮೌನ ಪ್ರೇಕ್ಷಕರಾಗಿರುವುದು ಸಮಕಾಲೀನ ಸಮಾಜದ ವಿಪರ್ಯಾಸಗಳಲ್ಲಿ ಒಂದು ಎಂದರೆ ಉತ್ಪ್ರೇಕ್ಷೆಯಾಗಲಾರದು" (ಆರ್.ಇಂದಿರಾ; ೨೦೦೨:೬೯).

ಇದೊಂದು ಖಾಸಗಿ ಕೌಟುಂಬಿಕ ವಿಚಾರವೇ ಹೊರತು, ಶಿಕ್ಷಾರ್ಹವಾದ ಅಪರಾಧವೇನಲ್ಲ ಎನ್ನುವುದೇ ಇದರ ಧೋರಣೆ. ತಿಳಿದ ಮೂಲಗಳ ಪ್ರಕಾರ ಅನೇಕ ಪೋಲಿಸ್ ಕುಟುಂಬಗಳಲ್ಲೂ ಹೆಣ್ಣು ಶಿಶುಹತ್ಯೆ ನಡೆದಿದೆ, ಏಕೆಂದರೆ ಆರಕ್ಷರ ವ್ಯವಸ್ಥೆ ಕಾರ್ಯನಿರ್ವಹಿಸುತ್ತಿರುವುದು ಪುರುಷ ಪ್ರಧಾನ ವ್ಯವಸ್ಥೆ ಕಾರ್ಯನಿರ್ವಹಿಸುತ್ತಿರುವುದು ಪುರುಷ ಪ್ರಧಾನ ವ್ಯವಸ್ಥೆಯ ಒಳಗಡೆ. ಇಡೀ ಸಮಾಜವೇ ಪುರುಷ ಪ್ರಧಾನ ಪಟ್ಟಭದ್ರ ಹಿತಾಶಕ್ತಿಗಳ ಹಿಡಿತಕ್ಕೆ ಒಳಗಾಗಿರುವಾಗ, ದಿನನಿತ್ಯ ನಡೆಯುತ್ತಿರುವ ಹೆಣ್ಣುಗಳ ಮಾರಣ ಹೋಮಕ್ಕೆ ಬಹುಜನ ಮೌನ ಸಮ್ಮತಿಯನ್ನು ಸೂಚಿಸಿರುವಾಗ, ತೀರಾ ಅಸಹಾಯಕವಾದ ಪರಿಸ್ಥಿತಿಯಲ್ಲಿರುವ ನವಜಾತ ಹೆಣ್ಣುಶಿಶು ತನ್ನ ಕೊಲೆಯನ್ನು ಹೇಗೆ ತಾನೇ ತಡೆಗಟ್ಟಲು ಸಾಧ್ಯ? ಹೆಣ್ಣು ಶಿಶುಹತ್ಯೆ ಹೆಣ್ಣು ಭ್ರೂಣ ಹತ್ಯಗೆ ಬಡತನವೇ ಏಕೈಕ ಕಾರಣವಲ್ಲ, ಹಣವಂತ ಕುಟುಂಬಗಳಲ್ಲಿಯೂ ಈ ಆಚರಣೆಗಳು ಜಾರಿಯಲ್ಲಿವೆ. ಕುಟುಂಬದ ಆಸ್ತಿ ಮನೆಯಲ್ಲಿಯೇ ಉಳಿಯಬೇಕು, ವರದಕ್ಷಿಣೆಯ ರೂಪದಲ್ಲಿ ಮನೆಯಿಂದ ಹೊರಗೆ ಹೋಗಲು ಅವಕಾಶ ನೀಡಬಾರದು ಎಂಬುದೇ ಇಂಥ ಕುಟುಂಬಗಳ ಉದ್ದೇಶ. ವರದಕ್ಷಿಣೆಯ ಪದ್ಧತಿಯೇ ಹೆಣ್ಣು ಶಿಶುಹತ್ಯೆಗೆ ಪ್ರಮುಖ ಕಾರಣವೆಂದು ಹೇಳಿದರೆ ತಪ್ಪಾಗಲಾರದು.

" 'ತಂದೆ ಮನೆಯ ಯಜಮಾನ' 'ತಾಯಿ ಅಡುಗೆ ಮನೆಯಲ್ಲಿ ಕೆಲಸ ಮಾಡುತ್ತಾಳೆ', 'ಹಲವು ತಾಯಂದಿರು ಮಾತ್ರ ಅಧ್ಯಾಪಕಿಯರಾಗಿ, ದಾದಿಯರಾಗಿ ಕೆಲಸ ಮಾಡುತ್ತಾರೆ', 'ಮಗಳು ತಾಯಿಗೆ ಅಡಿಗೆ ಮನೆಯಲ್ಲಿ ಸಹಾಯ ಮಾಡುತ್ತಾಳೆ'. ಮಗ ತಂದೆಯ ಜೊತೆಗೆ ಹೊರಗೆ ಹೋಗುತ್ತಾನೆ. ತಂದೆ ಮತ್ತು ಮಗ ಹಜಾರದಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತು ವೃತ್ತ ಪತ್ರಿಕೆಯನ್ನು ಓದುತ್ತಿದ್ದರೆ, ತಾಯಿ ಮತ್ತು ಮಗಳು ಮನೆಯ ಹಿಂದಿನ ಅಂಗಳದಲ್ಲಿ ಬಟ್ಟೆ ಒಗೆದು ಒಣ ಹಾಕುತ್ತಿದ್ದಾರೆ" - ಹೀಗೆ, ಒಂದೇ ಎರಡೇ ಲಿಂಗಭೇದವನ್ನು ಎತ್ತಿ ಹಿಡಿಯುವ ಉದಾಹರಣೆಗಳು ಲಿಂಗ ಸಮಾನತೆಯನ್ನು ಆಧರಿಸಿದ ಸಮಾಜದ ಸೃಷ್ಟಿಯಾಗಬೇಕಾದರೆ ಪುರುಷರು ಮತ್ತು ಸ್ತ್ರೀಯರಿಬ್ಬರೂ ಎಲ್ಲ ಕೆಲಸಗಳನ್ನು ಮಾಡಬೇಕು. ಸಹಕಾರ, ಸಹಭಾಗಿತ್ವ, ಸಹಬಾಳ್ವೆ, ಸಮಾನ ಕೆಲಸದ ಹಂಚಿಕೆ ಎಂಬೆಲ್ಲ ತತ್ವಗಳನ್ನು ಆಧರಿಸಿದ ಕೌಟುಂಬಿಕ ವ್ಯವಸ್ಥೆಯ ಸೃಷ್ಟಿಯಾಗಬೇಕು"(ಆರ್.ಇಂದಿರಾ; ೨೦೦೨:೪೯).

ಬಹುತೇಕ ಸಹ ಶಿಕ್ಷಣ ಸಂಸ್ಥೆಗಳಲ್ಲಿ ಹೆಣ್ಣು ಗಂಡು ಮಕ್ಕಳನ್ನು ನಡೆಸಿಕೊಳ್ಳುವ ರೀತಿ, ಭಿನ್ನವಾದ ನಿಯಮಗಳು ಹಾಗೂ ಉಡುಪುಗಳನ್ನು ಆಯ್ಕೆ ಮಾಡುವಾಗ ಕಂಡುಬರುವ ತಾರತಮ್ಯ

ನೀತಿ, ಜವಾಬ್ದಾರಿಗಳನ್ನು ಹಂಚುವಾಗ ಅನುಸರಿಸುವ ಲಿಂಗ ತಾರತಮ್ಯದಿಂದ ಕೂಡಿದ ಕ್ರಮಗಳು ಇವೆಲ್ಲವೂ ಶಿಕ್ಷಣ ಸಂಪೂರ್ಣವಾಗಿ ಲಿಂಗಪೂರ್ವಗ್ರಹಗಳಿಂದ ಹೊರತಾಗಿಲ್ಲ ಎಂಬುದಕ್ಕೆ ಸಾಕ್ಷಿ. "ಕುಟುಂಬ, ನೆರೆಹೊರೆ, ಗೆಳೆಯರ ಬಳಗಗಳು, ಸಮೂಹ ಮಾಧ್ಯಮಗಳು ಇವೆ ಮುಂತಾದ ಸಂಸ್ಥೆಗಳು ಅನೌಪಚಾರಿಕ ಶಿಕ್ಷಣದ ನಿಯೋಗಿಗಳು. ಮಹಿಳೆಯ ಪಾತ್ರ ಹಾಗೂ ಪ್ರಾಧಾನ್ಯತೆಗಳನ್ನು ಕುರಿತಂತೆ ಅರಿವು ಮೊದಲು ಬಾರಿಗೆ ಮೂಡುವುದು ಅನೌಪಚಾರಿಕ ಶಿಕ್ಷಣದ ಮೂಲಕವೇ ಎಂದು ಹೇಳಿದರೂ ತಪ್ಪಾಗಲಾರದು. ಔಪಚಾರಿಕ ಶಿಕ್ಷಣಕ್ಕಾದರೂ ಆರಂಭ ಅಂತ್ಯಗಳಿವೆ. ಆದರೆ ಅನೌಪ ಚಾರಿಕ ಶಿಕ್ಷಣ ಜೀವನವಿಡೀ ದೊರೆಯುವಂತಹ ಒಂದು ಅನುಭವ. ಅನೌಪಚಾರಿಕ ಶಿಕ್ಷಣದ ಅನುಭವ ಮೊದಲು ದೊರೆಯುವುದು ಕುಟುಂಬದಲ್ಲಿ"(ಆರ್.ಇಂದಿರಾ;೨೦೦೨:೯೧). ಮಗುವಿನ ಗ್ರಹಿಕಾಶಕ್ತಿ ಬೆಳೆಯುತ್ತಾ ಹೋದಹಾಗೆಲ್ಲಾ, ಆ ಮಗುವಿಗೆ ಸ್ತ್ರೀ-ಪುರುಷರ ಸ್ಥಾನಮಾನ, ಜವಾಬ್ದಾರಿಗಳು, ಅವರನ್ನು ಕುರಿತ ಸಮಾಜದ ಧೋರಣೆಗಳು ಇವುಗಳ ಬಗ್ಗೆ ಕುಟುಂಬದ ಇತರ ಸದಸ್ಯರಿಂದ ಅರಿವು ಮೂಡುತ್ತಾ ಹೋಗುತ್ತದೆ. ಹೆಣ್ಣು-ಗಂಡು ಮಕ್ಕಳನ್ನು ಕುಟುಂಬದಲ್ಲಿ ನಡೆಸಿಕೊಳ್ಳುವ ರೀತಿ ಲಿಂಗ ಪೂರ್ವಗ್ರಹಗಳು ಹಾಗೂ ಲಿಂಗ ಸಮಾನತೆಯ ತತ್ವಗಳು ಇವುಗಳೆರಡನ್ನೂ ಕುಟುಂಬದಲ್ಲಿಯೇ ವ್ಯಕ್ತಿಗಳು ಕಲಿಯುವುದು. ಕುಟುಂಬ ಮಗುವಿನ ಮೂಲ ಶಾಲೆಯಾಗಿರುವುದರಿಂದ ಲಿಂಗ ವ್ಯವಸ್ಥೆಯನು ಕುರಿತು ಸರಿಯಾದ ಮತ್ತು ತಪ್ಪು ಕಲ್ಪನೆಗಳೆರಡೂ ಕುಟುಂಬದಲ್ಲಿಯೇ ದೊರೆಯುವುದು. ಮಗು ಬೆಳೆಯುತ್ತಾ ಹೋದ ಹಾಗೆಲ್ಲಾ ಅದರ ಸುತ್ತ ಮುತ್ತಣ ಅನುಭವಗಳು ಲಿಂಗ ವ್ಯವಸ್ಥೆಯನ್ನು ಕುರಿತಂತೆ ಅನೇಕ ಕಲ್ಪನೆಗಳನ್ನು ಅದರ ಮನಸ್ಸಿನಲ್ಲಿ ಮೂಡಿಸುತ್ತವೆ. ಗೆಳೆಯರ ಬಳಗದಲ್ಲಂತೂ ಹೆಣ್ಣು ಗಂಡುಗಳ ಪಾತ್ರಗಳ ಬಗ್ಗೆ ಸಾಕಷ್ಟು ಚರ್ಚೆ ಸಮಾಲೋಚನೆಗಳು ನಡೆಯುತ್ತಲೇ ಇದ್ದು ಮಕ್ಕಳ ಮನಸ್ಸಿನಲ್ಲಿ ಅನೇಕ ಚಿತ್ರಗಳು ಮೂಡಿ ಬರುತ್ತವೆ. ಇದಕ್ಕೆ ಪುಷ್ಠಿ ನೀಡುವಂತಹ ಕಾರ್ಯಕ್ರಮಗಳು ಮಾಧ್ಯಮಗಳ ಮೂಲಕ ಬಿತ್ತರಿ ಸಲ್ಪಟ್ಟಾಗ ಅವರ ವಿಚಾರಗಳಿಗೆ ಮತ್ತಷ್ಟು ಶಕ್ತಿ ಬರುತ್ತದೆ.

ಈ ತವರು ಮನೆ ಪರಿಕಲ್ಪನೆ ಕೌಟುಂಬಿಕ ಸ್ಥಿತ್ಯಂತರಕ್ಕೆ ಒಳಗಾಗಿ ಸಾಮಾಜಿಕ ಗೋಂದಲ ತಂದಿದೆ. ಬದಲಾಗುತ್ತಿರುವ ಪ್ರಕ್ರಿಯೆ ಸಮಾಜದೊಡಲಲ್ಲಿ ಗುಪ್ತ ಝರಿಯಂತೆ ಪ್ರವಹಿಸುತ್ತಿದೆ. ಎಲ್ಲೋ ಒಂದು ಕಡೆ, ಇದನ್ನು ಅಧಿಕೃತವಾಗಿ ಚರ್ಚೆಗೆ ಸಂವಾದಕ್ಕೆ ಈಡು ಮಾಡಿ ಗೋಂದಲ ಗಳನ್ನು ಬಗೆಹರಿಸಬೇಕೆನಿಸುತ್ತದೆ. ತವರು ಮನೆ ಪರಿಕಲ್ಪನೆಗೆ ಸಮಾಜ ಮನ್ನಣೆಯಿತ್ತು ಮದುವೆ ಯಾದೊಡನೆ ಯಾವ ಮನೆಯಲ್ಲಿ ತನ್ನ ಎಂಬ ಆಯ್ಕೆಯನ್ನು ಅವಳಿಗೆ ಬಿಟ್ಟು ಕೊಡಬೇಕಿದೆ. ಇದಕ್ಕೆ ವ್ಯಾಪಕ ಚರ್ಚೆ ಅಗತ್ಯ. ಪುರುಷ ಪ್ರಧಾನ ಸಮಾಜದಲ್ಲಿ ಇಂತಹ ಒಂದು ಯೋಚನೆಯನ್ನು

ಅಂಗೀಕರಿಸುವುದೇ ಕಷ್ಟದ ಮಾತು. ಹಾಗೆಂದು ಉದಾಸೀನ ತೋರಿ ಇದೆ ಸ್ಥಿತಿಯನ್ನು ಮುಂದುವರೆಸಿದರೆ ಪಾಶ್ಚಾತ್ಯ ದೇಶಗಳಲ್ಲಿ ಆದಂತೆ ಒಟ್ಟು ಕುಟುಂಬಗಳ ದೃಶ್ಯಗಳೇ ಸಮಾಜದಿಂದ ಅಳಿಸಿ ಹೋಗಬಹುದು. ಮಗಳು ಗೃಹಿಣಿಯಾಗಿ ಇರಬೇಕಾದರೆ ಮನೆ ಅದಲು-ಬದಲಾದರೆ ಅಂತಹ ಆವಾಂತರ, ಗಂಡಾಂತರಗಳೇನೂ ಆಗುವುದಿಲ್ಲ, ಆದರೆ ಆಗ ತವರು ಮನೆ ಪರಿಕಲ್ಪನೆಗೂ ಸಿಗದೇ ಹೋಗಬಹುದು.

ಹೆಣ್ಣಿಗೆ ಆರು ಗುಣಗಳಿರಬೇಕೆಂದು ಅನಾದಿ ಕಾಲದಲ್ಲಿನ, ಹಿಂದೂ ಪರಂಪರೆಯ ಹೇಳಿಕೆ. ಕಾಲ ಸರಿದಂತೆ ಇದೊಂದು ನಂಬಿಕೆ ಎಂಬಂತೆ ತೋರಿದರೂ ಈಗಲೂ ಹೆಣ್ಣು ಮಕ್ಕಳು ಕಾರ್ಯೇಶು ದಾಸಿಯಾಗಿ, ಕರಣೇಶು ಮಂತ್ರಿಯಾಗಿ ದುಡಿಯುತ್ತಿದ್ದಾಳೆ. ಹೆಣ್ಣು ಮದುವೆಯಾದಗಿನಿಂದಲೂ ಗಂಡನ ಮನೆಯಲ್ಲಿ ಅಚ್ಚುಕಟ್ಟಾಗಿ ಕೆಲಸ ನಿರ್ವಹಿಸುತ್ತಾ, ತನ್ನನ್ನು ಸಮರ್ಥವಾಗಿ ಅಲ್ಲಿ ಬಳಸಿಕೊಳ್ಳುವುದು ಆರು ಗುಣಗಳಿಂದಲೇ. ಹಿಂದಿನ ಕಾಲದ ಮಹಿಳೆಯರು ಹೊರ ಜಗತ್ತಿನ ಅರಿವಿಲ್ಲದೆ ಅಡುಗೆ ಮನೆಗೆ ಸೀಮಿತವಾಗಿ ಮನೆಕೆಲಸಗಳಲ್ಲಿ ತೊಡಗಿಕೊಂಡರೆ ಈಗಿನ ಮಹಿಳೆಯರು ಸರ್ವತೋಮುಖವಾಗಿ ವಿವಿಧ ರಂಗಗಳಲ್ಲಿ ಜತೆಗೆ ಮನೆಯಲ್ಲೂ ತೊಡಗಿಕೊಂಡಿದ್ದಾರೆ.

ಇಂದಿನ ನಾರಿ ಹೊರ ಜಗತ್ತಿನಲ್ಲಿ ಪುರುಷರಿಗೆ ಸಮಾನವಾಗಿ ದುಡಿಯುತ್ತಿದ್ದಾಳೆ. ತಿಂಗಳಿಗೆ ಸಾವಿರಾರು ರೂಪಾಯಿ ಸಂಪಾದಿಸಿಕೊಂಡು ಬರುತ್ತಿದಾಳೆ. ಇದು ಮಹಿಳೆಗೆ ಸ್ವಾವಲಂಬನೆ ಒದಗಿಸುವುದರ ಜೊತೆಗೆ ಮಾರಕವೂ ಆಗುತ್ತಿದೆ. ವಧು ವೀಕ್ಷಣೆಯ ಸಂದರ್ಭದಲ್ಲಿ ನೋಡಲು ಬಂದವರೂ ಅವಳ ರೂಪ, ಗುಣಕ್ಕಿಂತ ಸಂಬಳಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡುವುದು ಎದ್ದು ಕಾಣಿಸುತ್ತದೆ. "ನಮಗೆ ವರದಕ್ಷಿಣೆ ಬೇಡ, ಹುಡುಗಿ ಕೆಲಸದಲ್ಲಿರಬೇಕು, ಒಳ್ಳೆಯ ಕಂಪನಿಯಲ್ಲಿರಬೇಕು, ಅಮೇರಿಕಾಕ್ಕೆ ಹೋಗುವ ಅವಕಾಶ ಹೊಂದಿರಬೇಕು." ಎಂದು ವರನ ಕಡೆಯವರು ಕೇಳುವುದನ್ನು ಕಾಣಬಹುದು. ಹುಡುಗಿಯು ಇನ್ಸೆಂಟ್‌ಟ್ಸ್, ಬೆನಿಫಿಟ್ಸ್, ಇನ್‌ಕ್ರಿಮೆಂಟ್ಸ್, ಆಫರ್ಸ್ ಮುಂತಾದವುಗಳ ಬಗ್ಗೆ ವಿಚಾರಿಸಿಕೊಂಡು ತಮ್ಮ ಡಿಮ್ಯಾಂಡು(ಬೇಡಿಕೆ)ಗಳನ್ನು ಅವರ ಮುಂದಿಟ್ಟು, ಆ ಮೇಲೆ ಹುಡುಗಿಯನ್ನು ಒಪ್ಪುವ ಅಥವಾ ಬಿಡುವ ನಿರ್ಧಾರ ಕೈಗೊಳ್ಳುತ್ತಾರೆ. ಹುಡುಗಿಯ ಹೆಸರಿನಲ್ಲಿರುವ ಬ್ಯಾಂಕ್ ಖಾತೆಗಳು, ಪಾಲಸಿಗಳು ಇನ್ನಿತರ ಹಣ ಹೂಡಿಕೆಯ ಬಗೆಗೂ ತಿಳಿದು ಕೊಳ್ಳಲು ಹುಡುಗನ ಮನೆಯವರು ಪ್ರಯತ್ನಿಸುತ್ತಿರುವುದು ಇತ್ತೀಚಿನ ಬೆಳವಣಿಗೆ.

ಮದುವೆ ನಂತರ ಅವಳನ್ನು ಎಷ್ಟು ಸಾಧ್ಯವೋ ಅಷ್ಟು ದುಡಿಸಿಕೊಂಡು, ಆರೋಗ್ಯಕ್ಕಿಂತ ಸಂಪಾದನೆಗೆ ಹೆಚ್ಚು ಬೆಲೆ ಕಟ್ಟುತ್ತಿದ್ದಾರೆ. ಇದನ್ನು ವಿರೋಧಿಸಿದರೆ ವಿಚ್ಛೇದನದ ಆತಂಕ ತಂದೆ

ತಾಯಿಗೆ ಕಂಪ್ಯೂಟರ್‌ನ ಮುಂದೆ ಕುಳಿತು ಬೆಳಗಿನಿಂದ ರಾತ್ರಿಯವರೆಗೆ ಕೆಲಸ ಮಾಡಿ ಬೆನ್ನು, ಸೊಂಟ ನೋವಿನಿಂದ ಆನಾರೋಗ್ಯ ಸಮಸ್ಯೆಗಳನ್ನು ಎದುರಿಸುತ್ತಿರುವ ಹುಡುಗಿಯರನ್ನು ನೋಡಿದಾಗ ಕಷ್ಟ ಎನಿಸುತ್ತದೆ. ಸುಂದರ ಜೀವನ, ಗಂಡನ ಪ್ರೀತಿ ವಿಶ್ವಾಸಗಳು, ಅತ್ತೆ ಮಾವನ ಸೇವೆ ಪ್ರೀತಿ, ಮನೆಯಲ್ಲಿ ನೆಮ್ಮದಿ ಇವೆಲ್ಲ ಇಂದಿನ ತರುಣಿಯರಿಗೆ ಗಗನ ಕುಸುಮವೇ ಸರಿ ಇವೆಲ್ಲವು ಗಳಿಂದ ಸಾಧಿಸುತ್ತಿರುವುದಾದರು ಏನನ್ನು ಸಾಕಷ್ಟು ಹಣವಿದ್ದರೂ ಬದುಕನ್ನು ಸುಂದರವಾಗಿ ಅನುಭವಿಸಲು ಸಾಧ್ಯವಾಗದ, ಉಸಿರು ಕಟ್ಟಿಸುವ ವಾತಾವರಣ ಸೃಷ್ಟಿಯಾಗಿದೆ. ಹೆಣ್ಣಿನ ಈ ಒತ್ತಡವನ್ನು ಅರ್ಥ ಮಾಡಿಕೊಂಡು ಅವಳಗೊಂದಿಟು ನಿರಾಂತಕದ ಜೀವನ ಕರುಣಿಸುವ ಗಂಡನ ಮನೆ ಅವಳ ಪಾಲಿಗಿದ್ದರೆ ಸ್ತ್ರೀ ಎಷ್ಟೋ ಧನ್ಯಳಾಗುತ್ತಾಳೆ. ಇನ್ನು ಮದುವೆ ಮಾಡಿಕೊಂಡು ವಿದೇಶಗಳಿಗೆ ಹೋಗುತ್ತಿರುವ ಹುಡುಗಿಯರ ಪಾಡಂತೂ ಶೋಚನೀಯ. ಇತ್ತ ತಂದೆ ತಾಯಿ, ಮನೆಯವರಿಂದ ದೂರ ಸರಿದು, ಹೊಸ ವಾತಾವರಣದಲ್ಲಿ ಗಂಡನೆಂಬುವವನ ಕಿರುಕುಳಕ್ಕೆ ಸಿಕ್ಕು ನಲುಗುವ ಕೋಮಲ ಹುಡುಗಿಯರ ಪಾಡು ಹೇಳತೀರದು. ಈ ಗೊಂದಲಗಳನ್ನು ತಪ್ಪಿಸಲು ಹುಡುಗಿಯ ತಂದೆ ತಾಯಿ ಮುಂದಾಲೋಚನೆ ಮಾಡಿ ಸಾಧ್ಯವಾದಷ್ಟೂ ಗಂಡಿನ ಪೂರ್ವಾಪರಗಳನ್ನು ವಿಚಾರಿಸಿ, ಉತ್ತಮವಾದ ವರವನ್ನು ಹಾಗೂ ಮನೆತನವನ್ನು ನೋಡಿ ಹೆಣ್ಣು ಕೊಡುವುದು ಒಳಿತು. ಅವಳು ದುಡಿದು ತಂದು ಹಾಕಿ ಮನೆಯವರ ಅವಶ್ಯಕತೆ, ಅಗತ್ಯತೆಗಳನ್ನು ಪೂರೈಸುವ ಹೆಣ್ಣಾಗದೆ, ಸಮರ್ಥ ಸದ್ಗೃಹಿಣಿಯಾಗಲು ಅವಕಾಶ ಕಲ್ಪಿಸಿಕೊಡಬೇಕು. ಇದು ಸಮಾಜದ ಜವಾಬ್ದಾರಿಯೂ ಹೌದು. ಸ್ಮಿತಾಳ ಪತಿ ಶಶಾಂಕ ಒಬ್ಬ ಸಂಭಾವಿತ ಹಾಗೂ ಜವಾಬ್ದಾರಿಯುತ ವ್ಯಕ್ತಿ. ಸ್ವಂತ ಮನೆ, ಕಾರು ಎಲ್ಲವೂ ಇವೆ. ಆದರೂ ಆಕೆ ಸುಖವಾಗಿಲ್ಲ. ಪತಿ ತನ್ನನ್ನು ಸರಿಯಾಗಿ ನೋಡಿ ಕೊಳ್ಳುವುದಿಲ್ಲ. ತನಗಾಗಿ ಏನು ಮಾಡುವುದಿಲ್ಲ, ತನ್ನೊಂದಿಗೆ ಕಳೆಯುವ ಸಮಯವನ್ನು ಮೀಸಲಿಡುವುದಿಲ್ಲ ಎನ್ನುವ ಕೊರಗು. ಅಷ್ಟೇ ನೋವು ಶಶಾಂಕನಿಗೂ ಇದೆ. ತನ್ನ ಬಯಕೆಗಳನ್ನು ಪತ್ನಿ ಗೌರವಿಸುವುದಿಲ್ಲ, ತನಗೆ ಇಂಥದ್ದು ಬೇಕೆಂದು ಕೇಳುವುದಿಲ್ಲ. ಮನೆ ಕೆಲಸದಲ್ಲಾಗಲೀ, ಮನೆಯನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳಬೇಕೆಂಬ ಆಸೆಯಾಗಲೀ ಅವಳಲ್ಲಿಲ್ಲ. ಕೆಲಸ ಮಾಡಿ ಸಂಬಳ ತಂದುಕೊಡುತ್ತೇನಲ್ಲ, ಇನ್ನೇನು ಎಂಬ ಅಹಂಭಾವ. ತನ್ನ ವೈಯಕ್ತಿಕ ವಿಷಯಗಳನ್ನು ತವರಿನವ ರೊಡನೆ ಮಾತ್ರ ಹಂಚಿಕೊಳ್ಳುತ್ತಾಳೆ ಎಂಬ ಆಕ್ಷೇಪ ಆತನದು. ನಾನು ಅವಳಿಗಾಗಿ ಏನೆಲ್ಲಾ ಮಾಡಿದ್ದೇನೆ. ನನ್ನ ಸ್ನೇಹಿತರ ಸಹಾಯದಿಂದ ಒಳ್ಳೆಯ ಕಂಪನಿಯಲ್ಲಿ ಕೆಲಸ ಕೊಡಿಸಿದ್ದೇನೆ. ಅಂದ ಚಂದದ ಬಗ್ಗೆ ಗಮನಕೊಟ್ಟು ಅವಳನ್ನು ತಿದ್ದಿದ್ದೇನೆ. ಅವಳಿಗೆ ಬೇಕಾಗಿದ್ದೆಲ್ಲವನ್ನು

ಕೊಡಿಸುತ್ತೇನೆ. ಆರೋಗ್ಯ ಸರಿ ಇಲ್ಲದಿದ್ದಾಗ ಅವಳನ್ನು ಜೋಪಾನವಾಗಿ ನೋಡಿಕೊಳ್ಳುತ್ತೇನೆ. ಒಂದು ಉತ್ತಮ ಜೀವನಕ್ಕೆ ಬೇಕಾದ ಎಲ್ಲಾ ಸವಲತ್ತುಗಳನ್ನು ಕಲ್ಪಿಸಿಕೊಟ್ಟಿದ್ದೇನೆ. ಹೀಗಿದ್ದರೂ ಅವಳು ನನ್ನನ್ನು ನಿರ್ಲಕ್ಷಿಸುತ್ತಾಳೆ. ಗಂಡನೆಂಬ ಗೌರವ ಕಿಂಚಿತ್ತೂ ಇಲ್ಲ. ಇದರಿಂದ ನನಗೆ ವೈವಾಹಿಕ ಜೀವನದಲ್ಲಿ ಜಿಗುಪ್ಸೆ ಉಂಟಾಗಿದೆ. ನನ್ನ ಭಾವನೆಗಳನ್ನು ಗೌರವಿಸುವ, ನನ್ನ ಆಸೆಗಳಿಗೆ ಬೆಲೆಕೊಡುವ ಪತಿ, ಮನೆ, ನನ್ನ ಕುಟುಂಬ, ನನ್ನವರೆಂಬ ಅಭಿಮಾನವಿರುವ ತನ್ನ ಸಣ್ಣ ಸಣ್ಣ ಆಶೆಗಳಿಗೂ ನನ್ನನ್ನು ಕಾಡುವ, ನಾನು ಅವಳಿಗಾಗಿ ಹಂಬಲಿಸಿ ಓಡಿ ಬರುವಂತೆ ಮಾಡುವ, ನನಗಾಗಿ ಸಿಂಗರಿಸಿಕೊಳ್ಳುವ, ಊಟ-ತಿಂಡಿ ಮಾಡಿ ನನಗಾಗಿ ಕಾಯುವ, ಮನೆಯ ಬೇಕು-ಬೇಡಗಳ ಬಗ್ಗೆ ನನ್ನೊಡನೆ ಚರ್ಚಿಸುವ, ನನ್ನ ಕುಟುಂಬದವರನ್ನು ಗೌರವಿಸುವ, ನಗು ಮೊಗದ ಸರಳ ಹುಡುಗಿ ನನ್ನವಳಾಗಿರಬೇಕೆಂದು ನನ್ನಾಸೆ. ಅವಳ ಕೊರಗು ನನಗೂ ಅರ್ಥವಾಗುತ್ತದೆ. ಆದರೆ ಅವಳ ಅಸಡ್ಡೆಯ ಭಾವನೆಯಿಂದಾಗಿ ನನ್ನ ಹಾಗೂ ಅವಳ ಮಧ್ಯೆ ಅಂತರ ಹೆಚ್ಚುತ್ತಲೆ ಹೋಗುತ್ತದೆ. ನನ್ನ ತಲೆಕೆಟ್ಟರೆ ನಾನು ವಿಚ್ಛೇದನ ನೀಡುವುದಂತೂ ಖಂಡಿತ ಎನ್ನುತ್ತಾನೆ.

ಕೌಟುಂಬಿಕ ಆಪ್ತಸಲಹೆಗಾರ್ತಿ ಡಾ. ಲಲಿತಾರಾವ್ ಪ್ರಕಾರ ಇವರದು ಕ್ಲಿಷ್ಟಕರ ಸಮಸ್ಯೆ ಮಾತ್ರವಲ್ಲ. ಪ್ರತಿ ೧೦ರ ಪೈಕಿ ಒಂದು ಜೋಡಿಯಲ್ಲಿ ಈ ಸಮಸ್ಯೆ ಇರುತ್ತದೆ. ಮಕ್ಕಳೂ ಆಗಿದ್ದಾರೆ ಇನ್ನೇನು ಹೊಂದಿಕೊಂಡು ಹೋಗುತ್ತಾರೆ. ಆದರೆ ಇಬ್ಬರ ಮನಸ್ಸಿನಲ್ಲೂ ಪರಸ್ಪರ ಬಗ್ಗೆ ಗೌರವ ಇರುವುದಿಲ್ಲ. ಇಂಥ ದಂಪತಿಗಳಲ್ಲಿ ಹೆಣ್ಣಾಗಲೀ, ಗಂಡಾಗಲೀ, ಬೇರೊಬ್ಬರಿಗೆ ಸೋಲುವ ಸಂದರ್ಭ ಬರುವ ಸಾಧ್ಯತೆ ಹೆಚ್ಚು. ಶಶಾಂಕ ಹಾಗೂ ಸ್ಮಿತರ ಸಂಬಂಧದಲ್ಲಿ ಹೆಚ್ಚು ತಪ್ಪು ಸ್ಮಿತಾಳದೆ. ಒಬ್ಬ ಹೆಣ್ಣು ಮಗಳು ತಾನು ಹೋದ ಮನೆಯಲ್ಲಿ ಹೊಂದಿಕೊಳ್ಳುವ ಸ್ವಭಾವವನ್ನು ಕೊಂಚವಾದರೂ ಅಳವಡಿಸಿಕೊಳ್ಳಲೇಬೇಕು. ಇವೊಬ್ಬಳಿಗಾಗಿ ಇಡೀ ಮನೆಯವರೆ ಬದಲಾಗುವ ಸಾಧ್ಯತೆ ಶೇ. ೭೫ ರಷ್ಟು ಹೆಣ್ಣು ಹೊಂದಿಕೊಂಡರೆ ಇನ್ನೂ ಶೇ. ೨೫ ರಷ್ಟು ಭಾಗ ಗಂಡಿನ ಮನೆಯವರು ಹೊಂದಿಕೊಳ್ಳ ಬೇಕಾಗುತ್ತದೆ. ಹೆಣ್ಣು ತನ್ನ ಅಹಮ್ಮಿನ ಕಣದಿಂದ ಹೊರಬಂದು ಪತಿ ಹಾಗೂ ಮಕ್ಕಳನ್ನು ಪ್ರೀತಿಸಿದಾಗ ಅವಳು ಎಲ್ಲರೊಂದಿಗೆ ಹೊಂದಿಕೊಳ್ಳಲು ಸಾಧ್ಯ. ಹೆಣ್ಣಿಗೆ ಬೇಕಾದದ್ದು ಸಮರ್ಪಣಾಭಾವ, ಕೊಂಚ ತ್ಯಾಗ, ಪ್ರೀತಿ ಮಾತ್ರ. ಹಲವು ಸಂದರ್ಭ ಗಳಲ್ಲಿ ಮಕ್ಕಳು ತಮ್ಮ ತಂದೆ-ತಾಯಿಯರ ದಾಂಪತ್ಯ ಜೀವನವನ್ನು ಅನುಕರಿಸುತ್ತಾರೆ. "ನನ್ನ ತಂದೆ ನನ್ನ ತಾಯಿಯನ್ನು ಎಷ್ಟೊಂದು ಪ್ರೀತಿಸುತ್ತಾರೆ. ಅವಳಿಗಾಗಿ ಏನೆಲ್ಲಾ ಮಾಡುತ್ತಾರೆ. ಆದರೆ ನನ್ನ ಪತಿ ಹೀಗೆಲ್ಲ? ಎಂದು ಯೋಜಿಸಿ ಕೊರಗುವ ಹೆಣ್ಣು ಮಕ್ಕಳೂ ಇದ್ದಾರೆ. ಆದರೆ

ಅವರು ಪರಸ್ಪರ ಹೊಂದಿಕೊಂಡು ಜೀವನ ನಡೆಸುವುದರ ಫಲವಾಗಿ ಸಾಮರಸ್ಯದಿಂದ ಇದ್ದಾರೆ. ಇಂದಿನ ಈ ಪ್ರೀತಿ, ಇದರ ಹಿಂದೆ ತಂದೆಯ ದೊಡ್ಡತನ, ತಾಯಿಯ ಸಹನಾಗುಣ ಕಾರಣವಾಗಿದ್ದಿರ ಬಹುದು ಎಂದು ಅವರು ಯೋಚಿಸುವುದೇ ಇಲ್ಲ.

ತಾಯಿ ತನ್ನ ಸಂಸಾರಕ್ಕಗಿ ಏನೇನು ತ್ಯಾಗ ಮಾಡಿದ್ದಳು, ಹೀಗೆ ಎಲ್ಲರೊಂದಿಗೆ ಹೊಂದಿ ಕೊಂಡಿದ್ದಳು ಎಂದು ಒಮ್ಮೆಯಾದರೂ ತಾಯಿಯನ್ನು ಕೇಳಿದ್ದಿದ್ದರೆ ಮಗಳಿಗೆ ಜೀವನದ ಕುರಿತು ತಿಳಿದಿರುತ್ತಿತ್ತು. ಮದುವೆಯಾಗಿ ಪತಿಯೊಂದಿ ತೆರಳುತ್ತಿರುವ ಮಗಳನ್ನು ಹಿರಿಯರು ಕೂರಿಸಿಕೊಂಡು ಬುದ್ಧಿ ಹೇಳಿ, "ಅವರ ಹಾಲಿನಂಥ ಸಂಸಾರದಲ್ಲಿ ಸಕ್ಕರೆಯಾಗಿ ಹೊಂದಿಕೊಂಡು ಬಾಳು. ಸಂಸಾರದಲ್ಲಿ ಬಿರುಕುಬಿಟ್ಟರೆ ನಿನಗೆ ಈ ಮನೆಯಲ್ಲಿ ಸ್ಥಾನವಿಲ್ಲ" ಎಂದು ಹೇಳಿ ಕಳುಹಿಸುವ ಪದ್ಧತಿ ಮೊದಲೆಲ್ಲ ರೂಢಿಯಲ್ಲಿತ್ತು. ಹಾಗೆಯೇ ಗಂಡಿಗೂ ಬೇರೆಯವರ ಮನೆಯಿಂದ ಬಂದ ಹೆಣ್ಣು ಮಗಳಲ್ಲಿ ತಪ್ಪು ಹುಡಕದಿರು. ಅವಳು ತಪ್ಪು ಮಾಡಿದಾಗ ಸಹನೆಯಿಂದ ಬುದ್ಧಿ ಹೇಳು. ಅವಳನ್ನು ಪ್ರೀತಿಸಿ ಗೌರವದಿಂದ ನಡೆಸಿಕೊ ಎಂದು ಹಿತ ನುಡಿ ಹೇಳುತ್ತಿದ್ದರು. ಹಾಗಾಗಿ ಇಬ್ಬರೂ ಪರಸ್ಪರ ಜವಾಬ್ದಾರಿ ಅರಿತು ಹೊಂದಿಕೊಂಡು ಬಾಳುತ್ತಿದ್ದರು. ಯಾವುದೇ ಆಪೇಕ್ಷಣೆಗಳಿಗೆ ಅವಕಾಶ ಕೊಡುತ್ತಿರಲಿಲ್ಲ. ಆನಂದಮಯ ದಾಂಪತ್ಯ ಜೀವನ ಸಾಗಿಸುತ್ತಿದ್ದರು. ಇಂಥ ದಂಪತಿಗಳಲ್ಲಿ ಅರ್ಪಣಭಾವ ತಾನೇ ತಾನಾಗಿ ಮೂಡುತ್ತಿತ್ತು. ಈಗಿನವರಂತೆ ಗಳಿಗೆಗೊಂದು ಬಾರಿ 'ಐ ಲವ್ ಯು' ಎಂಬ ಉಚ್ಚಾರಣೆಯಾಗಲೀ, 'ನಾನು ನಿನ್ನ ಪ್ರೀತಿಸುತ್ತೇನೆ' ಎಂಬ ಎಸ್ಸೆಮ್ಮೆಸ್‌ಗಳ ಸಂದೇಶವಾಗಲೀ ಅವರಿಗೆ ಬೇಕಿರುತ್ತಿರಲಿಲ್ಲ. "ಇಂದು ಮಹಿಳೆ ಗಂಡಿನಂತೆ ದುಡಿದು ಸಂಪಾದಿಸು ತ್ತಾಳೆ. ತಾನು ಮಾಡಿದ್ದೇ ಸರಿ ಎನ್ನುವ ಸ್ವಭಾವದ ಕೆಲವು ತಂದೆ-ತಾಯಿಯರು ಅಳಿಯ ಹಾಗೂ ಅವರ ಮನೆಯವರ ಬಗ್ಗೆ ತಿರಸ್ಕೃತ ಭಾವನೆ ಬೆಳೆಸಿಕೊಂಡಿರುತ್ತಾರೆ. "ನಮ್ಮ ಮಗಳನ್ನು ನವೇನು ಸಾಕೋದು, ಅವಳು ಓದಿದ್ದಾಳೆ. ತನ್ನ ಜೀವನಕ್ಕೆ ಬೇಕಾದಷ್ಟು ತಾನೇ ಸಂಪಾದಿಸುತ್ತಾಳೆ. ನಿಮಗಾಗದಿದ್ದರೆ ಕಳಿಸಿಬಿಡಿ. ಅವಳು ನಮಗೇನು ಭಾರವಿಲ್ಲ" ಎಂಬಂಥ ಮಾತುಗಳನ್ನಾಡುವ ತಂದೆ-ತಾಯಿಯರೂ ಇದ್ದಾರೆ.

ಇಂಥ ನಡುವಳಿಕೆ, ದುರಾಭಿಮಾನದಿಂದ ಮಗಳ ಬಾಳನ್ನು ತಾವೇ ಹಾಳು ಮಾಡುತ್ತಿದ್ದೇವೆ ಎಂಬ ಜ್ಞಾನವೂ ಅವರಲ್ಲಿರುವುದಿಲ್ಲ. ಮಾತಿಗೆ ಮಾತು ಬೆಳೆದ ಪರಿಣಾಮ ಮಗಳು ತವರು ಸೇರುತ್ತಾಳೆ. ಕೆಲವು ಸಲ ತಂದೆ ತಾಯಿಯವರೇ ತಮ್ಮ ಮಗಳಿಗೆ ವಿಚ್ಛೇದನ ಕೊಡಿಸಿ ಬೇರೆ ಮದುವೆ ಮಾಡಿಸುತ್ತಾರೆ. ಇಲ್ಲವಾದಲ್ಲಿ ನಮ್ಮದೇನು ತಪ್ಪಿಲ್ಲ, ಬೇಕಾದರೆ ಬಂದು ಕರೆಯಲಿ,

ಆಗ ನೋಡೋಣ ಎಂಬ ಉಡಾಫೆ ಮಾತುಗಳನ್ನಾಡುತ್ತಾರೆ. ಪರಿಣಾಮ ಮಗು ತವರಲ್ಲೆ ಉಳಿಯುತ್ತಾಳೆ. ಅಳಿಯ ಬೇರೆ ಮದುವೆ ಮಾಡಿಕೊಂಡಾಗ ಇವರು ಪಶ್ಚಾತ್ತಾಪ ಪಡುತ್ತಾರೆ. ಕೊನೆಗೊಂದು ದಿನ ತಂದೆತಾಯಿಯವರು ಮಗಳಿಗೆ ಛೀಮಾರಿ ಹಾಕಿ ನಿಂದಿಸುತ್ತಾರೆ. ಆದರೆ ಇಂಥ ಪರಿಸ್ಥಿತಿಗೆ ಪರೋಕ್ಷವಾಗಿ ತಾವೇ ಕಾರಣರೆಂದು ಅವರಿಗೆ ಅನ್ನಿಸುವುದೇ ಇಲ್ಲ. ಮದುವೆ ಎನ್ನುವುದು ಗಂಡು ಹೆಣ್ಣಿನ ಮಿಲನವೊಂದೇ ಅಲ್ಲ. ಎರಡು ಕುಟುಂಬಗಳೂ ಪರಸ್ಪರ ಗೌರವಿಸಿದಾಗ ಮಾತ್ರ ಒಂದು ಪರಿಪೂರ್ಣ ಸಂಬಂಧವೇರ್ಪಡುತ್ತದೆ. ತಂದೆ ತಾಯಿಗಳು ಹಿರಿಯರಿಗೆ ಮಹತ್ವ ಕೊಟ್ಟರೆ ಮಾತ್ರ ಮಕ್ಕಳು ಅವರನ್ನು ಅನುಸರಿಸುತ್ತಾರೆ. ಇದು ಅವರ ಸುಂದರ ದಾಂಪತ್ಯಕ್ಕೆ ಬುನಾದಿಯಾಗುತ್ತದೆ. ಸ್ಮಿತಾ, ಶಶಾಂಕರದ್ದು ಇದೇ ಸಮಸ್ಯೆ. ಇಬ್ಬರೂ ಅವರರ ತಪ್ಪು ಅರಿತರೆ ಇಬ್ಬರ ಜೀವನವೂ ಸುಖಕರವಾಗುವುದರಲ್ಲಿ ಅನುಮಾನವಿಲ್ಲ. ಇಂಥ ಸಮಸ್ಯೆಗಳು ಇಂದು ಸಾಮಾನ್ಯವಾಗುತ್ತಿವೆ. ಬದುಕಿನ ಮೌಲ್ಯಗಳನ್ನು ನಾವು ಕೈಯ್ಯಾರೆ ಕಳೆದುಕೊಳ್ಳುತ್ತಿದ್ದೇವೆ ಅನ್ನಿಸುತ್ತದೆ. ಶಾಂತಿ, ನೆಮ್ಮದಿಗಾಗಿ ಜನ ಯೋಗ ಕೇಂದ್ರಗಳು, ನಗೆ ಕೂಟಗಳು, ಆಧ್ಯಾತ್ಮಿಕಗಳತ್ತ ಮನಸ್ಸು ಹರಿಸುತ್ತಿದ್ದಾರೆ. ಆದರೆ ಬದುಕಿನ ಮೌಲ್ಯಗಳನ್ನು ಅರ್ಥಮಾಡಿಕೊಂಡು ಮಕ್ಕಳಿಗೂ ಅದನ್ನು ತಿಳಿಸಿಕೊಟ್ಟಾಗ, ಪ್ರೀತಿ ಮತ್ತು ತ್ಯಾಗದಿಂದ ಕೂಡಿದ ಸಮಾಧಾನಯುಕ್ತ ಜೀವನ ನಡೆಸಿದಾಗ ಮಾತ್ರ ಮನುಷ್ಯನ ಸಂಬಂಧಗಳು ಬಲವಾದ ಸರಪಳಿಗಳಾಗಬಲ್ಲವು. ಬರೀ ಧಾವಂತದಲ್ಲೇ ಮುಗಿದು ಹೋಗುವ ಈ ಜೀವನದಲ್ಲಿ ಅದೂ ಹೊರಗಡೆ ಬರೀ ಜಂಜಾಟಗಳಿಂದಲೆ ತುಂಬಿ ಬದುಕನ್ನೇ ದ್ವೇಷಿಸುವಂತೆ ಮಾಡುವ ವಾತಾವರಣದಲ್ಲಿ ನಮ್ಮನ್ನು ನಾವು ಅರಿತು, ನಮ್ಮ ತತ್ವಗಳನ್ನು ತಿದ್ದಿಕೊಂಡು, ಬೇರೆಯವರು ಈ ರೀತಿಯ ತಪ್ಪು ಮಾಡದಂತಿರಲು ಸಹಕರಿಸಿ ಪ್ರಯತ್ನಿಸಿದಾಗ ಮಾತ್ರ ಜೀವನದಲ್ಲಿ ನೆಮ್ಮದಿಯನ್ನು ಕಾಣಲು ಸಾಧ್ಯ. ಹಾಗೆಯೇ, ಮಕ್ಕಳನ್ನು ರೂಪಿಸುವಲ್ಲಿ ಪೋಷಕರ ಪಾತ್ರ ಅತ್ಯಂತ ಹಿರಿದು. ಅವರು ತಂದೆ-ತಾಯಿ ಮಾತ್ರವಲ್ಲದೆ ಆತ್ಮೀಯ ಗೆಳೆಯರಾಗಿ, ಹಿರಿಯರಾಗಿ, ಗುರುವಾಗಿ ನಡೆದುಕೊಳ್ಳಬೇಕು. ಪ್ರೀತಿಯಿಂದ ಎಲ್ಲವನ್ನು ಗೆಲ್ಲಲು ಸಾಧ್ಯ. ಈಗಿನ ಹುಡುಗಿಯರೂ ಕಮ್ಮಿ ಇಲ್ಲ ತಂದೆ ತಾಯಿ ನಮ್ಮ ಬೇಡಿಕೆಗಳನ್ನು ಎಲ್ಲಾವನ್ನು ಪೂರೈಸಬೇಕು, ಆಸ್ತಿಯಲ್ಲಿ ಪಾಲು, ಒಂದು ವೇಳೆ ಆಸ್ತಿಯಲ್ಲಿ ಪಾಲು ನೀಡದಿದ್ದಲ್ಲಿ ಗಂಡನ ಮನೆಯಲ್ಲಿ ಅವಮಾನ, ಕಿರುಕುಳ ನೀಡುವುದಾಗಿ ಹೇಳಿ ಆಸ್ತಿಯಲ್ಲಿ ಪಾಲನ್ನು ಪಡೆಯುತ್ತಾರೆ. ದುಡಿಯುವ ಹುಡಿಯಾದರೆ ತನ್ನ ಮಗುವನ್ನು ನೋಡಿಕೊಳ್ಳಲು ಅತ್ತೆಗಿಂತ ಅಮ್ಮನನ್ನೇ ಬಯುಸುತ್ತಾಳೆ. ವಿದ್ಯಾವಂತ ಹೆಣ್ಣು ಮಕ್ಕಳು ಗಂಡನಷ್ಟೇ ಸಂಪಾದನೆ ಮಾಡುತ್ತಾರೆ. ಅಂದ ಮೇಲೆ ತನ್ನಷ್ಟೇ ಮನೆ ಜವಾಬ್ದಾರಿ ಗಂಡನದೂ ಇದೆ ಎಂದು ಆಕೆ ಭಾವಿಸುತ್ತಾಳೆ. ಇದರಿಂದ ಅತ್ತೆಯಾದವಳಿಗೆ

ಸೊಸೆಯ ವರ್ತನೆ ನುಂಗಲಾರದ ಬಿಸಿ ತುಪ್ಪ. ಮಗ ಪಾತ್ರೆತೊಳೆಯೋದನ್ನು ನೋಡೋಕೆ ಸಂಕಟ. ಹಾಗಾಗಿ ತಾನೇ ಆ ಕೆಲಸ ಮಾಡುತ್ತಾಳೆ. ಇಷ್ಟಾಗುವಾಗ ಮಾವ ತರಕಾರಿ ತಂದರೇನು ಶಾಲೆಗೆ ಹೋಗಿ ಮಕ್ಕಳನ್ನು ಕರ್‍ಕೊಂಡು ಬರಬಾರದೇ ಎಂದು ತಕರಾರು ಮಡುತ್ತಾಳೆ ಸೊಸೆ. ಅಲ್ಲಿಗೆ ಹಿರಿತನದ ಭಾವ ಬುಸುಗುಡಲಾರಂಭಿಸುತ್ತದೆ. (ಅವರು ಸ್ವ ಇಚ್ಛೆಯಿಂದ ಮಾಡುವುದು ಬೇರೆ) ಅತ್ತೆಯದು ಬಿಕ್ಕಟ್ಟಿನ ಸ್ಥಿತಿ ಗಂಡನ ಹಿರಿತನಕ್ಕೆ ಚ್ಯುತಿ ಬರದಂತೆ ನಡೆದರೆ ತನಗೂ ಮಾರ್ಯದೆ ಎಂದು ಅವಳು ಬಲ್ಲಳು. ಆದರೆ ಮಗ ಮನಸ್ಸನ್ನು ನೋಯಿಸಲಾರಳು. ಮಗ ಹೆಂಡತಿಯನ್ನು ನೋಯಿಸಲಾರ. ಹೀಗೆ ಪ್ರಸ್ತುತ ಕೆಲವು ಅತ್ತೆಯಂದಿರ ಪಾಡು ಕತ್ತಿ ಅಲುಗಿನ ಮೇಲೆ ನಡೆಯುವಷ್ಟು ಆತಂಕ ಪೂರಿತ. ಈಗಿನ ಬಹಳಷ್ಟು ಅತ್ತೆಯ ಕೈಯಲ್ಲಿ ಸಾಕಷ್ಟು ಹೆಣಗಿದ್ದಾರೆ. ಈಗ, ಸೊಸೆಗೆ ಹೆದರಿ ಬದುಕಬೇಕು. ಉದಾಹರಣೆ ಸುವರ್ಣ ಹೇಳುತ್ತಾರೆ ಮುದವೆ ಆದ ಆರು ತಿಂಗಳಲ್ಲಿ ಅವರಿಗೆ ಬೇಕಾದಂಥ ಎಲ್ಲ ಅಡುಗೆ ಕಲಿತೆ. ತನಗೆ ಸೇರಿದಿದ್ದರೂ ಅತ್ತೆಯ ಆಜ್ಞೆಯಂತೆ ಗಂಡನಿಗಾಗಿ ಮೀನು ಸಾರು ಮಾಡುವುದನ್ನು ಕಲಿತೆ. ಆದರೆ, ಈಗ ನನ್ನ ಸೊಸೆ ತನಗೆ ಸೇರುವುದಿಲ್ಲವೆಂದು ಗಂಡನೂ ಮೀನು ತಿನ್ನಬಾರದೆಂದು ನಿರ್ಬಂಧ ಹಾಕಿದ್ದಾಳೆ. ಹೇಗಿದೆ? ಇನ್ನು ಮನೆಯಲ್ಲಿರುವ ಸೊಸೆ ತಂದರೂ ಪರಿಸ್ಥಿತಿ ಅದೇ. ಅತ್ತೆಯ ದುರ್ಬಾರು ನಿಜರ್ಥದಲ್ಲಿ ಎಂದೋ ಮುಗಿದಿದ್ದು, ನಾವೀಗ ಸಿನಿಮಾಗಳಲ್ಲಿ ಮಾತ್ರ ಅದನ್ನು ಕಾಣಬಹುದು. ಸೊಸೆಯನ್ನು ಮಗಳೇ ನೋಡಿಕೊಳ್ಳುತ್ತೇನೆಂಬ ಅತಿಯಾದ ಆತ್ಮವಿಶ್ವಾಸದ ಅತ್ತೆಯಂದಿರು ಇದ್ದರೂ ನೋಡಿಕೊಳ್ಳುತ್ತೇನೆಂಬ ಅತಿಯಾದ ಆತ್ಮವಿಶ್ವಾಸದ ಅತ್ತೆಯಂದಿರು ಇದ್ದರೂ ತಮ್ಮ ಮಾತನ್ನು ಉಳಿಸಿಕೊಳ್ಳಲು ಅವರು ಬಹಳ ಹೆಣಗಾಡಬೇಕಾಗುತ್ತದೆ.

ಎರಡು ಪಾತ್ರೆಗಳಿದ್ದಲ್ಲಿ ಶಬ್ದವಿರುತ್ತದೆ. ಮನೆ ಎಂದ ಮೇಲೆ ಮಗಳಾಗಲೀ, ಸೊಸೆಯಾಗಲೀ ಭಿನ್ನಾಭಿಪ್ರಾಯಗಳು ಇದ್ದೇ ಇರುತ್ತವೆ. ಈಗಿನ ಹೆಣ್ಣು ಮಕ್ಕಳಿಗೆ ತಂದೆ-ತಾಯಿಯರ ಅತಿ ಪ್ರೀತಿ, ವಿದ್ಯೆ, ಉದ್ಯೋಗ ಈ ಮೂರು ಇವೆ. ಆದರೆ ಸಹನೆ ಹೊಂದಾಣಿಕೆಗಳಿಗೆ ಪ್ರಾಶಸ್ತ್ಯ ಗೌಣವಾಗಿದೆ. ಅಲ್ಲದೆ ೨೫-೨೬ ವರ್ಷಗಳ ಕಾಲ ತನ್ನ ಮನೆಯಲ್ಲಿ ಬೆಳೆದು ಊಟ, ಉಡುಗೆ, ನಡವಳಿಕೆಗಳಲ್ಲಿ ತನ್ನದೇ ಆದ ರೀತಿ-ನೀತಿಗಳನ್ನು ರೂಢಿಸಿಕೊಂಡವಳಿಗೆ ಇನ್ನೊಂದು ಮನೆಗೆ ಹೊಂದಿಕೊಳ್ಳಲು ಸಮಯ ಹಿಡಿಯುತ್ತದೆ. ಇಂಥ ಸಂದರ್ಭಗಳಲ್ಲಿ ಅತ್ತೆಯು ತನ್ನ ವಯಸ್ಸಿಗೆ ತಕ್ಕಂತೆ ನಡೆದುಕೊಂಡು ಇವಳು ನನ್ನ ಮಗಳಂತೆ ಅಲ್ಲವೇ ಎಂದುಕೊಂಡರೆ ಕಾಲಕ್ರಮೇಣ ಸೊಸೆಯೂ ಹೊಂದಿಕೊಳ್ಳಲು ನೆರವಾಗುತ್ತದೆ. ತನ್ನ ಜೀವನಾನುಭವದಿಂದ, ಜಾಣತನದಿಂದ ಮಗ-ಸೊಸೆಯ ಪ್ರೀತಿಯನ್ನು ತಾಯಿ ಸಂಪಾದಿಸಬೇಕು. ಮಗ-ಸೊಸೆ ಏನು ತೊಂದರೆ ಕೊಡದಿದ್ದರೂ ಅವರು ತಮ್ಮನ್ನು ಅಲಕ್ಷಿಸುತ್ತಿದ್ದಾರೆ

ಎಂಬ ಅಭದ್ರತೆಯ ಭಾವ ಹಿರಿಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಂಥ ಸಂದರ್ಭದಲ್ಲಿ ಇವರು ಸ್ವಲ್ಪ ಜಾಣ್ಮೆ ಪ್ರದರ್ಶಿಸಬೇಕು.

**ಮಾತೆಯರ ಮನದಲ್ಲಿರಲಿ.........**

ಮನೆಗೆ ಸೊಸೆಯೊಬ್ಬಳನ್ನು ತರುವಾಗ ಮಗನಿಗೆ ತಕ್ಕ ಮಡದಿ, ನಿಮಗೊಬ್ಬ ಮಗಳು, ಪ್ರೀತಿಯ ಸಹಜೀವನ ಇಷ್ಟಕ್ಕೆ ಮಹತ್ವ ಕೊಡಿ. ರೂಪ, ಐಶ್ವರ್ಯಗಳಿಗೆ ಬೆಲೆಕೊಟ್ಟು ನಿಮ್ಮ ಜೀವನಕ್ಕೆ ಹೊಂದದ ಹುಡುಗಿಯನ್ನು ಸೊಸೆ ಮಾಡಿ ತರಬೇಡಿ. ಅವಳು ಮುಂದೆ ನಿಮಗೆ ಹೊಂದಿಕೊಳ್ಳಬೇಕು, ಹೊಂದಿಕೊಳ್ಳಬಹುದು ಎಂದು ಅಪೇಕ್ಷೆ ಪಡಬೇಡಿ.

- ಸಣ್ಣ-ಪುಟ್ಟ ವಿಷಯಗಳಿಗೂ ಸೊಸೆಗೆ ಕರಾರು ಹಾಕಿ ಉಸಿರುಗಟ್ಟುವ ವಾತಾವರಣ ಸೃಷ್ಟಿಸಬೇಡಿ.
- ಒಂದೊಮ್ಮೆ ಸೊಸೆಯ ತಪ್ಪಿದ್ದರೂ ಅವರಿವರಲ್ಲಿ ಆಡಿಕೊಳ್ಳದೇ ಅವಳಿಗೆ ತಿಳಿಹೇಳಿ, ತಿದ್ದಿಕೊಳ್ಳಲು ಅವಕಾಶ ಕೊಡಿ.
- ತನ್ನವರನ್ನೆಲ್ಲ ಬಿಟ್ಟು ಬರುವ ಅವಳಿಗೆ ಗಂಡನೇ ಸರ್ವಸ್ವ. ಹಾಗಾಗಿ ಅವರಿಬ್ಬರ ವಿಷಯದಲ್ಲಿ ಮೂಗು ತೋರಿಸಬೇಡಿ. ನಿಮ್ಮ ಬೇರೆ ಮಕ್ಕಳಿಗೂ ಇದನ್ನು ಹೇಳಿ.
- ಯಾವುದೇ ತಾಯಿಯು ಮಗನ ತಪ್ಪಿಗೂ ಸೊಸೆಯನ್ನು ದೂರುವಂತೆ, ಸೊಸೆಯೂ ಗಂಡನ ತಪ್ಪಿಗೆ ಅತ್ತೆಯ ಮೇಲೆ ಸಿಟ್ಟಾಗುತ್ತಾಳೆ. ಹಾಗಾಗಿ ಗಂಡ-ಹೆಂಡತಿ ಜಗಳಾಡುತ್ತಿದ್ದರೂ ಮಧ್ಯೆ ಬಾಯಿ ಹಾಕದೆ, ಬೇಕಾದರೆ ಮಗನಿಗೆ ತಿಳಿ ಹೇಳಿ. ಪರಿಸ್ಥಿತಿ ವಿಕೋಪಕ್ಕೆ ಹೋದಾಗಷ್ಟೇ ನಿಮ್ಮ ಸಂಧಾನ, ಸಲಹೆ ಇರಲಿ.
- ಶ್ರೀಮಂತರ ಮನೆ ಹೆಣ್ಣು ರಾಶಿ ರಾಶಿ ತರುತ್ತಾಳೆಂದು ಉಬ್ಬಬೇಡಿ. ಅವಳ ಚಿನ್ನ-ಬೆಳ್ಳಿಗಳನ್ನು ಅವಳದೇ ಬ್ಯಾಂಕ್ ಲಾಕರ್‌ನಲ್ಲಿಡಿಸಿ, ಬೀಗದ ಕೈ ಅವಳಿಗೆ ಕೊಡಿ.
- ಮದುವೆಯಾದ ಒಂದೆರಡು ವರ್ಷಗಳವರೆಗೆ ಆಕೆಯ ತವರಿನವರು ಏನೆ ಕೊಟ್ಟರೂ ಅವೆಲ್ಲವನ್ನು ಸ್ವಂತ ಖುಷಿಯಿಂದ ಮಗಳಿಗೆ ಕೊಟ್ಟದೆಂದು ಅವರಿಂದ ಬರೆಸಿಕೊಳ್ಳಿ. ಇಲ್ಲವಾದರೆ ಮುಂದೆ ಅದು ಅನಾಹುತಗಳಿಗೆ ಕಾರಣವಾದಿತು.
- ಸೀಮೆ ಎಣ್ಣೆ ಹಾಕಿ ಸೊಸೆಯನ್ನು ಸುಡುವ ಅತ್ತೆಯರಿದ್ದಾರಂತೆ ಹಾಗೆಯೇ ಅತ್ತೆಯ ಮೇಲೆ ವರದಕ್ಷಿಣೆ ಕೇಸು ಹಾಕುವ ಸೊಸೆಯಂದಿರೂ ಇದ್ದಾರೆ. ಎರಡಕ್ಕೂ ಅಮಾಯಕರೇ ಬಲಿ

ಯಾಗುವುದು. ನೀವು ಇಂಥ ಬಲಿಪಶು ಆಗಬಾರದೆಂದಾರೆ ಕೆಲವು ಸಾಮಾನ್ಯ ಕಾನೂನಿನ ಬಗ್ಗೆ ನಿಮಗೆ ಮಾಹಿತಿ ಇರಲಿ.

ಈ ಮೇಲಿನ ಅಂಶಗಳನ್ನು ಕಂಡು ಗಾಬರಿಯಾಗುತ್ತಿದೆ ಅಲ್ವಾ? ಕೆಲವು ಸತ್ಯ ಘಟನೆಗಳ ಉದಾಹರಣೆ ಈ ರೀತಿಯಲ್ಲಿವೆ.

ಸಾಕಷ್ಟು ಸ್ಥಿತಿವಂತನಾದ ಕಂಪ್ಯೂಟರ್ ಎಂಜಿನಿಯರ್ ಒಬ್ಬ ಸಾಮಾನ್ಯ ಕೆಲಸದಲ್ಲಿದ್ದ ಸುಂದರ ಯುವತಿಯನ್ನು ಇಷ್ಟಪಟ್ಟು ಮನೆಯವರ ವಿರೋಧವನ್ನು ಲೆಕ್ಕಿಸದೆ ಮದುವೆಯಾದ. "ಕೆಲಸ ಬಿಟ್ಟು ಮನೆಯಲ್ಲಿ ಹಾಯಾಗಿರು, ಬೇಗ ಒಂದು ಮಗುವಾದರೆ ಅಪ್ಪ-ಅಮ್ಮನಿಗೂ ಸಂತೋಷ ವಾಗುತ್ತೆ" ಎಂದು ಹೆಂಡತಿಗೆ ಹೇಳಿದ್ದೆ ಅವನಿಗೆ ಮುಳುವಾಯಿತು. ತನ್ನನ್ನು ಇಷ್ಟಪಡದ ಗಂಡನ ಮನೆಯವರಿಗಾಗಿ ತಾನು ಯಾಕೆ ಕೆಲಸ ಬಿಡಬೇಕು? ಅವರಿಗ್ಯಾಕೆ ಸಂತೋಷ ಕೊಡಬೇಕು? ಎಂದು ಆಕೆ ರೊಚ್ಚಿಗೆದ್ದಳು. ಮದುವೆಯಾದ ಮೂರು ತಿಂಗಳಲ್ಲೆ ವರದಕ್ಷಿಣೆ ಕೇಸು ಹಾಕಿ ಗಂಡ, ಅತ್ತೆ, ರಜಾದಲ್ಲಿ ಮನೆಗೆ ಬಂದ ನಾದಿನಿ, ಅವಳು ನಾಲ್ಕು ವರ್ಷ ಮಗುವನ್ನು ಜೈಲಿಗೆ ಹಾಕಿಸಿದಳು. ಜೈಲಿನಿಂದ ಮನೆಗೆ ಬಂದ ಅತ್ತೆ ಆತ್ಮಹತ್ಯೆ ಮಾಡಿಕೊಂಡರು.

ಹಾಗೆಯೇ ಇನ್ನೊಂದು ಪ್ರಕರಣ ಗಮನಿಸಿದಾಗ, ಪಾವನಿ ಮಹತ್ವಾಕಾಂಕ್ಷಿಯ ಹುಡುಗಿ. ಚೆನ್ನಾಗಿಲ್ಲವೆಂದು ಪತಿಯ ಹೆಸರನ್ನೇ ಬದಲಾಯಿಸಲು ಹೇಳಿದ ಅಪ್ರಬುದ್ಧೆ. ಮನೆಯವರೇ ನೋಡಿಮಾಡಿದ ಮದುವೆ. ಆದರೆ ಜೀವನವೆಲ್ಲಾ ಸಿನಿಮಾದಂತೆ ಪಾರ್ಟಿ, ಪಾರ್ಕು, ಸುತ್ತಾಟ, ಸಂಚಾರ ಎಂದುಕೊಂಡಿದ್ದ ಅವಳು ಗಂಡ, ಅತ್ತೆ-ಮಾವ ಹೀಗೆ ಯಾರ ಜೊತೆಯೂ ಹೊಂದಿ ಕೊಳ್ಳಲಿಲ್ಲ. ಮದುವೆಯಾದ ಆರು ತಿಂಗಳಿಗೆ ಬೇರೆ ಹೋಗೋಣವೆಂದಳು. ಅದನ್ನು ನಿರೀಕ್ಷಿಸದಿದ್ದ ವಿನಾಯಕ ಸ್ವಲ್ಪ ಕಾಲ ಸಮಯ ಕೇಳಿದ. ಅಷ್ಟಕ್ಕೆ ಸಿಟ್ಟಾದ ಪಾವನಿ ಅತ್ತೆ-ಮಾವ, ಪತಿಯ ಮೇಲೆ ಪೊಲೀಸ್ ದೂರು ನೀಡಿದಳು. ನೆರೆಹೊರೆಯರಲ್ಲಿ ಒಳ್ಳೆಯಹೆಸರಿಟ್ಟುಕೊಂಡಿದ್ದ ಅವರು ಜೈಲಿಗೆ ಹೋಗದೆ ಹೇಗೋ ತಪ್ಪಿಸಿಕೊಂಡರು.

ಇನ್ನೂ ಜಿದ್ದಿಗಾಗಿ, ಸೇಡಿಗಾಗಿ ಕೇಸು ಹಾಕುವುದು ಉಂಟು ತೀರಾ ವಯಸ್ಸಾದ ಮತ್ತು ಹಾಸಿಗೆ ಹಿಡಿದ ತಂದೆ-ತಾಯಿಯರನ್ನು ಬಿಟ್ಟು ಬೇರೆ ಮನೆ ಮಾಡಲೊಪ್ಪದ ಪತಿ ಬಳಿ ಜಗಳ ಮಾಡಿ ಸಾಕಷ್ಟು ವರಮಾನವುಳ್ಳ ಎಂಜಿನಿಯರ್ ಹುಡುಗಿಯು ತಾಯಿ ಮನೆ ಸೇರಿದ್ದಳು. ಏಳು ತಿಂಗಳ ನಂತರ ಇದ್ದಕ್ಕಿದ್ದಂತೆ ಮೈಯೇಲೆಲ್ಲಾ ಸೀಮೆಎಣ್ಣೆ ಸುರುದುಕೊಂಡು ಕೋರಮಂಗಲದಲ್ಲಿನ ತಾಯಿ ಮನೆಯಿಂದ ಮತ್ತಿಕೆರೆಯ ಪೊಲೀಸ್ ಠಾಣೆಗೆ ಬಂದು, ಗಂಡ ತನ್ನನ್ನು ಸುಟ್ಟು ಸಾಯಿಸಲು

ಹೀಗೆ ಮಾಡಿದ್ದಾನೆಂದು ದೂರು ಕೊಟ್ಟಳು. ಪೋಲೀಸರು ಬಂದಾಗ ಗಂಡ ಹೇಗೋ ತಪ್ಪಿಸಿಕೊಂಡನು. ಮನೆಯಲ್ಲಿದ್ದ ವೃದ್ಧ ಮಾವನನ್ನು ಕರೆದುಕೊಂಡು ಹೋಗಿ ಜೈಲಿಗೆ ಹಾಕಿದರು ಅವರನ್ನು ಬಿಡಿಸಿ ತರುವಷ್ಟರಲ್ಲಿ ಅತ್ತೆ ಇತ್ತ ಹೃದಯ ಘಾತದಿಂದ ತೀರಿಕೊಂಡಿದ್ದರು. ಇವೆಲ್ಲ ಸತ್ಯ ವಿಷಯಗಳೇ. ಇದರಲ್ಲಿ ಹೆಚ್ಚಿನವು ಲಕ್ಷಾಂತರ ರೂಪಾಯಿ ಜೀವನಾಂಶ ಪಡೆಯಬಹುದೆಂದು ದುರಾಸೆಯಿಂದ ಮಾಡಿದವು. ಇಂತ ಪಿಡುಗು ಈಗ ಮಧ್ಯಮವರ್ಗಕ್ಕೂ ವಿಸ್ತರಿಸುತ್ತದೆ. ಹಾಗಾಗಿ ತಾಯಂದಿರೇ ದುಷ್ಟತನವನ್ನೇ ದುರಿಸುವ ಮನೋಸ್ಥೈರ್ಯವಿರುವಂತೆ ನಿಮ್ಮ ಮಗ-ಮಗಳನ್ನು ಬೆಳೆಸಿ. ಇಂದು ನೆರೆಯೂರಿಗೆ ಬಂದ ಪೀಡೆ ನೆರೆಮನೆಗೆ ಬಂದು ನಾಳೆ ನಿಮ್ಮ ಮನೆ ಬಾಗಿಲಿಗೆ ಬಂದಿತು ಜಾಗೃತೆಯಾಗಿರಿ.

ಭಾರತೀಯ ಸಮಾಜದಲ್ಲಿ ಅತ್ತೆ ಸೊಸೆಯರ ವೈರವು ಜಗದ್ವಿಖ್ಯಾತ. ಮದುವೆ ನಿಶ್ಚಯವಾದಾಗನಿಂದ ನಿಮ್ಮ ಅತ್ತೆಯನ್ನು ನೋಡಿದ್ದೀಯಾ! ಎಂತಹ ಸ್ವಭಾವವೋ, ಏನ್ಕಥೆಯೋ! ಎಂದು ಆರಂಭಗೊಂಡ ಮಾತುಗಳು, ಕೊನೆಗೆ ಬಗೆ ಬಗೆಯ ಹೇಳಿಕೆಗಳಾಗಿ ಮದುಮಗಳ ಮನಸ್ಸಿಗೆ ನಾಟುವಷ್ಟು ಪ್ರಭಾವ ಬೀರಲು ಆರಂಭವಾಗುತ್ತದೆ. ಮಗನ ಹೃದಯದಲ್ಲಿರುವ ತನ್ನ ಸ್ಥಾನವನ್ನು ವಶಮಾಡಿಕೊಳ್ಳಲು ಬಂದಿರುವ ರಾಕ್ಷಸಿ, ಅವನ ಮೇಲೆ ಹಕ್ಕನ್ನು ಹೊಂದುವ ಮಾಯಾಂಗನೆ, ಎಂದೆಲ್ಲಾ ನಿರ್ಧರಿಸಿ ಬಿಡುವ ಅತ್ತೆಮ್ಮಂದಿರು, ಅಂದ-ಚೆಂದ, ವಿದ್ಯೆ, ಗುಣಗುಣವನ್ನೆಲ್ಲಾ ಕೂಲಂಕುಷವಾಗಿ ಗಮನಿಸಿ ತಂದರೂ ಕೊಂಕು ನುಡಿಯುತ್ತಾ ತಪ್ಪುಗಳನ್ನು ಕಂಡು ಹಿಡಿಯುವುದರಲ್ಲಿ ಮಗ್ನರಾಗುತ್ತಾರೆ. ಆಕೆ ಎಂತಹವರಾದರು ಪರಿಸ್ಥಿತಿ ಸೊಸೆಗಿದ್ದೇ ಇರುತ್ತದೆ. ಆದರೆ ಗೆಳತಿಯರೇ ಅಭದ್ರತೆಯ ಭಾವದಲ್ಲಿ ಬಳಲುವ ಅತ್ತೆಯನ್ನು ಸಹೃದಯತೆಯಿಂದ ಅರ್ಥಮಾಡಿಕೊಂಡರೆ ಸಮಸ್ಯೆ ಇರದು. ಒಂದೇ ವ್ಯಕ್ತಿಗಾಗಿ ನೀವು ಕಿತ್ತಾಡಿದರೆ, ಆತನ ಮನಸ್ಥಿತಿ ನಿಸ್ಸಂಶಯವಾಗಿ ಹಾಳಾಗುತ್ತ ದಲ್ಲವೇ? ಅದೇ ಬಗೆಯಲ್ಲಿ, ನಿಮ್ಮ ಪತಿಯಷ್ಟೇ ಸಬಲರಾಗಿದ್ದು ವಿಶಾಲ ಪ್ರಪಂಚದ ಸಂಪರ್ಕ ಹೊಂದಿದ್ದರು, ಕೇವಲ ಮಗನಷ್ಟೇ ಪ್ರಪಂಚವೆಂದು ತಿಳಿದ ಆ ತಾಯಿಯ ಮೇಲೆಕೆ ಅರಿಯದ ಸಿಟ್ಟು, ಆತನನ್ನು ಪ್ರೀತಿಯಿಂದ ವಿಶ್ವಾಸದಿಂದ ಗೆಲ್ಲಿ ಹಟದಿಂದಲ್ಲ.

ನಿಮ್ಮ ಪತಿಯ ಅಭಿವೃದ್ಧಿಯಲ್ಲಿ ಆತ ತಾಯಿಯ ಪಾತ್ರವೆಷ್ಟಿದೆ ಎಂಬುದನ್ನು ನೀವೊಮ್ಮೆ ಅವಲೋಕಿಸಿದರೆ, ನಿಮಮತ್ತೆ ಪಟ್ಟ ಕಷ್ಟ-ನಷ್ಟಗಳು ಕಣ್ಣೆದುರಿಗೆ ಬಿಚ್ಚಿಡುತ್ತದೆ. ನಿಮ್ಮ ಪತಿ ಸೋಲು-ಗೆಲವು, ಸಂತೋಷ, ಸುಖ-ದುಃಖ ಪ್ರತಿಯೊಂದನ್ನು ಕಂಡಿರುವ ಹೆಣ್ಣು ಮಗಳು. ಆದ್ದರಿಂದ ಮಗನ ಹೃದಯದಲ್ಲಿ ಆಕೆಯೊಂದು ದೃಢವಾದ ಸ್ಥಾನವನ್ನು ಪಡೆದಿರುವುದರಲ್ಲಿ ಏನು ಆಶ್ಚರ್ಯ

ವಿಲ್ಲವಲ್ಲ. ಇವೆಲ್ಲಾ ಅಂಶಗಳನ್ನು ನೀವು ಗಮನದಲ್ಲಿಟ್ಟುಕೊಂಡು ಅವರನ್ನು ಗೌರವಿಸಿ, ನಿಮ್ಮ ಅತ್ತೆಯವರೊಂದಿಗೆ ಮುಕ್ತವಾಗಿ ಮಾತನಾಡಿ, ಅವರ ಬಳಿ ಆಸೆ ಆಕಾಂಕ್ಷೆಯನ್ನು ಬಿಚ್ಚಿಡಿ. ನೀವು ಆಕೆಯೊಂದಿಗೆ ಪ್ರೀತಿ ವಿಶ್ವಾಸವನ್ನು ಬಯಸುತ್ತಿರೆಂದು ತಿಳಿದರೆ, ಆಕೆಯೂ ನಿಮ್ಮ ಮೇಲೆ ಪ್ರೀತಿಯ ಪೂರವನ್ನು ಹರಿಸುತ್ತಾರೆ.

ಸೀನಿಮಾ ಹಾಗೂ ಜಾಹೀರಾತುಗಳಲ್ಲಿ ತೋರಿಸಿದಂತೆ, ಅತ್ತೆಮ್ಮಗಳು ರಾಶಿ ರಾಶಿ ಪ್ರೀತಿಯನ್ನು ಬಂದ ಕ್ಷಣವೇ ತೋರಿಸುತ್ತಾರೆಂದು ನಿರೀಕ್ಷಿಸದಿರಿ. ಆ ರೀತಿ ಎಲ್ಲಿಯೂ ನಡೆಯದು. ನೀವು ಬಾಂಧವ್ಯವವನ್ನು ಮಧುರಗೊಳಿಸಿಕೊಳ್ಳಲು ಪ್ರಯತ್ನಿಸಿದಾಗ, ಪ್ರೀತಿ, ಪ್ರೇಮವು ಬಾಳಲ್ಲಿ ಚಿರಸ್ಥಾಯಿಯಾಗುತ್ತದೆ. ಅತ್ತೆಯ ವಯಸ್ಸು ಹಾಗೂ ವಿವೇಕವನ್ನು ಗೌರವಿಸಿ ಮನದಲ್ಲಿರುವ ಸಿಡಿಮಿಡಿಯನ್ನು ಪಕ್ಕಕ್ಕಿಟ್ಟು, ನೋಡಿದಾಗ ಆಕೆಯು ನಿಮಗಿಂತ ಹಿರಿಯಳು, ಅನುಭವಸ್ಥಳೆಂಬ ಸಂಗತಿ ನಿಚ್ಚಳವಾಗಿ ಕಂಡುಬರುತ್ತದೆ. ಅದೇ ಬಗೆಯಲ್ಲಿ ಬದುಕಿನ ಸಮಸ್ಯೆಗಳನ್ನು ಆಕೆ ತನ್ನ ಅನುಭವದಿಂದ ಸುಲಭವಾಗಿ ಪರಿಹರಿಸುತ್ತಾಳೆಂಬ ಅಂಶವನ್ನು ಒಪ್ಪಿಕೊಳ್ಳಿ. ಸೆನ್ಸಾಫ್ ಹ್ಯೂಮರನ್ನು ಬೆಳೆಸಿಕೊಳ್ಳಿ. ತೊಂದರೆಯನ್ನು ಎದುರಿಸಬೇಕಾಗಿ ಬಂದಂತಹ ಸಂದರ್ಭದಲ್ಲಿ ನಗುನಗುತ್ತಾ ಪರಿಹರಿಸಿಕೊಳ್ಳಲು ಪ್ರಯತ್ನಸಿ. ಅನವಶ್ಯಕ ಸಂಗತಿಗಳ ಬಗ್ಗೆ ಕೋಳಿ ಜಗಳವಾಡುತ್ತಾ ಕೊರುವ ಬದಲು ವಿವೇಚನೆಯಿಂದ ಪರಿಸ್ಥಿತಿಯ ಬಗ್ಗೆ ಚಿಂತಿಸಿ, ಕ್ಷಮೆಯಿಂದ ಮಿಗಿಲಾದ ದಿವ್ಯ ಔಷಧವಿಲ್ಲ. ಮರೆವೆ ಒಂದು ದಿವ್ಯ ಸಂಜೀವಿನಿ ಇವೆಲ್ಲವನ್ನು ಬಾಳಲ್ಲಿ ಅಳವಡಿಸಿಕೊಂಡರೆ ನಿಮ್ಮಲ್ಲಿ ಉಂಟಾಗುವ ಬದಲಾವಣೆಯು ಇತರರಿಗೆ ಮಾದರಿಯಾಗುತ್ತದೆ.

ನಿಮ್ಮ ಅತ್ತೆಯವರ ಬದುಕಲ್ಲಿ ನೀವು ಪ್ರವೇಶಿಸಿದಿದ್ದರೆ, ಆಕೆ ನಿಮ್ಮೊಂದಿಗೆ ಸುಲಭವಾಗಿ ಬೆರೆಯಳು ಎಷ್ಟು ಅವರ ಹೃದಯಕ್ಕೆ ಸಮೀಪರಾಗುತ್ತಿರೋ, ಅಷ್ಟು ಒಳ್ಳೆಯದು. ಆದರೆ ಎಲ್ಲಾ ಸಂದರ್ಭಗಳಲ್ಲೂ ಆಕೆ ನಿಮ್ಮೊಂದಿಗೆ ಹೊಂದಿಕೊಳ್ಳುತ್ತಾಳೆಂದು ಹೇಳಲಾಗದು. ಅತ್ತೆಯ ಪ್ರೀತಿಯನ್ನು ಗಳಿಸಿಕೊಳ್ಳಲು ಆಕೆಗಿಷ್ಟವಿರದ ಅಭ್ಯಾಸಗಳನ್ನು ಬಿಟ್ಟು ಅವರಿಗಿಷ್ಟವಾಗುವುದನ್ನು ಬೆಳೆಸಿಕೊಳ್ಳುವುದು ಉತ್ತಮ. ಅತ್ತೆಗಿರುವ ಸ್ವಭಾವ ಗುಣಗಳಲ್ಲಿ ನಿಮಗಿಷ್ಟವಾದುದನ್ನು ಪ್ರಶಂಸೆ ಮಾಡಿ. ಯಾವುದಾದರೂ ಹಬ್ಬಕ್ಕೆ ತನ್ನ ಬಳಿಯಲ್ಲಿರುವ ಹಣದಿಂದ ನಿಮಗೆ ಸೀರೆ ಅಥವಾ ಯಾವುದಾದರೂ ವಸ್ತುವನ್ನು ಕಾಣಿಕೆಯಾಗಿ ನೀಡಿದರೆ, ಅದರ ಬಗ್ಗೆ ಒಂದೆರಡು ಒಳ್ಳೆಯ ಮಾತುಗಳನ್ನಾಡಿ. ಆಕೆಯ ಅಭಿರುಚಿಗಳ ಬಗ್ಗೆ ಗಮನ ನೀಡಿ ಅವರಿಷ್ಟವಾದ ಸೀನಿಮಾಕ್ಕೆ ಇಬ್ಬರೂ ಕೂಡಿ ನೋಡಿಕೊಂಡು ಬನ್ನಿ. ಇದರಿಂದ ಅವರಲ್ಲಿರುವ ಭದ್ರತೆಯ ಭಾವ ಕಡಿಮೆಯಾಗಿ, ತಾನು ಈ ಮನೆಗೆ

ಬೇಡವಾದವಳೇನೋ ಎಂಬ ಆತಂಕದಿಂದ ದೂರವಾಗುತ್ತದೆ ಹಾಗೂ ನಿಮ್ಮೊಂದಿಗೆ ಮತ್ತಷ್ಟು ಪ್ರೀತಿಯಿಂದ ಬಾಳಲು ಸಾಧ್ಯವಾಗುತ್ತದೆ. ಅವಕಾಶ ದೊರಕಿದಾಗಲೆಲ್ಲಾ ಆಕೆಗೆ ಏನಾದರೊಂದು ಕಾಣಿಕೆಯನ್ನು ನೀಡಿ ಅದೇ ಬಗೆಯಲ್ಲಿ ಆಗಾಗ ಅವರನ್ನು ಈ ಸೀರೆಯಲ್ಲಿ ನೀವೆಷ್ಟು ಸುಂದರವಾಗಿ ಕಾಣುತ್ತಿದ್ದೀರಿ. ಇದು ನಿಮಗೆ ಒಪ್ಪುತ್ತದೆ ಎಂದು ಪ್ರಶಂಸಿ. ಅದೇ ಬಗೆಯಲ್ಲಿ, ನಿಮ್ಮ ಪತಿಯಲ್ಲಿ ಅಡಕವಾಗಿರುವ ಉತ್ತಮ ಅಂಶಗಳ ಬಗ್ಗೆ ಅವರಿಂದ ಕೇಳಿ ತಿಳಿಯಿರಿ. ಆಕೆಯ ಆಸೆ ಆಕಾಂಕ್ಷೆಯ ಬಗ್ಗೆಯೂ ಆಸಕ್ತಿಯನ್ನು ತೋರಿಸಿ. ಹಿಂದೆ ನಿಮ್ಮ ಅತ್ತೆ ಹೊಂದಿದ್ದ ಕನಸಿನ ಬಗ್ಗೆ ತಿಳಿದುಕೊಳ್ಳಿ. ಅದರಲ್ಲೂ ಅವರ ಬಾಲ್ಯ, ಮಕ್ಕಳು... ಇತ್ಯಾದಿ ಅವರ ಮನಸ್ಸಿಗೆ ಹಿತವಾದದನ್ನೇ ಕೇಳಲು ಉತ್ಸಾಹ ತೋರಿ. ಅವರಿಗೆ ತಾಯಿಯ ಸ್ಥಾನವನ್ನು ನೀಡಿ ಗೌರವಿಸಿ. ನಿಮ್ಮ ಅತ್ತೆ ನಿಮ್ಮಿಬ್ಬರನ್ನು ಬಾಳಿನ ಅಡಿಪಾಯವೆಂದು ತಿಳಿಯಲ್ಲಿ. ಸಮವಾದ ಸ್ಥಾನಕ್ಕಾಗಿ ಹೋರಾಡದೆ ಅದನ್ನು ಪ್ರೀತಿಯಿಂದ ಪಡೆದುಕೊಳ್ಳಿ. ಎರಡೂ ಸಂಬಂಧಗಳೂ ಒಂದೇ ರೀತಿಯಲ್ಲಿ ಚೆನ್ನಾಗಿರಲು ಸಮಾಜ ಬಿಡದು ಹಾಗೆಂದು ಸಮಾಜದೆಡೆಗೆ ಕಿವಿಗೊಟ್ಟು ಆಕೆಯ ಮೇಲೆ ನಿರ್ಲಕ್ಷ್ಯ ಭಾವ ಬೆಳೆಸಿಕೊಳ್ಳದಿರಿ. ಅವರೊಂದಿಗೆ ನೀವೆಷ್ಟು ಉತ್ತಮ ಬಾಂಧವ್ಯ ಹೊಂದುತ್ತೀರೋ ಅಷ್ಟೇ ಅತ್ಯುತ್ತಮ ಫಲಿತಾಂಶವನ್ನು ನಿಮ್ಮದಾಗಿಸಿಕೊಳ್ಳಿರಿ!!

ಕೆಲವು ವರ್ಷಗಳ ಹಿಂದಿನವರೆಗೂ ಮಹಿಳೆಯ ಮೇಲಿನ ಹಲ್ಲೆ, ದೌರ್ಜನ್ಯಗಳು ಮನೆಯೊಳಗೆ ಮಾತ್ರ ಸೀಮಿತವಾಗಿದ್ದವು. ಮನೆಯ ಹೊರಗೆ ಹಿಂಸೆ ಅನುಭವಿಸುವ ಉದಾಹರಣೆಗೆ ಅಲ್ಲಿ ಇಲ್ಲಿ ಮಾತ್ರ ಸಿಗುತ್ತಿತ್ತು. ಆದರೂ ಆಕೆ ಸಮಾಜಿಕವಾಗಿ ಸಾಕಷ್ಟು. ಗೌರವ ಪಡೆಯುತ್ತಿದದಳು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಮನೆಯಲ್ಲಿ ಸುರಕ್ಷಿತಳಾಗಿರುವ ಮಹಿಳೆ ಸಾಮಾಜಿಕವಾಗಿ ಸಾಕಷ್ಟು ಹಿಂಸೆಗೆ ಗುರಿಯಾಗುತ್ತಿದ್ದಾಳೆ. ರಸ್ತೆ ಬದಿಯ ಪೊದೆಗಳಲ್ಲಿ ಶವವಾಗಿ ಪತ್ತೆಯಾಗುತ್ತಾಳೆ. ಜೈಲಿನ ಕಂಬಿ ಹಿಂದೆಯೂ ವಿಚಾರಣಾಧೀನ ಖೈದಿಯಾಗಿ, ಶಿಕ್ಷೆ ಅನುಭವಿಸುವ ಅಪರಾಧಿಯಾಗಿ ಕಂಡುಬರುವುದು ಆಧುನಿಕ ಸಮಾಜದಲ್ಲಿ ಅನಿವಾರ್ಯ ಎನಿಸಬಹುದು. ಆದರೆ ಆಕೆ ಆರೋಪಿಯಾಗಿ ಕಟಕಟೆಯಲ್ಲಿ ನಿಲುವುದು ಯಾವುದರ ಸಂಕೇತ ಎನ್ನುವ ಕುರಿತು ನಾವು ಯೋಚಿಸಿದ್ದೇವೆಯೇ?

ಸ್ತ್ರೀ ಭ್ರೂಣಹತ್ಯೆಯ ಕುರಿತು ಸಮಾಜದಲ್ಲಿ, ಸರ್ಕಾರದ ಮಟ್ಟದಲ್ಲಿ ಸಾಕಷ್ಟು ಚಿಂತನೆಗಳು ನಡೆಯುತ್ತಿವೆ. ಅದನ್ನು ಮೀರಿ ಭ್ರೂಣಹತ್ಯೆ, ಅವ್ಯಾಹತವಾಗಿ ಮುಂದುವರಿದಿದೆ. ಸ್ತ್ರೀ ಭ್ರೂಣ ಹತ್ಯೆಗೆ ಕಡಿಮೆಯಿಲ್ಲತಂದಹ ದುಷ್ಪರಿಣಾಮ ಮಹಿಳಾ ಹತ್ಯೆಯಿಂದಲೂ ಉಂಟಾಗುತ್ತಿದೆ. ತೊಟ್ಟಿಲು ತೂಗುವ ಕೈಗಳು ಆಡಳಿತ ನಡೆಸುತ್ತವೆ. ಅಡುಗೆ ಮನೆಯಲ್ಲಿರುವ ದೇಹಗಳು ಸಾಮಾಜಿಕ ಉದ್ಯಮ

ಕ್ಷೇತ್ರಗಳಲ್ಲಿವೆ ಎಂದು ನಾವು ತೃಪ್ತಿಪಡುತ್ತಿದ್ದೇವೆ. ಈ ಬೆಳವಣಿಗೆಗೆ ಆಧುನಿಕ ಅಭಿವೃದ್ಧಿಯ ಕಾರಣಗಳನ್ನು ನೀಡುತ್ತಿದ್ದೇವೆ. ಇಂಥ 'ಅಭಿವೃದ್ಧಿ'ಯನ್ನು ಹೊಗಳಿ ಅಟ್ಟಕ್ಕೇರಿಸಲು ಸಿಕ್ಕಿದ ಅವಕಾಶಗಳನ್ನು ನಾವು ಏಕಪಕ್ಷೀಯವಾಗಿ ಬಳಸುತ್ತಿದ್ದೇವೆ. ಮಹಿಳೆಯರಿಗೆ ಇನ್ನಷ್ಟು ಸ್ವಾತಂತ್ರ್ಯಬೇಕು ಎಂಬ ಸಹಜ ಬೇಡಿಕೆಯನ್ನು ಮುಂದಿರಿಸುತ್ತೇವೆ. ಅದಕ್ಕಾಗಿ ಒತ್ತಾಯಿಸುತ್ತಿದ್ದೇವೆ. ಆದರೆ ಮಹಿಳಾ ಹತ್ಯೆಗಳ ಕುರಿತು ನಾವು ಯೋಚಿಸುತ್ತಿರುವ ದಾರಿ ಸರಿಯಾಗಿದೆಯೇ ಇಲ್ಲ ಅದನ್ನು ಒಂದು ಪ್ರೇಮ ಪ್ರಕರಣವೆಂದೋ ಅತ್ಯಾಚಾರ ಪ್ರಕರಣವೆಂದೋ ಪರಿಗಣಿಸಿ ಸಂಕುಚಿತ ಮನೋಭಾವನೆಯಿಂದ ಕಾಣುತ್ತಿದ್ದೇವೆ. ಅದು ನಿರ್ದಿಷ್ಟ ಮಹಿಳೆಯ ಸಮಸ್ಯೆ ಎಂದು ಭಾವಿಸುತ್ತೇವೆಯೇ ಹೊರತು,. ಮಹಿಳಾ ಸಮಾಜಕ್ಕಿರುವ ಸಮಸ್ಯೆ ಎಂದು ನಮ್ಮ ಆಧುನಿಕ ಸಮಾಜ ಪರಿಗಣಿಸುವುದೇ ಇಲ್ಲ. ಈ ಬಗ್ಗೆ ಮಹಿಳಾಪರ ಸಂಘಟನೆಗಳೂ ಪರಿಣಾಮಕಾರಿ ಚಿಂತನೆ ನಡೆಸಿಲ್ಲ. ಹೆಚ್ಚುತ್ತಿರುವ ಮಹಿಳಾ ಹತ್ಯೆಗಳಿಗೆ ಕಾರಣವೇನು? ಅದು ಯಾವುದರ ಸಂಕೇತ? ಅದನ್ನು ತಡೆಯಲು ಯಾವುದಾದರೂ ದಾರಿಗಳಿವೆಯೇ ಈ ಕುರಿತು ಚಿಂತಿಸಬೇಕಾದ ಕಾಲ ಬಂದಿದೆ. ಮಹಿಳೆಯರ ಸುರುಕ್ಷಿತೆಗಾಗಿ ಹಲವು ಕಾನೂನು ರಕ್ಷಣೆಗಳಿವೆ. ಪುರುಷನಿಗೆ ಕಡಿಮೆಯಿಲ್ಲದ ಎಲ್ಲಾ ಸ್ಥಾನಮಾನಗಳು ಆಕೆಗೆ ಸಿಗುತ್ತಿವೆ. ಆದರೆ ಮಹಿಳೆಯರ ಮೇಲಿನ ದಬ್ಬಾಳಿಕೆಯನ್ನು ಪೂರ್ಣ ಪ್ರಮಾಣದಲ್ಲಿ ನಿಯಂತ್ರಿಸುವಲ್ಲಿ ಯಾವ ಕಾನೂನುಗಳೂ ಸಫಲವಾಗಿಲ್ಲ. ವರದಕ್ಷಿಣೆ ದೌರ್ಜನ್ಯ ಕಾನೂನುಗಳನ್ನು ಮಹಿಳೆಯರೇ ದುರುಪ ಯೋಗ ಪಡಿಸಿಕೊಳ್ಳುತ್ತಿದ್ದಾರೆ ಎಂಬುದು ಇದೀಗ ಕೆಲವು ಪ್ರಕರಣಗಳಿಂದ ಸಾಬೀತಾಗುತ್ತಿದೆ.

ದಯೆ, ವಿಶ್ವಾಸ, ವಾತ್ಸಲ್ಯ, ಕ್ಷಮೆ, ಪ್ರಾಮಾಣಿಕತೆ, ಸಾತ್ವಿಕತೆ, ಮೃದು, ಮನಸ್ಸು, ಸತ್ಯಸಂಧತೆ ಮುಂತಾದವುಗಳಿಗೆ ಅನ್ವರ್ಥಕ ನಾಮವೋ ಎಂಬಂತಿದ್ದ ಸ್ತ್ರೀಯರು ಇಂದು ಅದ್ಯಾವುದನ್ನು ಉಳಿಸಿಕೊಂಡಿಲ್ಲ. ಧನಾತ್ಮಕವಾಗಿ ಚಿಂತಿಸುವುದು ಬಿಟ್ಟು ಋಣಾತ್ಮಕವಾಗಿ ಯೋಚಿಸಲು ಮನಸ್ಸು ಮಾಡುತ್ತಿರುತ್ತಾರೆ. ತಮ್ಮ ರಕ್ಷಣೆಗೆಂದು ಜಾರಿ ಬಂದಿರುವ ಕಾನೂನುಗಳನ್ನೇ ದುರುಪಯೋಗ ಪಡಿಸಿಕೊಳ್ಳವರೆಗೆ ಮುಂದುವರಿಯುತ್ತಿದ್ದಾರೆ. ಕೆಲವರ ಇಂತಹ ಹೆಜ್ಜೆಗಳು ಮಹಿಳಾ ಸಮಾಜಕ್ಕೆ ಕಂಟಕವಾಗಿ ಪರಿಣಮಿಸುತ್ತಿವೆ. ಈ ಮೂಲಕ ಇವರು ಸ್ನೇಹದ ಬದಲು ದ್ವೇಷದ ಅಪ್ಪುಗೆ ಮಾಡುತ್ತಾರೆ. ಇವು ಕೂಡ ಮಹಿಳಾ ಹತ್ಯೆಗೆ ಕಾರಣವಾಗುತ್ತಿವೆ. ಹಿಂದೆಲ್ಲ ನಿಜವಾಗಿಯೂ ವರದಕ್ಷಿಣೆ ದೌರ್ಜನ್ಯಗಳು ಅತಿಯಾಗಿದ್ದವು. ಆದರೆ ಅವೆಲ್ಲವೂ ಯಾವುದೇ ಕಾನೂನು ಬಂಧನಕ್ಕೆ ಸಿಲುಕಿಕೊಳ್ಳದೆ ಸಂಬಂಧಿಗಳ, ಊರು ಗಣ್ಯರ ಸಮ್ಮುಖದಲ್ಲಿನ ಮಾತುಕತೆ ಮೂಲಕ ಪರಿಹಾರ ವಾಗುತ್ತಿದ್ದವು. ವಿವಾಹ ವಿಚ್ಛೇದನ ಪ್ರಕರಣ ತುಂಬಾ ವಿರಳವಾಗಿತ್ತು. ದಾಂಪತ್ಯ ಜೀವನ

ಸೂಸೂತ್ರವಾಗಿ ಮುಂದುವರಿಯುತ್ತಿತ್ತು. ಆದರೆ ಇಂದು ಮಹಿಳೆಯರಿಗೆ ಕಾನೂನಿನ ರಕ್ಷಣೆ ಹೆಚ್ಚಾಗಿದೆ. ಅನ್ನೇ ಬ್ರಹ್ಮಸ್ತ್ರವಾಗಿ ಬಳಸಿಕೊಂಡು ಪುರುಷರತ್ತ ಪ್ರಯೋಗಿಸುತ್ತಾರೆ. ನಗರ ಪ್ರದೇಶದ ಅತಿ ಸುಶಿಕ್ಷಿತ ಜನಾಂಗವೂ ವೈವಾಹಿಕ ಸಂಬಂಧಕ್ಕೆ ಹಿಂದಿಷ್ಟು ಪ್ರಾಧಾನ್ಯತೆ ನೀಡುತ್ತಿಲ್ಲ. ಕೃತಕ ದೌರ್ಜನ್ಯ ಪ್ರಕರಣಗಳು ಹೆಚ್ಚಾಗುತ್ತಿವೆ. ಗಂಡ-ಹೆಂಡತಿಯರು ನ್ಯಾಯಾಲಯಗಳಲ್ಲಿ ವಾದಿ, ಪ್ರತಿವಾದಿಯರಾಗುತ್ತಾರೆ. ತೀರ್ಪು ಬಂದಾಗ ಅವರೇ ಸೋಲು ಗೆಲುವಿನ ಒಡೆಯರಾಗುತ್ತಾರೆ. ಪರಸ್ಪರ ಶತ್ರುಗಳಾಗಿ ಹೊರಬರುತ್ತಾರೆ. ಇಲ್ಲಿ ಸಾಮಾಜಿಕವಾಗಿ ಮಹಿಳೆಯು ತನಗೆ ಹೆಚ್ಚು ನಷ್ಟ ಮಾಡಿಕೊಳ್ಳುತ್ತಾರೆ.

ಹಲವು ಪ್ರೇಮ ಪ್ರಕರಣಗಳಲ್ಲಿ ನಿಗದಿತ ಗುರಿಮುಟ್ಟಾದ ಮೊದಲೇ ವಿಶ್ವಾಸಕ್ಕೆ ಭಂಗ ತುರವ ಕೆಲವು ಹೆಜ್ಜೆಗಳನ್ನು ತುಳಿದಿರುತ್ತಾರೆ. ಆ ಹೊತ್ತಿಗೆ ಅದು ವಿಶ್ವಾಸ ಯೋಗ್ಯವೂ, ಇಬ್ಬರ ಸಮ್ಮತಿಯಿಂದ ನಡೆದಿರುವಂಥದ್ದೂ ಆಗಿರಬಹುದು. ಆದರೆ ಕೊನೆಗೆ ಕೆಲವು ಶಕ್ತಿಗಳು ಹಾಗೂ ಪರಿಸ್ಥಿತಿ ಸೇರಿಕೊಂಡು ಲೈಂಗಿಕ ದೌರ್ಜನ್ಯ, ಅತ್ಯಾಚಾರದಂತಹ ಪ್ರಕರಣಗಳು ಕೃತವಾಗಿ ರೂಪು ಗೊಳ್ಳುತ್ತವೆ. ಪರಾರಿ ಪ್ರಕರಣವು ಅಪಹರಣವಾಗಿ ಬದಲಾಗುತ್ತದೆ. ಇಲ್ಲಿ ಕಾನೂನಿನ ಹೆಸರಿನಲ್ಲಿ ಮಹಿಳೆಯು ಪುರುಷರ ಮೇಲೆ ಸವಾರಿಗೆ ಮುಂದಾಗುತ್ತಾಳೆ. ಕೊನೆಗೆ ಆಕೆ ವಿವಿಧ ಕಾರಣಗಳಿಂದಾಗಿ ಕೈಕೊಟ್ಟಾಗ ಪ್ರಿಯಕರನು ಖಳನಾಯಕನಾಗುತ್ತಿದ್ದಾನೆ. ಕೊಲೆ ಆರೋಪಿಯಾಗುತ್ತಾನೆ, ಅತ್ಯಾಚಾರಿ ಯಾಗುತ್ತಾನೆ ಸ್ತ್ರೀ ಸಹಜ ವಿಶ್ವಾಸಾರ್ಹತೆಯು ಇಲ್ಲಿ ನಾಪತ್ತೆ. ಹೆಣ್ಣಿನ ರಕ್ಷಣೆಗಾಗಿರುವ ಕೆಲವು ಕಾನೂನುಗಳನ್ನು ಆಕೆ ದುರುಪಯೋಗ ಪಡಿಸಿಕೊಳ್ಳುವ ಮೂಲಕ ಗಂಡನ್ನು ಕೇರಳಿಸುತ್ತಾನೆ. ಕೊನೆಗೆ ತನ್ನ ಸಮಾಧಿಗೆ ಅದನ್ನು ನಾಂದಿಯಾಗಿಸುತ್ತಾಳೆ. ಒಂದು ಕಾಲದಲ್ಲಿ ಮಹಿಳೆಯರು ಕಣ್ಣೆತ್ತಿಯೂ ನೋಡದಂತಹ ಭೂಗತ ಚಟುವಟಿಕೆ, ಮೋಸ, ವಂಚನೆ, ಭಯೋತ್ಪಾದನಾಕೃತ್ಯಗಳಲ್ಲಿಯೂ ಇಂದು ಆಕೆ ಕೈ ಜೋಡಿಸಿರುವುದು. ಆದ್ದರಿಂದಲೇ ವರ್ಷದಿಂದ ವರ್ಷಕ್ಕೆ ಮಹಿಳಾ ಅಗತ್ಯತೆ ಹೆಚ್ಚಾಗುತ್ತಿದೆ. ಮಹಿಳಾ ಖೈದಿಗಳು ಸಾಮಾನ್ಯವಾಗಿದ್ದಾರೆ. ಗಲ್ಲಿನ ಕುಣಿಕೆಗೆ ಕೊರಳೊಡ್ಡುವಂತಹ ಮಹಾ ಅಪರಾಧಗಳನ್ನು ಮಹಿಳೆಯರು ಮಾಡುತ್ತಾರೆಂದರೆ... ನಿಜಕ್ಕೂ ಆಶ್ಚರ್ಯವಾಗುತ್ತದೆ. ನಮ್ಮ ಮಹಿಳೆಯರು ಯಾಕೆ ಈ ರೀತಿ ಬದಲಾಗಿದ್ದಾರೆ? ಅವರನ್ನು ಹೀಗೆ ಬದಲಾಯಿಸದ ಶಕ್ತಿ ಯಾವುದು? ಈ ಕುರಿತಾದ ಚಿಂತನೆ ಅಗತ್ಯ.

ಮಹಿಳೆಯರಿಗೆ ಸ್ವಾತಂತ್ರ್ಯ ಅಗತ್ಯ, ಹಾಗೆಂದು ಸಿಕ್ಕಿರುವ ಸ್ವಾತಂತ್ರ್ಯವನ್ನು ವಿವೇಚನೆ ಮರೆತು ಅನುಭವಿಸಿದರೆ ಅವರು ಖಳನಾಯಕರಾಗಿ ಪರಿಚಯಿಸಲ್ಪಡುತ್ತಾರೆ. ಇಂದಿನ ಮಹಿಳೆಯು ಉನ್ನತ

ಶಿಕ್ಷಣವೂ ಸೇರಿಂದತೆ ಸಾಮಾನ್ಯವಾಗಿ ಸಮಾಜದ ಆಗುಹೋಗುಗಳ ಬಗ್ಗೆ ಚೆನ್ನಾಗಿ ತಿಳುವಳಿಕೆ ಹೊಂದಿರುತ್ತಾಳೆ. ಯಾವುದು ಸತ್ಯ, ಯಾವುದು ಮಿಥ್ಯ ಎಂಬುದನ್ನು ತಿಳಿದುಕೊಳ್ಳಲು ಸಮರ್ಥಳಿದ್ದಾಳೆ. ಆಧುನಿಕತೆ, ಸ್ವಾತಂತ್ರ್ಯ, ಸಮಾನತೆ ಎಂಬ ಮಾಯಾಮೃಗಕ್ಕೆ ತನ್ನ ಸ್ತ್ರೀ ಸಹಜ ಗುಣಗಳನ್ನು ಆಕೆ ಬಲಿ ಕೊಡಬಾರದು. ಹಾಗೆ ಬಲಿನೀಡಿದ್ದೆ ಇಂದು ಸಮಾಜದಲ್ಲಿ ಇವಳ ಸ್ಥಾನ-ಮಾನ ಕುಸಿಯಲು ಕಾರಣವಾಗಿವೆ.

ಪ್ರತಿಯೊಂದು ಚರ-ಸ್ಥಿರ ಸೊತ್ತುಗಳಿಗೂ, ಜೀವಿ-ನಿರ್ಜೀವಿಗಳಿಗೂ ತನ್ನದೇ ಆದ ಲಕ್ಷಣಗಳಿವೆ, ಸಾಮರ್ಥ್ಯಗಳಿವೆ, ವಿಶೇಷತೆಗಳಿವೆ, ಇತಿಮಿತಿಗಳಿವೆ, ಆಧುನಿಕ, ಸ್ವಾತಂತ್ರ್ಯ, ಸಮಾನತೆಗಳನ್ನು ಈ ಮಿತಿಗಳು ಹಾಗೂ ಹುಟ್ಟು ಸಹಜ ಗುಣಗಳನ್ನು ಅಡಿಪಾಯವಾಗಿಟ್ಟು ಬಳಸಿಕೊಂಡರೆ ನಮ್ಮ ಮಹಿಳೆಯರನ್ನು ಕಾಡುವ ಹಲವು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು. ಅತಿಯಾದರೆ "ಅಮೃತವೂ ವಿಷ" ಎಂಬ ಮಾತನ್ನು ನಮ್ಮ ಬುದ್ಧಿವಂತ ಮಹಿಳೆಯರಿಗೆ ತಿಳಿಸುವ ಅಗತ್ಯ ಇಲ್ಲ ಎಂದು ಕಾಣುತ್ತಿದೆ.

ಮಹಿಳಾ ಪರ ಸಂಘಟನೆಗಳು ಈ ನಿಟ್ಟಿನಲ್ಲಿ ಜವಾಬ್ದಾರಿಯುತ ಕೆಲಸಗಳನ್ನು ಮಾಡುವ ತುರ್ತು ಅಗತ್ಯವಿದೆ. ಮಹಿಳೆಯರಿಗೆ ಇನ್ನಷ್ಟು ಸವಲತ್ತುಗಳು ಬೇಕು ಎಂಬ ವಾದ. ಅದಕ್ಕಾಗಿ ಮಾಡುತ್ತಿರುವ ಹೋರಾಟಕ್ಕೆ ಸಮಾಜದ ಬೆಂಬಲ ಇದ್ದೆ ಇದೆ. ಆದರೆ ತಮಗೆ ಸಿಕ್ಕಿರುವ ಸವಲತ್ತುಗಳು, ಅನುಭವಿಸುತ್ತಿರುವ ಹಕ್ಕುಗಳನ್ನು ಹೇಗೆ ಸದುಪಯೋಗ ಪಡಿಸಿಕೊಳ್ಳಬೇಕು ಎಂಬ ನಿಟ್ಟಿನಲ್ಲಿ ಮಹಿಳಾ ಸಂಘಟನೆಗಳು ಚಿಂತಿಸಬೇಕು. ಮಹಿಳಾ ಸಮಾಜಕ್ಕೆ ಎದುರಾಗಿರುವ ಅಪಾಯದಲ್ಲಿ ಸ್ವತಃ ಮಹಿಳೆಯರ ತಪ್ಪುಗಳಿವೆಯೇ? ಇದ್ದರೆ ಅವುಗಳನ್ನು ಸರಿಪಡಿಸಲು ಯಾವ ಕ್ರಮ ಅಗತ್ಯ? ಎಂಬುದರ ಕುರಿತು ವಿಚಾರ ಮಂಥನಗಳು ನಡೆಯಬೇಕು. ಒಟ್ಟಿನಲ್ಲಿ ಮಹಿಳೆಯರ ಗೌರವಯುತ ಸ್ಥಾನಕ್ಕೆ ಇಂದು ಚ್ಯುತಿಯೆದುರಾಗುತ್ತಿರುವುದು ಅತಂಕಕಾರಿ ಬೆಳವಣಿಗೆ ಅದು ನಿವಾರಣೆಯಾಗಬೇಕು ಎಂಬುದು ಪ್ರಜ್ಞಾವಂತ ಹಾಗೂ ಸಭ್ಯ ಸಮಾಜದ ಬಯಕೆ.

ಸ್ತ್ರೀ ದೃಷ್ಟಿಯಲ್ಲಿ ಸಂಬಂಧಗಳು ಬರೀ ಸಂಬಂಧಗಳಲ್ಲ. ಅವು ಭಾವನೆ, ಕಲ್ಪನೆ, ಕನಸು, ಮನಸ್ಸು, ಮುನಿಸು ತುಂಬಿದ ವಾಸ್ತವಗಳು. ಭೂತವನ್ನು ಮೆಲುಕು ಹಾಕುವ ವರ್ತಮಾನದಲ್ಲಿರುವ ಭವಿಷ್ಯದ ಬೇರುಗಳು, ಬಿಳಲುಗಳು. ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿಯರಂಥ ಪ್ರಾಥಮಿಕ ಸಂಬಂಧಗಳಲ್ಲದೆ ತಾಯಿ ಮನೆಯ ಕಡೆ, ತಂದೆಯ ಕಡೆಯ ಸಂಬಂಧಿಕರು, ಮದುವೆಯಾದ ಪತಿ, ಅತ್ತೆ, ಮಾವ, ಭಾವ, ಮೈದುನ, ನಾದಿನಿಯರು, ಅವರ ಕುಟುಂಬ, ಇಷ್ಟೇ ಅಲ್ಲ.

ನೆರೆಹೊರೆಯವರು, ಸಹಪಾಠಿ, ಸಹೋದ್ಯೋಗಿಗಳು ಎಷ್ಟೊಂದು ಸಂಬಂಧಗಳು ಅವಳೊಡನಾಡಿಗಳು. ಉಳಿದೆಲ್ಲ ಬಂಧಗಳಿಗಿಂತ ವಿವಾಹ ಬಂಧನ, ಪತಿ ಮನೆಯೊಡನೆ ಅವಳ ಸಂಬಂಧ ಪ್ರಾಮುಖ್ಯ ಹಾಗೂ ಪ್ರಾಧಾನ್ಯಗಳಿಸಿಬಿಡುತ್ತದೆ. ತಾನು ಬೆಳೆದ ಪರಿಸರಕ್ಕಿಂತ ಭಿನ್ನವಾದ ಪತಿಯ ಮನೆಯ ಪರಿಸರ, ಸಂಪ್ರದಾಯ, ರೀತಿ ರಿವಾಜುಗಳಿಗೆ ಹೊಂದಿಕೊಳ್ಳುತ್ತಲೇ ಮನೆಯವರೆಲ್ಲರ ಪ್ರೀತಿ ಗಳಿಸಲು, ಆ ಮೂಲಕ ಪತಿಯ ಮನ ಗೆಲ್ಲಲು ಯತ್ನಿಸುವ ಪ್ರಬುದ್ಧೆ ಅವಳಿಗ, ತನ್ನ ತವರಿನಲ್ಲಿನ್ನು ಅವಳು ಎಲ್ಲರ ಮುದ್ದಿನ ಮಗಳು. ಅಷ್ಟೇನೂ ಆಳವಾಗಿ ಏನನ್ನು ಯೋಚಿಸದೆ ಯಾವ ಘನ ಜವಾಬ್ದಾರಿಯನ್ನು ಹೊರಲಾಗದ ಕೂಸು. ಆದರೆ ಇಲ್ಲಿ ಪತ್ನಿ, ಸೊಸೆ, ಅತ್ತಿಗೆ, ತಾಯಿ, ಹತ್ತು ಹಲವಾರು ಪಾತ್ರಗಳನ್ನು ಸಮರ್ಥವಾಗಿ ನಿಭಾಯಿಸಬೇಕಾದ ಅನಿವಾರ್ಯ ಜವಾಬ್ದಾರಿ ಅತ್ತ ತವರನ್ನು ಮರೆಯಲಾಗದ ಇತ್ತ ತನ್ನ ಪತಿಯ ಮನೆಯನ್ನು ಬಿಟ್ಟುಕೊಡಲಾಗದ ಉಭಯ ಜೀವಿ. ಎರಡೂ ಮನೆಯ ನೆಮ್ಮದಿಗಾಗಿ ಅಲ್ಲಿಂದ ದೊರೆಯುವ ಪ್ರೀತಿಗಾಗಿ ಹಂಬಲಿಸುವ ಭಾವಜೀವಿ. ಮದುವೆಯಾದ ತಕ್ಷಣ ಹೆಣ್ಣಿನ ಪ್ರೀತಿ ಪಾತ್ರರ ಪಟ್ಟಿಯಲ್ಲಿ ಪತಿ ಮೊದಲ ಸ್ಥಾನಕ್ಕೇರುತ್ತಾನೆ. ಪತಿಯ ಪ್ರೀತಿಯೇ ಪತ್ನಿಯ ಭವಿಷ್ಯ ಮತ್ತು ಭದ್ರತೆ ಎಂಬ 'ಬುದ್ಧಿಮಾತು'ಗಳ ಹೊರೆ ಹೊತ್ತುಕೊಂಡೆ ಆಕೆ ಅತ್ತೆ ಮನೆ ಪ್ರವೇಶಿಸುತ್ತಾಳೆ. ಅಲ್ಲಿಂದ ಪತಿಯ ಪ್ರೀತಿ ಗಳಿಸುವ, ಗಳಿಸಿದ ಮೇಲೆ ಉಳಿಸುವ ಪತಿವ್ರತೆಯ ಪಾತ್ರ ನಿರ್ವಹಣೆಯ ಒದ್ದಾಟ ಪ್ರಾರಂಭವಾಗುತ್ತದೆ.

ಪತಿವ್ರತೆಯ ಪರಿಕಲ್ಪನೆಯಲ್ಲಿರುವುದಾದರೂ ಏನು ಪತಿಯ ನೆರಳಾಗಿ ಅವನ ಯಶಸ್ಸಿನಲ್ಲೆ ತನ್ನ ಯಶಸ್ಸು ಕಾಣಬೇಕು, ಪತ್ನಿ. ಪತಿ ಹೇಗೆ ಇದ್ದರೂ ತನ್ನ ಶರಣಾಗತ ಭಾವದಿಂದ ಪತಿಯೆಡೆಗಿನ ನಿಷ್ಠೆ, ಪ್ರೇಮದಿಂದ ಅವನ ಮನ ಗೆದ್ದು ಆ ಮೂಲಕ ಕುಟುಂಬದ ಸಾಮರಸ್ಯ ಕಾಪಾಡಿಕೊಳ್ಳಬೇಕು. ಪತಿವ್ರತ ಅಥವಾ ಸತಿಧರ್ಮ ಹೇಳುವುದು ಇದನ್ನೇ ಅಲ್ಲವೇ? ತನ್ನ ಬದುಕಿಗಾಗಿ ಪೂರ್ಣವಾಗಿ ಪತಿಯನ್ನೆ ಅವಲಂಬಿಸಿರಬೇಕಾದ ಪರಾವಲಂಬಿ ಸ್ಥಿತಿಯಲ್ಲಿ, ಬಹುಶಃ ಮಹಿಳೆ ಹೀಗಿದ್ದರೆ ಮಾತ್ರ ಕುಟುಂಬ ಜೀವನವನ್ನು ಉಳಿಸಿಕೊಂಡು ಹೋಗಲು ಸಾಧ್ಯ ಎಂದು ಅಂದಿನವರಿಗೆ ಅನ್ನಿಸಿರಬಹುದು. ಅದಕ್ಕೇ ಮಹಾಸತಿ ಅನಸೂಯೆ, ಸುಮತಿ, ರೇಣುಕ, ಮಂಡೋದರಿ, ಸೀತೆ, ಸತ್ಯವಾನನ ಸಾವಿತ್ರಿಯರ ಚಾರಿತ್ರ್ಯವನ್ನು ಅವಳೆದುರು ಇರಿಸಿ ಈ ಚೌಕಟ್ಟಿನಲ್ಲಿ ಅವಳ ವ್ಯಕ್ತಿತ್ವ ರೂಪಿಸಲು ಯತ್ನಗಳು ನಡೆದಿವೆ. ಪತಿ ದಾರಿ ತಪ್ಪಿದರೂ ಪತ್ನಿ ಅವನನ್ನು ಸರಿಯಾದ ದಾರಿಗೆ ತಂದು ಮದುವೆಯನ್ನು, ಕುಟುಂಬವನ್ನು ಉಳಿಸಿಕೊಳ್ಳಬೇಕು. ಪರಪುರುಷನನ್ನು ನೋಡಕೂಡದು, ಮನದಲ್ಲಿ ಕಲ್ಪಿಸಕೂಡದು ಎಂಬೆಲ್ಲ ಪತಿವ್ರತಚಾರಣೆಯ

ನಿಯಮಗಳು. ಹಾಗೇನಾದರೂ ಆಗಿ ಬಿಟ್ಟರೆ ಅವಳ ವ್ರತ ಭಂಗವಾಗಿ ಪತಿಯ ಕೋಪಕ್ಕೆ ಸಮಾಜದ ಅವಗಣನೆಗೆ ಪಾತ್ರಳಾಗುವಂತೆ ಮಾಡಿಬಿಡುತ್ತವೆ. ಇದು ಎಲ್ಲ ವ್ರತ... ಧರ್ಮಗಳ ಒಟ್ಟು ಸಂದೇಶ. ವ್ರತವೆಂದು ನಿಯಮಕ್ಕೊಳಪಡಿಸಿಬಿಟ್ಟರಲ್ಲ ಅದಕ್ಕೇ ಏನೋ ಅದನ್ನು ಮೀರುವ ಟೆಂಡೆನ್ಸಿ ಬೆಳೆದು ಬಿಡುವುದು ಕೆಲವು ಹೆಣ್ಣು ಮಕ್ಕಳಲ್ಲಿ.

ಆದರೆ ಈ 'ವ್ರತ-ಧರ್ಮ'ಗಳು ಹೆಣ್ಣಿಗೆ ಮಾತ್ರ ಏಕೆ ಸೀಮಿತವಾಗಬೇಕು. ಪತ್ನಿವ್ರತದ ನೀತಿ ಸಂಹಿತೆ ಏಕೆ ರೂಪುಗೊಳ್ಳಲಿಲ್ಲ. ಹೀಗೆಂದ ಮಾತ್ರಕ್ಕೆ ಇದು ಸ್ತ್ರೀವಾದ ಆಗಬೇಕಾಗಿಲ್ಲ. ದಾರಿತಪ್ಪುತ್ತಿರುವ ಮನವನ್ನು ಸರಿ ದಾರಿಗೆ ತಂದು ಕುಟುಂಬವನ್ನು ಕಾಪಾಡಿಕೊಳ್ಳುವುದು ಪತಿಯ ಜವಾಬ್ದಾರಿಯೂ ಹೌದಲ್ಲವೇ? ಆದರೆ ಹಾಗೆ ನಡೆದ ಒಂದೇ ಒಂದು ಘಟನೆಯ ಉದಾ ಹರಣೆಯೂ ಕಾಣುವುದಿಲ್ಲ. ಇರಬಹುದೇನೋ ಎಲ್ಲೋ ಒಂದೆರಡು ಕೇಸುಗಳು, ಆದರೆ ಅವು ಎಂದೂ ಪತಿವ್ರತೆ, ಮಹಾಸತಿಯರ ಮಾದರಿಯಂತೆ ಆದರ್ಶಕತೆಗಳಿಗೆ ಇಲ್ವೇ ಇಂತಹ ವ್ರತ, ಧರ್ಮ, ಕಟ್ಟುಕಟ್ಟಳೆಗಳು ಕಲ್ಲುಬಂಡೆಗಳನ್ನು ಹೆಣ್ಣಿನ ಸೂಕ್ಷ್ಮ ಮನಸ್ಸಿನ ಮೇಲೆ ಹೇರಿರುವುದ ರಿಂದಲೇ ಅವಳೊಳಗಿಂದ ಚಿಮ್ಮಬೇಕಾದ ಪ್ರೀತಿಯ ಬುಗ್ಗೆ ನಿಧಾನವಾಗಿ ಬತ್ತಿಹೋಗಿ ಅವಳು ಏಕಾಂಗಿಯಾಗುತ್ತಾಳೆ. ಏಕಾಂತವನ್ನು ಪ್ರೀತಿಸ ತೊಡಗುತ್ತಾಳೆ. ಪ್ರೀತಿಯ ವಿಷಯದಲ್ಲಿ ಗಂಡಿಗಿಂತ ಹೆಣ್ಣು ಭಿನ್ನ, ಪ್ರೀತಿ ಅವಳ ವ್ಯಕ್ತಿತ್ವದ ಬಹುಮುಖ್ಯ ಭಾಗ. ಪ್ರೀತಿ ನೀಡದಿದ್ದರೆ ಅವಳ ಬದುಕು ಹೇಗೆ ಪರಿಪೂರ್ಣವೆನಿಸುವುದಿಲ್ಲವೋ, ಹಾಗೆ ಪ್ರೀತಿ ಪಡೆಯದೇ ಇದ್ದರೂ ಅವಳ ಬದುಕು ಅಪೂರ್ಣ ಪ್ರೀತಿ ಕೊಡುತ್ತಾಳೆ. ಅದಕ್ಕಾಗಿಯೇ ಪ್ರೀತಿ ಕೇಳುತ್ತಾಳೆ. ಹಾಗೆ ನೋಡಿದರೆ ಹೆಣ್ಣನ್ನು ಹೆಣ್ಣೆ ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲಳು. ಸ್ನೇಹಿತೆಯರೆ ಅವಳಿಗೆ ಉತ್ತಮ ಸಾಂಗತ್ಯ, ಸಂತೋಷ ನೀಡಬಲ್ಲರು. ತಾಯಿ, ಅಕ್ಕ, ತಂಗಿ, ಅತ್ತಿಗೆ, ಸ್ನೇಹಿತರು, ಸ್ತ್ರೀ ಸಹೋದ್ಯೋಗಿಗಳು ಅವಳಿಗೆ ಹೆಚ್ಚು ಆಪ್ತರು. ಪತಿಯಲ್ಲದೆ ಅವಳಿಗೆ ಮನೆಯ ಎಲ್ಲರ ಪ್ರೀತಿಯೂ ಬೇಕು. ತಂದೆ ತಾಯಿ, ಅತ್ತೆಮಾವ, ಸಂಬಂಧಿಕರು, ಸಂಬಂಧಗಳು ಇತರರು... ಅವಳ ಭಾವನಾತ್ಮಕ ಅಗತ್ಯಗಳು ಹೇಗೋ ಎಲ್ಲಿಂದಲೋ ಪೂರೈಸುತ್ತಿರುತ್ತವೆ.

ಮಹಿಳೆಯ ಸಂದರ್ಭದಲ್ಲಿ ಅತ್ಯಂತ ಭಾವನಾತ್ಮಕ ಹಾಗೂ ಸಾಮಾಜಿಕ ವಾಸ್ತವವಾಗಿರುವ 'ತವರು' ಎಂಬ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು ಆಧುನಿಕ ಕುಟುಂಬಗಳಲ್ಲಿನ ಸ್ತ್ರೀಯು ತವರಿನೊಂದಿಗೆ ಹೊಂದಿರುವ ಸಂಬಂಧದ ಸ್ವರೂಪವನ್ನು ವಿಶ್ಲೇಷಿಸುವ ಉದ್ದೇಶದಿಂದ ಈ

ಅಧ್ಯಯನದ ಭಾಗವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಕೇವಲ ೧೦೦ ಕುಟುಂಬಗಳನ್ನು ಮಾತ್ರ ಸೀಮಿತವಾಗಿಟ್ಟುಕೊಂಡು ಸಂದರ್ಶನವನ್ನು ಕೈಗೊಳ್ಳಲಾಗಿದೆ. ಆ ಕ್ಷೇತ್ರಕಾರ್ಯದ ವಿವರಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

**ಗುರುತಿಸಿಕೊಳ್ಳಲಾದ ಪ್ರಶ್ನೆಗಳು**

೧. ತವರಿಗೆ ಎಷ್ಟು ಸಲ ಭೇಟಿ ನೀಡುತ್ತೀರಿ? ಆಗ ನಿಮ್ಮ ಮನೆಯವರು ನಿಮ್ಮೊಡನೆ ಬರುವರೆ?

೨. ತವರಿನವರು ಸಂಕಷ್ಟದಲ್ಲಿದ್ದರೇ ನಿಮ್ಮ ಜವಾಬ್ದಾರಿ ಏನೆಂದು ಭಾವಿಸುವಿರಿ?

೩. ತವರಿನಿಂದ ಸಹಾಯ ಪಡೆಯುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೪. ಹೆಂಡತಿಯ ವಾಸಸ್ಥಾನದಲ್ಲಿ ಗಂಡ ಇರುವುದರ ಬಗ್ಗೆ ನಿಮ್ಮ ಅಭಿಪ್ರಾಯ?

೫. ತವರು ಮನೆಗೆ ನೀವು ಸಾಧಾರಣವಾಗಿ ಏನನ್ನು ಉಡುಗೊರೆಯಾಗಿ ಕೊಡುತ್ತೀರಿ? ಇದನ್ನು ಕೊಡುವುದರ ಬಗ್ಗೆ ನಿಮ್ಮ ಮನೆಯವರ ಪ್ರತಿಕ್ರಿಯೆ ಏನು?

೬. ತವರು ಮನೆಯವರು ನಿಮಗೆ ಏನನ್ನು ಉಡುಗೊರೆಯಾಗಿ ಕೊಡುತ್ತಾರೆ? ಇದರ ಬಗ್ಗೆ ನಿಮ್ಮ ಮನೆಯವರ ಪ್ರತಿಕ್ರಿಯೆ ಏನು?




ಮೇಲ್ಕಾಣಿಸಿದ ೪.೧ರ ವೃತ್ತಚಿತ್ರದಿಂದ ಕಾಣಸಿಗುವ ಅಂಶ ತವರಿಗೆ ಎಷ್ಟು ಸಲ ಭೇಟಿ ನೀಡುತ್ತೀರಿ ಎಂದು ಕುಟುಂಬದ ಮಹಿಳೆಯರಲ್ಲಿ ಪ್ರಶ್ನಿಸಿದಾಗ ಶೇ. ೫೪ರಷ್ಟು ಕುಟುಂಬದ ಮಹಿಳೆಯರು ಅವಶ್ಯವಿದ್ದಾಗ ಹೋಗುತ್ತೇವೆ ಎಂಬ ಅಭಿಪ್ರಾಯವನ್ನು ನೀಡುತ್ತಾರೆ. ಶೇ. ೪೦ ರಷ್ಟು ಕುಟುಂಬದ ಸ್ತ್ರೀಯರು ವರ್ಷದಲ್ಲಿ ೪ ರಿಂದ ೫ ಸಲ ಹೋಗಿಬರುವವರಾಗಿರುತ್ತೇವೆ




ಎನ್ನುವವರಾದರೆ, ಶೇ. ೬ ರಷ್ಟು ಕುಟುಂಬದ ಮಹಿಳೆಯರು ತವರಿಗೆ ಹೋಗುವ ಸಮಯದಲ್ಲಿ ಹಾಗೂ ಕರೆತರುವ ಸಮಯದಲ್ಲಿ ತಮ್ಮ ಗಂಡ ಜೊತೆಯಲ್ಲಿ ಬರುವುದಿಲ್ಲವೆಂದು ದೂಷಿಸುತ್ತಾರೆ. ಮೇಲ್ಕಂಡ ಈ ವೃತ್ತಚಿತ್ರದಲ್ಲಿ ತೋರಿಸಿರುವಂತೆ ಆಧುನಿಕ ಕುಟುಂಬಗಳಲ್ಲಿ ಮಹಿಳೆಯು ತನ್ನ ತವರಿಗೆ ಎಷ್ಟು ಸಲ ಭೇಟಿ ನೀಡುತ್ತಾಳೆ ಎಂಬ ಪ್ರಶ್ನೆ ಕೇಳಿರುವುದರ ಉದ್ದೇಶ ಬದಲಾವಣೆಯ ಸಂದರ್ಭದಲ್ಲಿ ಅವಳ ಜೀವನ ಸ್ಥಿತಿ ತಿಳಿದು ಕೊಳ್ಳುವುದಕ್ಕಾಗಿ ಕೇಳಲಾಯಿತು. ಅವರುಗಳು ನೀಡಿರುವ ಮಾಹಿತಿ ಈ ಮೇಲಿನ ಚಿತ್ರದಲ್ಲಿ ಕಾಣಬಹುದಾಗಿದೆ. ಮಹಿಳೆಗೆ ತವರು ಮನೆಯನ್ನುವುದು ಅನ್ಯವಾಗಿಯೇ ಉಳಿದಿದೆ. ಹೆಚ್ಚಿನ ರೀತಿಯ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದರೆ ಕೇವಲ ಹಬ್ಬ ಹರಿದಿನಗಳಲ್ಲಿ ಹಾಗೂ ಗಂಡನ ಮನೆಯವರು ಹಣ ತರಲು ಹೇಳಿದಾಗ, ಬಾಣಂತನಕ್ಕೆ ಇಲ್ಲವೇ ಇವಳು ಅನಾರೋಗ್ಯಕ್ಕೆ ತುತ್ತಾದ ಸಂದರ್ಭಗಳಲ್ಲಿ ಮಾತ್ರ ಹೋಗುತ್ತಿದ್ದಾರೆ. ಮಹಿಳೆಯು ಈ ರೀತಿ ಹೇಳಿಕೆ ನೀಡಲು ಕಾರಣ ಮೂಲದಿಂದಲೂ ಅವಳಿಗೆ ಬೆಳೆಸಿರುವ ಸಂಪ್ರದಾಯಕ್ಕೆ ಒಗ್ಗಿಕೊಂಡಿರುತ್ತಾಳೆ. ಗಂಡ-ಹೆಂಡತಿ ಇಬ್ಬರೂ ದುಡಿಯುವುದರಿಂದ ಕೇವಲ ರಜೆಯ ದಿನಗಳಲ್ಲಿ ಮಾತ್ರ ಹೋಗಿ ಬರಬೇಕು. ಅದು ಅಲ್ಲದೇ ಜಾಸ್ತಿ ದಿನಗಳು ಅಲ್ಲಿ ಇರಲು ಇಷ್ಟಪಡುವುದಿಲ್ಲ. ಗಂಡನ ಊಟಕ್ಕೆ ತೊಂದರೆಯಾಗಬಹುದೆಂಬ ಅಭಿಪ್ರಾಯಕ್ಕೆ ಬರುತ್ತಾಳೆ. ಆಧುನಿಕ ಸಂದರ್ಭದಲ್ಲಿ ಅವಳಿಗೆ ಅರಿವಿನ ಜ್ಞಾನವಿದ್ದರೂ ತವರು ಮನೆಗೆ ಭೇಟಿ ನೀಡುವಲ್ಲಿ ಇಂದಿಗೂ ಸ್ವಾತಂತ್ರ್ಯ ಆಯ್ಕೆ ಪಡೆದುಕೊಂಡಿಲ್ಲ. ಗಂಡನ ಅನುಮತಿಯನ್ನು ಪಡೆದೇ ಹೋಗಬೇಕು. ಬದಲಾವಣೆ ಸ್ವಲ್ಪಮಟ್ಟಿಗೆ ಕಂಡುಬಂದರು, ಹಳೆಯ ಸಂಪ್ರದಾಯದೊಂದಿಗೆ ಇಂದಿನ ಅವಳ ಜೀವನ ಮುಂದುವರೆದು ಕೊಂಡು ಹೋಗುತ್ತಿದ್ದಾರೆ.

ಪ್ರಸ್ತುತ ಕುಟುಂಬಗಳಲ್ಲಿ ಮಹಿಳೆಯು ತನ್ನ ತವರು ಮನೆಗೆ ಭೇಟಿ ನೀಡಬೇಕಾದ ಸಂದರ್ಭ ದಲ್ಲಿ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗಿ ಬಿಟ್ಟುಬರುವರು. ಪುನಃ ಮತ್ತೆ ವಾಪಸ್ಸು ಬರುವಾಗ ಕರೆದುಕೊಂಡು ಬರುತ್ತಾರೆ. ಈ ಪ್ರಶ್ನೆ ಕೇಳುವುದರ ಉದ್ದೇಶವೆಂದರೆ ಬದಲಾವಣೆಯ ಸಂದರ್ಭದಲ್ಲಿಯೂ ಗಂಡ ಎನಿಸಿಕೊಂಡರೂ ಮಹಿಳೆಗೆ ತವರು ಮನೆಗೆ ಕಳುಹಿಸುವುದರ ಕುರಿತು ತಿಳಿದುಕೊಳ್ಳುವುದಾಗಿದೆ. ಮಹಿಳೆಯರು ಹೇಳಿರುವ ಅಭಿಪ್ರಾಯಗಳನ್ನು ಕೇಳಿದರೆ ಅವರು ಎಲ್ಲರೂ ಗಂಡ ಜೊತೆಯಲ್ಲಿ ಬರುತ್ತಾರೆ. ಆದರೆ ತಮ್ಮ ಮನೆಯವರೊಂದಿಗೆ ಜಾಸ್ತಿ ಬೇರೆಯುವುದಿಲ್ಲ. ಇನ್ನೂ ಕೆಲವು ಗಂಡ ಮಕ್ಕಳು ತಮ್ಮ ಹೆಂಡತಿಯ ಮನೆಯವರನ್ನು ವಿನಾ ಕಾರಣ ದೂಷಿಸುತ್ತಾರೆ. ಇದಕ್ಕೆಲ್ಲ ಕಾರಣ ಮದುವೆ ಸಂದರ್ಭದಲ್ಲಿ ಇವರು ಕೇಳಿದಷ್ಟು ಹಣ ನೀಡದಿದ್ದ ಸಂದರ್ಭದಲ್ಲಿ

ಅಥವಾ ತಮಗೆ ಸರಿಯಾದ ಮಾರ್ಯದೆ ಕೊಡುವುದಿಲ್ಲವೆಂದೂ ಹೆಂಡತಿಯನ್ನು ತವರು ಮನೆಗೆ ಹೆಚ್ಚಾಗಿ ಕಳುಹಿಸಲು ಇಷ್ಟಪಡುವುದಿಲ್ಲ. ಗಂಡ ಹೇಳಿದ ದಿನ ಹೆಂಡತಿ ಮನೆಗೆ ವಾಪಸ್ಸು ಬರುವುದು ತಡವಾದರೆ ಕದನ ಪ್ರಾರಂಭಿಸುತ್ತಾರೆ. ಅಲ್ಲಿಯೇ ಉಳಿದುಬಿಡು ಇಲ್ಲಿಗೆ ಏಕೆ ಬಂದೇ ಎಂದೆಲ್ಲಾ ಹೇಳುತ್ತಾನೆ.




೪.೨ರ ವೃತ್ತಚಿತ್ರವನ್ನು ಗಮನಿಸಿದಾಗ ತವರಿನವರ ಕುರಿತು ನಿಮ್ಮ ಜವಾಬ್ದಾರಿ ಏನಾಗಿರುತ್ತದೆ ಎಂದು ಕುಟುಂಬದ ಮಹಿಳೆಯರಲ್ಲಿ ಪ್ರಶ್ನಿಸಿದಾಗ ಶೇ. ೬೭ ರಷ್ಟು ಕುಟುಂಬದ ಸ್ತ್ರೀಯರು ಸಹೋದರರೇ ನೋಡಿಕೊಳ್ಳಬೇಕಾಗುತ್ತದೆ ಎನ್ನುವ ಅಭಿಪ್ರಾಯವನ್ನು ತಿಳಿಸುತ್ತಾರೆ. ಶೇ. ೨೫ ರಷ್ಟು ಕುಟುಂಬದ ಮಹಿಳೆಯರು ಎಲ್ಲರೂ ನೋಡಿಕೊಳ್ಳಬೇಕು ಎಂದಾದರೆ, ಶೇ. ೮ ರಷ್ಟು ಕುಟುಂಬದ ಹೆಣ್ಣು ಮಕ್ಕಳು ಅನುಕೂಲಕ್ಕೆ ತಕ್ಕಂತೆ ಕರೆಯಿಸಿಕೊಳ್ಳುತ್ತಾರೆ ಎಂಬುದನ್ನು ವ್ಯಕ್ತಪಡಿಸುತ್ತಾರೆ. ಪ್ರಸ್ತುತ ಕುಟುಂಬಗಳಲ್ಲಿ ಮಹಿಳೆಯ ತಂದೆ-ತಾಯಿಯರ ಆರೋಗ್ಯ ಸರಿಯಿಲ್ಲದಿದ್ದ ಸಂದರ್ಭದಲ್ಲಿ ಇವಳ ಜವಾಬ್ದಾರಿಯನ್ನು ಕುರಿತು ತಿಳಿದುಕೊಳ್ಳುವುದಾಗಿದೆ. ಇಂದಿನ ದಿನಗಳಲ್ಲಿಯೂ ಮಹಿಳೆ ತನ್ನ ಸಹೋದರರೇ ಅವರನ್ನು ನೋಡಿಕೊಳ್ಳಲಿ ತಾವು ಹೆಣ್ಣು ಮಕ್ಕಳು ಬೇರೆಯವರ ಮನೆಗೆ ನಡೆಯಲು ಹೋದವಳು. ಈ ಮನೆಯಲ್ಲಿ ತನ್ನ ಅಧಿಕಾರ ಏನು ನಡೆಯುವುದಿಲ್ಲ ಎಂಬ ಅಭಿಪ್ರಾಯಕ್ಕೆ ಬರುತ್ತಾರೆ. ಇವಳ ಆರೋಗ್ಯ ಸರಿಯಿಲ್ಲದಿದ್ದ ಸಂದರ್ಭದಲ್ಲಿ ಅವರು ಬಂದು ಇವಳಿಗೆ ಸಹಾಯ ಮಾಡಿರುತ್ತಾರೆ. ಆದರೆ ಅವರ ಅನಾರೋಗ್ಯದ ಸ್ಥಿತಿಯಲ್ಲಿ ಇವಳು ಹೋಗಿ ಸಹಾಯ ಮಾಡಲು ಈ ಪುರುಷ ಪ್ರಧಾನ ಸಮಾಜ ಒಪ್ಪಿಗೆ ನೀಡುವುದಿಲ್ಲ. ಕೆಲವು ಜನರ ಹೇಳಿಕೆ ಗಮನಿಸಿದರೆ ಇವರು ಎಲ್ಲರ ಜವಾಬ್ದಾರಿ ಅಷ್ಟೇ ಹಾಗಾಗಿ ತಮ್ಮ ಅನೂಕೂಲಕ್ಕೆ ತಕ್ಕಂತೆ ಕರೆಸಿಕೊಳ್ಳುವುದಗಾಗಿ ತಿಳಿಸಿದ್ದಾರೆ. ಇವರೆಲ್ಲರೂ ಅರಿವಿನ ಜ್ಞಾನ ಪಡೆದುಕೊಂಡಿದವ

ರಾಗಿದ್ದಾರೆ. ಬದಲಾವಣೆ ಸ್ವಲ್ಪಮಟ್ಟಿಗೆ ಕಂಡರೂ ಹಳೆಯ ಸಂಪ್ರದಾಯಗಳನ್ನು ಮುಂದುವರೆಸಿ ಕೊಂಡು ಹೋಗುತ್ತಿರುವುದು ಕಾಣಬಹುದಾಗಿದೆ.




ಮೇಲಿನ ೪.೩ರ ವೃತ್ತಚಿತ್ರದಲ್ಲಿ ತೋರಿಸಿರುವಂತೆ ಮಹಿಳೆಯು ತನ್ನ ತವರು ಮನೆಯಿಂದ ಸಹಾಯ ಪಡೆಯುವುದರ ಕುರಿತು ಅಭಿಪ್ರಾಯವನ್ನು ಪ್ರಶ್ನಿಸಿದಾಗ ಶೇ. ೪೭ರಷ್ಟು ಕುಟುಂಬದ ಮಹಿಳೆಯರು ಅವಶ್ಯವಿದ್ದಾಗ ಸಹಾಯ ಪಡೆಯುತ್ತೇವೆ ಎಂದಾದರೆ ಶೇ. ೩೬ ರಷ್ಟು ಕುಟುಂಬದ ಸ್ತ್ರೀಯರು ಯಾವುದೇ ರೀತಿಯ ಸಹಾಯ ಪಡೆದೆ ಇಲ್ಲಾ ಎನ್ನುವವರಾಗಿದ್ದಾರೆ. ಶೇ. ೧೭ರಷ್ಟು ಕುಟುಂಬದವರು ತವರು ಮನೆಯಿಂದ ಸಹಾಯ ಪಡೆಯುವುದು ಒಳ್ಳೆಯದಲ್ಲ ಎಂಬ ಅಭಿಪ್ರಾಯ ವನ್ನು ವ್ಯಕ್ತಪಡಿಸುತ್ತಾರೆ. ಈ ಪ್ರಶ್ನೆಯನ್ನು ಕೇಳಿದುದ್ದರ ಉದ್ದೇಶವೆಂದರೆ ವಿವಾಹಗಿಂತಲೂ ಮುಂಚೆ ಇವರ ಶಿಕ್ಷಣ, ಉದ್ಯೋಗ ಎಲ್ಲವೂ ದೊರೆಯುವವರೆಗೆ ತವರು ಮನೆಯವರು ನೋಡಿ ಕೊಂಡಿರುತ್ತಾರೆ. ಆದರೆ ಗಂಡನ ಮನೆ ಸೇರಿದ ತಕ್ಷಣ ಮಹಿಳೆ ತನ್ನ ಬದುಕಿನ ರೀತಿಯನ್ನೇ ಬದಲಾಯಿಸಿಕೊಳ್ಳುತ್ತಾಳೆ. ೧೦೦ ಜನರ ಹೇಳಿಕೆಯಲ್ಲಿ ಶೇ. ೫೩ ರಷ್ಟು ಜನರ ಹೇಳಿಕೆಯೆಂದರೆ ತವರಿನಿಂದ ತಾವು ಏನು ಸಹಾಯವೇ ಪಡೆದಿಲ್ಲ, ಪಡೆಯಬಾರದು, ಪಡೆಯುವುದು ಒಳ್ಳೆಯದಲ್ಲ ಎಂದೆಲ್ಲ ಹೇಳುತ್ತಾರೆ. ಇವರು ಸಂಪೂರ್ಣ ಪುರುಷ ಪ್ರಧಾನ ಸಮಾಜಕ್ಕೆ ಒಗ್ಗಿಕೊಂಡಿರುತ್ತಾರೆ. ಬಾಣಂತನಕ್ಕೆ ತವರು ಮನೆಗೆ ಹೋಗುತ್ತಾರೆ. ಹಬ್ಬ ಹರಿದಿನಗಳಲ್ಲಿ ಹೋಗಿ ಒಡವೆಗಳನ್ನು ತರುತ್ತಾರೆ. ತಮ್ಮ ಮಕ್ಕಳ ಪಾಲನೆ ಪೋಷಣೆ ಸಂದರ್ಭದಲ್ಲಿ ಹಾಗೂ ಇವರು ಅನಾರೋಗ್ಯಕ್ಕೆ ತುತ್ತಾದಾಗ ಅವರ ಸಹಾಯ ಪಡೆಯುತ್ತಾರೆ. ಹೀಗೆ ಸಹಾಯ ಪಡೆದರೂ ಸಹ ಅದನ್ನು ಸಹಾಯವೆಂದು ಪರಿಗಣಿಸದೆ ಅವರೇನು ಉಪಕಾರಕ್ಕೆ ಮಾಡಿದ್ದಾರೆ. ಮಗಳಿಗೋಸ್ಕರ ಇಷ್ಟು ಮಾಡದಿದ್ದರೆ ಹೇಗೆ ಎಂದೆಲ್ಲ ಭಾವಿಸಿಕೊಂಡಿರುತ್ತಾರೆ. ಗಂಡನ ಮನೆಯ ಮೇಲೆ ಇದಷ್ಟು ಪ್ರೀತಿ

ತವರು ಮನೆಯ ಮೇಲೆ ತೋರುವುದಿಲ್ಲ. ಕಾರಣ ಮೂಲದಿಂದಲೂ ಈ ಸಮಾಜ ಅವರನ್ನು ಬೆಳೆಸಿರುವ ರೀತಿಯಾಗಿದೆ. ತಿಳುವಳಿಕೆ ಇದೆ. ಆದರೂ ಅದನ್ನು ಸರಳವಾಗಿ ಒಪ್ಪಿಕೊಳ್ಳಲು ನಿರಾಕರಿಸುತ್ತಾರೆ.




ಮೇಲ್ಕಂಡ ೪.೪ರ ವೃತ್ತಚಿತ್ರದಲ್ಲಿ ಶೇಕಡಾವಾರು ತೋರಿಸಿರುವಂತೆ ಹೆಂಡತಿಯ ವಾಸಸ್ಥಾನ ದಲ್ಲಿನ ಗಂಡ ಇರುವುದರ ಬಗ್ಗೆ ನಿಮ್ಮ ಅಭಿಪ್ರಾಯ ಏನಾಗಿರುತ್ತದೆ ಎಂಬ ಪ್ರಶ್ನೆಗೆ ಸಂದರ್ಶನ ದಲ್ಲಿ ನೀಡಿದ ಉತ್ತರದಲ್ಲಿ ಆಧುನಿಕ ಕುಟುಂಬಗಳಲ್ಲಿ ಹೆಂಡತಿಯ ಮನೆಯಲ್ಲಿ ಗಂಡನಿರುವ ಪ್ರಶ್ನೆಯ ಉದ್ದೇಶ, ಮನೆಯ ಅಳಿಯನಾಗಿ ಹಿಂದೆಯು ಇರುತ್ತಿದ್ದರೂ ಈಗಲೂ ಇರುತ್ತಾರೆಯೇ? ಎಂದು ತಿಳಿದು ಕೊಳ್ಳುವುದಾಗಿದೆ. ಇಲ್ಲಿ ಸಂದರ್ಶನದ ಮಾಹಿತಿಯನ್ನು ನೋಡಿದರೆ ಶೇ. ೪೧ ರಷ್ಟು ಹೆಚ್ಚಿನ ರೀತಿಯ ಉತ್ತರ ಇರಬೇಕು ಎಂಬುದಾಗಿದೆ ಹಾಗೂ ಶೇ. ೨೯ ರಷ್ಟು ಇದ್ದರೆ ಏನು ತಪ್ಪಿಲ್ಲ ಎನ್ನುವುದಾಗಿದ್ದು, ಶೇ. ೨೨ ರಷ್ಟು ಗಂಡ ಎಲ್ಲಿ ಅಲ್ಲಿ ಹೆಂಡತಿ ಇರಬೇಕೆಂದಾದರೆ, ಶೇ. ೮ ರಷ್ಟು ಕುಟುಂಬದ ಸ್ತ್ರೀಯರು ಗಂಡನ ಮನೆಯಲ್ಲಿರುವುದೇ ಸೂಕ್ತವೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಒಟ್ಟಾರೆಯಾಗಿ ಶೇ. ೩೦ ರಷ್ಟು ಕುಟುಂಬದ ಮಹಿಳೆಯರು ಗಂಡನು ಹೆಂಡತಿಯ ಮನೆಯಲ್ಲಿರುವುದು ಹೆಚ್ಚಿನ ಸೂಕ್ತವಲ್ಲವೆಂಬದನ್ನು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಹೆಂಡತಿಯ ಮನೆಯವರು ಮದುವೆಗೆ ಮುಂಚೆ ಅಳಿಯ ಎನಿಸಿಕೊಂಡ ವ್ಯಕ್ತಿಗೆ ಉದ್ಯೋಗ ಇರದಿದ್ದರೆ, ಉದ್ಯೋಗ ಸಿಗುವವರೆಗೂ ತಮ್ಮ ಮನೆಯಲ್ಲಿ ಇರಲೆಂದು ಬಯಸುತ್ತಾರೆ. ಕೆಲವೊಬ್ಬರೂ ತಾವೇ ಉದ್ಯೋಗಕ್ಕೆ ಹಚ್ಚುವ ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ಇನ್ನೂ ಕೆಲವರು ತಮಗೆ ಗಂಡು ಸಂತಾನವಿಲ್ಲ ಆದಕಾರಣ ತಾವು ಮನೆಯ ಅಳಿಯನಾಗಿರಬೇಕು ಎಂದೆಲ್ಲ ಅಭಿಪ್ರಾಯಪಡುತ್ತಾರೆ. ಇನ್ನೂ ಕೆಲವು ಮಹಿಳೆಯರ ಅಭಿಪ್ರಾಯವೆಂದರೆ ಗಂಡನಾದವನು ಹೆಂಡತಿಯ

ಮನೆಯಲ್ಲಿ ಇರುವುದು ಸೂಕ್ತವಲ್ಲ ಎಂದು ಹೇಳುತ್ತಾರೆ. ಕಾರಣ ತನ್ನ ಗಂಡನಿಗೆ ದೊರೆಯುವ ಗೌರವ, ಮಾರ್ಯದೆಗಳಿಗೆ ಧಕ್ಕೆಯುಂಟಾಗುತ್ತದೆ. ನೆರೆಹೊರೆಯರ ಹೇಳಿಕೆಗಳು; ಬಂಧವರಲ್ಲಿಯ ನಿಂದನೆಗಳು; ಉದಾಸಿನ ಮಾತುಗಳನ್ನು ಎದುರಿಸಬೇಕಾಗುತ್ತದೆ. ಉದಾಹರಣೆ ನಿನ್ನ ಗಂಡ ಇಲ್ಲಿಯೇ ಇರುತ್ತಾನೆ; ಯಾವುದೇ ಕೆಲಸಗಳು ಮಾಡುವುದಿಲ್ಲವೇನು? ನಿಮ್ಮ ಮಗಳು ಗಂಡನ ಮನೆಯಲ್ಲಿ ಬಾಳು ನಡೆಸದೆ ಗಂಡನನ್ನು ಕರೆದುಕೊಂಡು ಇಲ್ಲಿಗೆ ಬಂದಿದ್ದಾಳೆಯೇ? ಹೀಗೆ ಹತ್ತು ಹಲವಾರು ಪ್ರಶ್ನೆಗಳು ಕೇಳುವುದಾಗಿರುತ್ತದೆ. ಆದರಲ್ಲಿ ಮನೆ ಅಳಿಯಂದರಿಗೆ ಹೋಲಿಸಿದಾಗ ಬೇರೆ ಅಳಿಯಂದಿರಿಗೆ ಸಿಗುವಷ್ಟು ಸತ್ಕಾರ, ಗೌರವ, ಪ್ರೀತಿ-ಪ್ರೇಮ, ಘನತೆಗಳು ದೊರೆಯುವುದಿಲ್ಲ ಎನ್ನುವ ಭಾವನೆ ಬೆಳೆಸಿಕೊಂಡಿರುತ್ತಾಳೆ. ಅಲ್ಲದೆ ಹಿಂದಿನಿಂದಲೂ ಹೆಂಡತಿಯು ಎಂಥಹ ಕಷ್ಟ-ಕರ್ಪಾಣ್ಯಗಳೇ ಬರಲಿ ಗಂಡನ ಮನೆಯಲ್ಲಿ ವಾಸ ಮಾಡುವುದು ಸಮಾಜ ಒಪ್ಪಿಕೊಂಡಷ್ಟು; ಅಳಿಯ ಅತ್ತೆ-ಮಾವನ ಮನೆಯಲ್ಲಿರುವುದು ಒಪ್ಪಿಕೊಳ್ಳುವುದಿಲ್ಲ.




೪.೫ರ ವೃತ್ತಚಿತ್ರದಿಂದ ಆಧುನಿಕ ಕುಟುಂಬಗಳಲ್ಲಿ ತವರುಮನೆ ಪರಿಕಲ್ಪನೆ ಮಹಿಳೆಯ ಬದುಕಿನಲ್ಲಿ ಯಾಪ ರೀತಿಯಲ್ಲಿದೆ ಎಂದು ತಿಳಿದುಕೊಳ್ಳುವುದಗೋಸ್ಕರ ಈ ಪ್ರಶ್ನೆಯನ್ನು ಕೇಳಲಾಯಿತು. ಇಲ್ಲಿ ಕುಟುಂಬದ ಮಹಿಳೆಯ ಹೇಳಿಕೆಯ ಮಾಹಿತಿಯನ್ನು ತಿಳಿದುಕೊಳ್ಳಬಹುದಾಗಿದೆ. ಶೇ. ೩೮ ರಷ್ಟು ಕುಟುಂಬದ ಸ್ತ್ರೀಯರು ಒಳ್ಳೆಯದು ಹೋಗುತ್ತಾ ಇರಬೇಕು ಎಂದಾದರೆ, ಶೇ. ೪೬ ರಷ್ಟು ಕುಟುಂಬದವರು ತಂದೆ ತಾಯಿ ನೋಡಲು ಮತ್ತು ಮಾತಾನ್ನಾಡಿಸಲು ತವರಿಗೆ ಹೋಗಬೇಕೆನ್ನುತ್ತಾರೆ. ಶೇ. ೧೨ ರಷ್ಟು ಕುಟುಂಬದ ಮಹಿಳೆಯರು ಯಾವಾಗಲು ತವರಿಗೆ ಹೋಗುವುದು ಸರಿಯಲ್ಲ ಎಂದಾದರೆ, ಶೇ. ೪ ರಷ್ಟು ಕುಟುಂಬದವರು ತವರಿನ ಮೇಲೆ ಹಕ್ಕಿರುವುದರಿಂದ ತವರಿಗೆ ಹೋಗಬೇಕಾಗುತ್ತದೆ ಎನ್ನುವವರಾಗಿದ್ದಾರೆ. ಒಟ್ಟಾರೆಯಾಗಿ ಕ್ಷೇತ್ರಕಾರ್ಯದಲ್ಲಿ ಕುಟುಂಬಗಳ

ಮಾಹಿತಿಯನ್ನು ಗಮನಿಸಿದಾಗ ಹೆಚ್ಚಿನ ಕುಟುಂಬಗಳು ತವರಿಗೆ ಮಹಿಳೆಯರು ಹೋಗುವ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತವೆ. ತವರು ಮನೆಗೆ ಹೋಗುವುದು ಒಳ್ಳೆಯದು, ತಂದೆ-ತಾಯಿ ನೋಡಿ ಮಾತನಾಡಿಸಲು ತವರು ಮನೆಯ ಮೇಲೆ ಹಕ್ಕಿದೆ ಎಂತೆಲ್ಲ ಹೇಳಿದರೂ ಸಹ ಇನ್ನೊಂದು ಕಡೆ ತವರು ಮನೆಗೆ ಹೋಗುವುದು ಸರಿಯಲ್ಲ, ತವರಿಗೆ ಭಾರವಾಗಬಾರದು ಎಂದಿದ್ದರೂ ಅದು ತನಗೆ ಶಾಶ್ವತವಾದ ಮನೆಯಲ್ಲ ಎಂಬ ಕಲ್ಪನೆ ತುಂಬಿಕೊಂಡಿರುವುದರಿಂದಾಗಿಯೇ ತವರು ಮನೆಯ ವಿಷಯವಾಗಿ ಅವಳು ಸಂಪೂರ್ಣ ಬದಲಾವಣೆಯನ್ನು ಪಡೆಯುತ್ತಿಲ್ಲ. ತವರು ಮನೆಯಲ್ಲಿ ತನ್ನ ಜನ್ಮವಾಗಿರುವುದು, ಹುಟ್ಟಿಬೆಳೆದ ಮನೆ ಅಲ್ಲಿನ ತನ್ನ ಅಣ್ಣ-ತಮ್ಮಂದಿರಿಗೆ ಇರುವಷ್ಟು ಹಕ್ಕು ತನಗೂ ಇದೆ ಎಂದು ಭಾವಿಸಿಕೊಂಡರೂ ಎಲ್ಲೋ ಒಂದು ಕಡೆ ಅವಳಲ್ಲಿ ಅಳಕು ಮೂಡುತ್ತದೆ. ಕಾರಣ ವಿವಾಹವಾದ ತಕ್ಷಣ ಗಂಡನ ಮನೆಯೇ ತನ್ನ ಸ್ವಂತ ಮನೆ ಏನಿದ್ದರೂ ದೂರದ ಮನೆಯೆಂಬ ಕಲ್ಪನೆ ಅವಳ ತಲೆಯಲ್ಲಿ ಇರುತ್ತದೆ. ಹೀಗಾಗಿಯೇ ತವರು ಮನೆಯನ್ನು ತನ್ನ ಮನೆಯೆಂದು ಒಪ್ಪಿಕೊಳ್ಳಲು ಹಿಂಜರಿಯುತ್ತಾಳೆ. ಕಷ್ಟವೋ, ಸುಖವೋ ಏನಿದರೂ ಗಂಡನ ಮನೆಯಲ್ಲಿಯೇ ಬದುಕು ಬಾಳಿ ತವರು ಮನೆಗೆ ಕೀರ್ತಿ ತರಬೇಕೆಂಬ ತರಬೇತಿಯನ್ನು ಬಾಲ್ಯ ದಲ್ಲಿಯೇ ಪಡೆದುಕೊಂಡಿರುವುದರಿಂದಾಗಿಯೇ ಸುಲಭದಲ್ಲಿ ಅದು ತನ್ನ ಮನೆಯೆಂದು ನಿರ್ಧಾರ ತೆಗೆದುಕೊಳ್ಳಲು ನಿರಾಕರಿಸುತ್ತಾಳೆ. ಪುರುಷ ಪ್ರಧಾನ ಸಮಾಜವಾಗಿರುವುದರಿಂದಾಗಿಯೇ ಇಲ್ಲಿಯೇ ರೀತಿ-ನೀತಿಗಳನ್ನು ಮೀರಿ ಬಾಳುವಂತಿಲ್ಲ. ಹಿಂದೆ ತಂದೆ, ಅಣ್ಣ-ತಮ್ಮಂದಿರ ಹೇಳಿಕೆಗಳನ್ನು ಮೀರು ತ್ತಿರಲಿಲ್ಲ. ಆಧುನಿಕ ಕುಟುಂಬಗಳಲ್ಲಿ ಗಂಡನ ಅಪ್ಪಣೆ ಪಡೆಯದೇ ಯಾವುದೇ ಕಾರ್ಯಕ್ಕೂ ಮುಂದಾಗುವಂತಿಲ್ಲ. ಈ ನಿರ್ಬಂಧಗಳ ಚೌಕಟ್ಟಿನಲ್ಲಿಯೆ ಅವಳು ತನ್ನ ಬದುಕು ಸಾಗಿಸುವಂತಾಗಿದೆ.



ವೃತ್ತಚಿತ್ರ ೪.೬ : ತವರಿಗೆ ಉಡುಗರೆಯನ್ನು ನೀಡುವ ಕುರಿತು ನಿಮ್ಮ ಅಭಿಪ್ರಾಯ

೪.೬ರ ವೃತ್ತಚಿತ್ರದಲ್ಲಿ ಕಂಡುಬರುವಂತೆ ತವರಿಗೆ ಉಡುಗೊರೆಯನ್ನು ನೀಡುವ ಕುರಿತು ನಿಮ್ಮ ಅನಿಸಿಕೆಗಳೇನು ಎಂಬುವುದರ ಬಗ್ಗೆ ಪ್ರಶ್ನಿಸಿದಾಗ, ಮಹಿಳೆಯರಿಂದ ಬಂದ ಅಭಿಪ್ರಾಯಗಳು ಈ ರೀತಿಯಾಗಿವೆ. ಶೇ. ೪೬ ರಷ್ಟು ಕುಟುಂಬದ ಮಹಿಳೆಯರು ಬಟ್ಟೆ, ಹಣ್ಣು, ಹಂಪಲು, ಸಿಹಿತಿಂಡಿಗಳು ತವರಿಗೆ ಉಡುಗೊರೆಯಾಗಿ ನೀಡುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರೆ. ಶೇ. ೩೪ ರಷ್ಟು ಕುಟುಂಬದವರು ತವರಿಗೆ ಉಡುಗೊರೆಯನ್ನು ನೀಡುವುದು ಒಳ್ಳೆಯದು ಯಾವುದೇ ಅಭ್ಯಂತರವಿಲ್ಲ ಎಂಬುದಾಗಿದ್ದಾರೆ. ಶೇ. ೧೩ ರಷ್ಟು ಕುಟುಂಬದ ಸ್ತ್ರೀಯರು ತವರಿಗೆ ಹರಕೆ, ಆಶೀರ್ವಾದ, ತವರಿನ ಕೀರ್ತಿಯ ಉಡುಗೊರೆಯ ಬಗೆಗೆ ತಮ್ಮ ಅಭಿಪ್ರಾಯವನ್ನು ತಿಳಿಸಿದರೆ, ಶೇ. ೭ ರಷ್ಟು ಕುಟುಂಬದ ಮಹಿಳೆಯರು ಯಾವುದೇ ರೀತಿಯ ತವರಿನ ಉಡುಗೊರೆಯನ್ನು ನೀಡುವ ಕುರಿತು ಏನು ಹೇಳುವುದಿಲ್ಲ ಅಥವಾ ವಿರೋಧಿಸುತ್ತಾರೆ ಎಂಬುದನ್ನು ನಾವು ಕ್ಷೇತ್ರ ಕಾರ್ಯದ ಮಾಹಿತಿಯಿಂದ ಕುಟುಂಬಗಳ ಅಭಿಪ್ರಾಯಗಳನ್ನು ನೋಡಬಹುದಾಗಿದೆ. ಆಧುನಿಕ ಕುಟುಂಬಗಳಲ್ಲಿ ಮಹಿಳೆಯರು ತಮ್ಮ ತವರಿಗೆ ಕಾಣಿಕೆಯಾಗಿ ಏನನ್ನು ಕೊಡುತ್ತಾರೆ ಎಂದು ಅರಿತುಕೊಳ್ಳುವುದೇ ಈ ಪ್ರಶ್ನೆಯ ಮೂಲ ಉದ್ದೇಶವಾಗಿದೆ. ಎಲ್ಲರು ಹೇಳಿಕೆಗಳನ್ನು ಗಮನಿಸಿದರೆ ಬಟ್ಟೆ, ಸಮವಸ್ತ್ರ, ಉಡುಪು, ಸಿಹಿತಿಂಡಿಗಳು, ಹಣ್ಣು-ಹಂಪಲು, ಹಣ ಅದು ಮನಸಿಗೆ ತಕ್ಕಂತೆ ಅಂದರೆ ಇಲ್ಲಿ ಮಹಿಳೆ ತನ್ನ ಸ್ವಂತ ಇಚ್ಛೆಯ ಮೇರೆಗೆ ಸಹಾಯ ಮಾಡಲು ಅವಳು ಯಾವುದೇ ಒಂದು ಸ್ವಾತಂತ್ರ್ಯತೆ ಪಡೆದುಕೊಂಡಿರುವುದಿಲ್ಲ. ಹೀಗಾಗಿಯೇ ತನ್ನ ಗಂಡನ ಅಭಿಪ್ರಾಯ ಪಡೆದು ಮುಂದುವರೆಯಬೇಕಾಗಿದೆ. ತನ್ನ ದುಡಿಮೆ ಹಣ ತಾನು ಖರ್ಚು ಮಾಡಬೇಕು ಎನ್ನುವ ಮನಸ್ಸು ಅವಳಿಗೆ ಇದ್ದರೂ ಅಧಿಕಾರ ಅವಳು ಪಡೆದಿರುವುದಿಲ್ಲ. ಇನ್ನೂ ಕೆಲವೊಬ್ಬರ ಹೇಳಿಕೆಗಳನ್ನು ಗಮನಿಸಿದರೆ ಇವರ ಮೇಲೆ ಸಂಪೂರ್ಣವಾದ ಪುರುಷ ಪ್ರಧಾನವಾದ ಒತ್ತಡಗಳು ಇರುವುದರಿಂದ ಇವರ ಅಭಿಪ್ರಾಯ ತವರಿಗೆ ಒಳ್ಳೆಯ ಆಶೀರ್ವಾದ, ಹರಕೆಗಳನ್ನು ನೀಡುತ್ತಾರೆ. ಅಂದರೆ ಇವರೆಲ್ಲರೂ ತವರಿನಿಂದ ಬಹಳ ದೂರವಿರುತ್ತಾರೆ. ಹೀಗಾಗಿಯೇ ಅವರು ಗಂಡನ ಮನೆಯವರ ಕಷ್ಟಗಳನ್ನು ಸಹಿಸುತ್ತಾ, ತನ್ನ ತವರಿಗೆ ತಾನು ಕೆಟ್ಟ ಹೆಸರು ತರಬಾರದೂ ಅವರಿಗೆ ಕೀರ್ತಿ ತರಬೇಕು ಎಂಬ ಅಭಿಪ್ರಾಯಕ್ಕೆ ಬರುತ್ತಾಳೆ. ಇವರೆಲ್ಲಾ ತೀರಾ ಅಸಹಾಯಕರಾಗಿರುತ್ತಾರೆ.

ಮಹಿಳೆಯು ತನ್ನ ತವರಿಗೆ ಉಡುಗೊರೆ ಕೊಡುವ ಸಂದರ್ಭದಲ್ಲಿ ಗಂಡನ ಅನುಮತಿ ಪಡೆದೆ ಮುಂದುವರೆದಿರುತ್ತಾಳೆ. ಆದರೂ ಪ್ರಸ್ತುತ ಕುಟುಂಬಗಳಲ್ಲಿ ನೋಡಿದರೆ ಒಳ್ಳೆಯದು ಏನು ಅಭ್ಯಂತರವಿಲ್ಲ ಕೊಡು ಎಂದು ಹೇಳಿದರೆ, ಇನ್ನೂ ಉಳಿದ ಶೇ. ೩೨ರಷ್ಟು ಜನರು ವಿರೋಧಿಸುತ್ತಾರೆ. ಇಲ್ಲವೇ ಏನು ಹೇಳದೆ ಸುಮ್ಮನಾಗುತ್ತಾರೆ. ಈ ರೀತಿ ಮಾಡಿದಾಗ ಮಹಿಳೆ

ತಾನು ತನ್ನ ಸ್ವಂತ ಇಚ್ಛೆಯಿಂದ ಯಾವುದನ್ನು ಮಾಡಲು ಮುಂದಾಗುವುದಿಲ್ಲ. ಕಾರಣ ಅಲ್ಲಿ ಅವಳಿಗೆ ಯಾವುದೇ ಆಯ್ಕೆ ಹಕ್ಕು ಇರುವುದಿಲ್ಲ. ಹೀಗಾಗಿಯೇ ತನ್ನ ಮನಸ್ಸಿಗೆ ಕೊಡಬೇಕು ಎಂದೆನಿಸಿದರೂ ಅದನ್ನು ಅದಮಿಟ್ಟು ಕೊಳ್ಳುತ್ತಾಳೆ. ಒಂದು ವೇಳೆ ಗಂಡನಿಗೆ ಕೇಳದೆ ತಾನೇ ಕೊಡಲು ಇಚ್ಛಿಸಿದಾಗ ವಿನಾಕಾರಣ ಜಗಳಗಳು ಉಂಟಾಗಿ ಸಂಸಾರ ಹಾಳಾಗಿಹೋಗುತ್ತದೆ. ನಾಳೆ ತನಗೆ ಕೆಟ್ಟ ಹೆಸರೆಂದು ಭಾವಿಸಿ ಏನು ತೋಚದೆ ಮೌನವಾಗಿ ಇರುತ್ತಾಳೆ.



ವೃತ್ತಚಿತ್ರ ೪.೭ : ತವರು ಮನೆಯವರ ಉಡುಗರೆ ಬಗ್ಗೆ ನಿಮ್ಮ ಪ್ರತಿಕ್ರಿಯೆ

ಮೇಲ್ಕಾಣಿಸಿದ ೪.೭ರ ವೃತ್ತಚಿತ್ರದಿಂದ ತವರು ಮನೆಯವರ ಉಡುಗೊರೆಯ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನಾಗಿರುತ್ತದೆ ಎಂಬುದನ್ನು ಕುಟುಂಬಗಳಿಗೆ ಪ್ರಶ್ನಿಸಿದಾಗ ಶೇ. ೭೬ರಷ್ಟು ಕುಟುಂಬದ ಮಹಿಳೆಯರು ತವರು ಮನೆಯವರು ಉಡುಗೊರೆಯ ರೂಪದಲ್ಲಿ ಒಳ್ಳೆಯ ಸಾಮಾನುಗಳು, ಹಣ, ದವಸಧಾನ್ಯ ನೀಡುತ್ತಾರೆ ಎಂದಾದರೆ, ಶೇ. ೧೪ ರಷ್ಟು ಕುಟುಂಬದ ಸ್ತ್ರೀಯರು ನಮಗೆ ತವರು ಮನೆಯವರು ಉಡುಗೊರೆಯ ರೂಪವಾಗಿ ಶಿಕ್ಷಣ ಕೊಡಿಸಿ, ನೌಕರಿ ಹಚ್ಚಿದ್ದಾರೆ ಎನ್ನುತ್ತಾರೆ. ಶೇ. ೧೦ ರಷ್ಟು ಕುಟುಂಬದವರು ತವರು ಮನೆಯವರು ಪ್ರೀತಿ, ವಿಶ್ವಾಸ ಹಾಗೂ ಸಲಹೆಗಳನ್ನು ಉಡುಗೊರೆಯಾಗಿ ನೀಡುವ ತಮ್ಮ ತವರು ಮನೆಯವರ ಬಗೆಗೆ ಸಂದರ್ಶನ ಮಾಡಿದ ಕುಟುಂಬದ ಮಹಿಳೆಯರು ಈ ರೀತಿಯಾಗಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ. ಪ್ರಸ್ತುತ ಕುಟುಂಬಗಳಲ್ಲಿ ಮಹಿಳೆಯರು ತಮ್ಮ ತವರಿನವರಿಂದ ಪಡೆದ ಉಡುಗೊರೆ ಬಗ್ಗೆ ತಿಳಿದುಕೊಳ್ಳುವ ಉದ್ದೇಶದಿಂದ ಈ ಪ್ರಶ್ನೆಯನ್ನು ಹಾಕಿಕೊಳ್ಳಲಾಯಿತು. ಎಲ್ಲರ ಅಭಿಪ್ರಾಯ ನೋಡಿದರೆ ಎಲ್ಲರೂ ಉಡುಗೊರೆ ಪಡೆದಿರುವುದಾಗಿಯೆ ತಿಳಿಸಿದ್ದಾರೆ. ಅದರಲ್ಲೂ ಹೆಚ್ಚಿನ ರೀತಿಯಲ್ಲಿ ಸಮವಸ್ತ್ರಗಳೆಂದು ಹೇಳಿದರೂ ಸಹ ಇನ್ನೂ ಇವರು ಕೇಳಿದ ವಸ್ತುಗಳು ಹಣ, ಒಡವೆ, ಪ್ರೀತಿ-ಪ್ರೇಮ, ವಿಶ್ವಾಸ ಯಾವುದಕ್ಕೂ ಕೊರತೆ ಮಾಡದೆ ತಮಗೆ ಸಾಲವಾದರೂ ಚಿಂತೆಯಿಲ್ಲ. ತಮ್ಮ ಮಗಳು ಗಂಡನ ಮನೆಯಲ್ಲಿ

ಸುಖವಾಗಿ ಇರಲೆಂದು ಬಯಸುತ್ತಾರೆ. ಒಬ್ಬಳೇ ಮಗಳಿದ್ದರೆ ತಮ್ಮ ಸರ್ವಸ್ವವೂ ಇವಳಿಗೆ ಧಾರೆ ಯೆರೆಯುತ್ತಾರೆ. ತಮ್ಮ ಮಕ್ಕಳಿಂದ ಯಾವುದೇ ರೀತಿಯ ಸಹಾಯ ಅಪೇಕ್ಷಿಸುವುದಿಲ್ಲ. ಹೆಣ್ಣು ಮಕ್ಕಳಿಂದ ಸಹಾಯ ಪಡೆದರೆ ತಮಗೆ ಪಾಪ ಬರುತ್ತದೆ ಎಂದು ತಿಳಿದುಕೊಂಡಿರುತ್ತಾರೆ.

ಸಾಧಾರಣವಾಗಿ ಏನು ಉಡುಗೊರೆ ಮಹಿಳೆಗೆ. ತವರು ಮನೆಯವರು ನೀಡಿದ್ದಾರೆ ಎಂದು ಕೇಳಿದರ ಉದ್ದೇಶ ಪ್ರಸ್ತುತ ಕುಟುಂಬಗಳಲ್ಲಿ ಮಹಿಳೆಯರು ಎಷ್ಟೋ ವಿಷಯಗಳನ್ನು ಮರೆತಿರುತ್ತಾರೆ. ಇಲ್ಲಿ ನೀಡಿರುವ ಎಲ್ಲಾ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದರೆ ಒಳ್ಳೆಯ ಸಾಮಾನುಗಳು ಹಾಗೂ ಉಡುಪುಗಳೆಂದು ಹೇಳಿದರೂ ಇನ್ನೂ ಕೆಲವರಂತು ತಮ್ಮ ಶಿಕ್ಷಣಕ್ಕೆ, ನೌಕರಿ ಸೇರಿಸಿದ್ದಾರೆ. ಅಲ್ಲದೇ ಒಳ್ಳೆಯ ಸಲಹೆಗಳನ್ನು ಮತ್ತು ಕೆಲವು ದವಸಧಾನ್ಯಗಳನ್ನು ನೀಡಿರುತ್ತಾರೆ. ಕಾರಣ ಗಂಡನ ಮನೆಯವರು ತಮ್ಮ ಮಗಳಿಗೆ ಯಾವುದೇ ರೀತಿಯ ಕಿರುಕುಳ ಕೊಡಬಾರದು ಅಲ್ಲದೆ ತಮಗೂ ಏನು ಅನ್ನಬಾರದು ಎಂದು ಯೋಚಿಸಿರುತ್ತಾರೆ. ತಮಗೆ ಎಷ್ಟೇ ತೊಂದರೆಯಾದರೂ ಚಿಂತೆಯಿಲ್ಲ, ತಮ್ಮ ಮಗಳಿಗೆ ಯಾವುದೆ ತೊಂದರೆಯಾಗಬಾರದು ಅವಳ ಸಂಸಾರ ಸುಖವಾಗಿರ ಬೇಕು. ಅವಳು ಸಂತೋಷವಾಗಿಯೇ ಇರಬೇಕೆಂದು ಬಯಸುತ್ತಾರೆ.

ಈ ಎಲ್ಲಾ ಪ್ರಶ್ನೆಗಳ ಅಂಕಿ-ಸಂಖ್ಯೆಗಳ ಮಾಹಿತಿಗಳಿಂದ ತಿಳಿದು ಬರುವುದೇನೆಂದರೆ ಮಹಿಳೆಯ ಜೀವನದ ವಾಸ್ತವಿಕತೆಯನ್ನು ಅರಿತುಕೊಳ್ಳುವುದಾಗಿದೆ. ಹಿಂದಿನ ದಿನಗಳಲ್ಲಿ ಮಹಿಳೆಯ ಬದುಕು ಸಂಪ್ರದಾಯದ ಚೌಕಟ್ಟಿಗೆ ಒಳಪಟ್ಟಿದ್ದವುಗಳಾಗಿರುತ್ತಿದ್ದವು. ಅಲ್ಲದೇ ಆ ಸಂದರ್ಭಗಳಲ್ಲಿ ಮಹಿಳೆಗೆ ಚಲನವಲನ ಮಾಡಲು ಯಾವುದೇ ರೀತಿಯ ಸೌಕರ್ಯಗಳು ಇರುತ್ತಿರಲಿಲ್ಲ. ಹೀಗಾಗಿಯೇ ಅವಳ ತವರು ಮನೆಯವರು ಅವಳಿಗೆ ಹಬ್ಬ-ಹರಿದಿನಗಳಲ್ಲಿ ಅಥವಾ ಕುಟುಂಬಗಲಲ್ಲಿ ಏನಾದರೂ ಕಾರ್ಯಕ್ರಮಗಳು ಅಂದರೆ ಮದುವೆ ಏರ್ಪಟ್ಟಿದ್ದರೆ / ಬಾಣಂತನಕ್ಕೆ ಕರೆದುಕೊಂಡು ಬರಬೇಕಾಗದರೆ ಸರಕುಗಳನ್ನು ಕೊಟ್ಟು ಕಳುಹಿಸುವುದಲ್ಲದೆ ಅವಳ ಮನೆಯವರೇ ಬಂದು ಅವಳಿಗೆ ಕರೆದುಕೊಂಡು ಹೋಗುವಂತಹ ಪರಿಸ್ಥಿತಿ ಇತ್ತು. ಆದರೆ ಆಧುನಿಕ ಸಂದರ್ಭದಲ್ಲಿ ಮಹಿಳೆಯು ಶಿಕ್ಷಣ ಪಡೆದು, ಉದ್ಯೋಗಸ್ಥಳಿದ್ದರೂ, ಅವಳ ಚಲನ-ವಲನಗಳಲ್ಲಿ ಸರಕುಗಳಲ್ಲಿ ವ್ಯತ್ಯಾಸಗಳು ಕಂಡು ಬಂದರೂ ಆಧುನಿಕ ಮೌಲ್ಯಗಳು, ತವರು ಮನೆಗೆ ಮಹಿಳೆ ಭೇಟಿ ನೀಡುವ ಸಾಧ್ಯತೆಗಳು, ಆಧುನಿಕ ವಿಚಾರ ದಲ್ಲಿಯೂ ಮಹಿಳೆಯ ಬದುಕು ಆಧುನಿಕ ವೈಚಾರಿಕತೆಯನ್ನು ತಾತ್ವಿಕ ಹಿನ್ನೆಲೆ ಅಂದರೆ ಬೌದ್ಧಿಕ ವಾದ ಸನ್ನಿವೇಶವನ್ನೇ ಹೊಂದಿರುತ್ತದೆ. ಇವತ್ತಿನ ಸಂದರ್ಭದಲ್ಲಿಯೂ ಮಹಿಳೆಯೂ ತನ್ನ ತವರಿಗೆ

ಹೋಗುವ ಮನೋಭಾವನೆಯಲ್ಲಿ ಆಯ್ಕೆ ಸಾಕಾರಗೊಳಿಸಿಕೊಳ್ಳುವ ಸಾಧ್ಯತೆಗಳು ಕಂಡುಬರುತ್ತಿಲ್ಲ. ತವರು ಮನೆಯೇ ಆಗಲಿ ಗಂಡನ ಮನೆಯೇ ಆಗಲಿ ತನ್ನ ಮನೆಯೆಂದು ಅವಳು ಹುಡುಕಿ ಕೊಳ್ಳುವಲ್ಲಿ, ಆಯ್ಕೆ ಮಾಡಿಕೊಳುವಲ್ಲಿ ಗೋಂದಲವುಂಟು. 'ಕೊಟ್ಟ ಹೆಣ್ಣು ಕುಲದಿಂದ ಹೊರಗೆ' ಎನ್ನುವಂತೆ ಈ ಮೇಲಿನ ಪ್ರಶ್ನೆ ಹಾಕಿಕೊಂಡಿರುವುದೇ ತವರಿಗೆ ಹೋಗಿ ಬರುವಲ್ಲಿ ಮಹಿಳೆಯ ಸ್ಥಾನಮಾನ, ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದಾಗಿದೆ.

ಇಂದಿಗೂ ಮಹಿಳೆಯು ತವರಿಗೆ ಹೋಗಬೇಕಾದರೆ ಆಕೆಯ ಕುಟುಂಬ ಅಥವಾ ಗಂಡನ ಅಭಿಪ್ರಾಯ, ಅಪ್ಪಣೆ, ಅನುಮತಿಯನ್ನು ಪಡೆಯುವಂತೆ ಕುಟುಂಬದವರು / ಗಂಡ ತಮಗೆ ಅನುಕೂಲವಾಗುವ ರೀತಿಯಲ್ಲಿ ಹೋಗಲು ಪ್ರೇರೇಪಿಸುತ್ತಾರೆ. ಅಂದರೆ ಮಹಿಳೆಯ ಮನೆಯವರು ಮದುವೆ ಸಂದರ್ಭದಲ್ಲಿ ಹಣ ಕಡಿಮೆ ಕೊಟ್ಟರೆ ಅದನ್ನು ಕೇಳಲು ಮಹಿಳೆಗೆ ಕಳುಹಿಸಿ ಕೊಡುತ್ತಾರೆ. ಈ ಎಲ್ಲಾ ಅಂಶಗಳಿಂದ ತಿಳಿದುಬರುವುದೆನೆಂದರೆ ಮಹಿಳೆ ತವರಿಗೆ ಹೋಗುವಂತೆ ಒತ್ತಾಯಿಸುವುದು, ಬೇಡವೆಂದು ನಿರಾಕರಿಸುವುದೆಲ್ಲಾ ವ್ಯವಸ್ಥೆಯ ನಿರ್ದೇಶಕನ, ಕುಟುಂಬ / ಗಂಡನ ಆಜ್ಞೆಗೆ ಒಳಪಟ್ಟಿರುವುದಾಗಿದೆ. ಇದನ್ನೆಲ್ಲಾ ನೋಡಿದರೆ ಮಹಿಳೆಯರಿಗೆ ತಮ್ಮದೇ ಆದ ಒಂದು ಆಯ್ಕೆ ಹುಡುಕಿಕೊಂಡಿಲ್ಲ. ತಮಗೆ ತಮ್ಮ ತವರುಮನೆ ಬೇಕು ಅದಕ್ಕಾಗಿಯೇ ಹೋಗಿ ಬರುತ್ತೇನೆ ಎನ್ನುವ ಅಭಿಪ್ರಾಯ ಇಲ್ಲಿ ಕಾಣುತ್ತಿಲ್ಲ. ಆಧುನಿಕ ಸ್ತ್ರೀಯು ಕೂಡ ತವರು ಮನೆತನಕ್ಕೆ ಅಗತ್ಯ ಎನಿಸಿಕೊಂಡಿಲ್ಲ. ತವರು ಮನೆಗೆ ಹೆಣ್ಣುಮಕ್ಕಳು ಹೋಗುವುದರ ಬಗ್ಗೆ ಅವಳ ಕುಟುಂಬದವರ / ಗಂಡನ 'ಉದಾರತೆ' ಅಥವಾ ಕೊಡುಗೆ (ದಾನ) ಈ ಹಿಂದಿನ ಘಟ್ಟಗಳಲ್ಲಿ ಸಂಪಾದೀಕರಿಸುವುದ ರೊಂದಿಗೆ ಮಹಿಳೆಯು ತವರು ಮನೆ ಬಗ್ಗೆ ಜೀವನದಲ್ಲಿ ಅಳವಡಿಸಿಕೊಂಡಿರುವ ರೀತಿ ನೀತಿಗಳು ಮೇಲ್ನೋಟಕ್ಕೆ (ಬಾಹ್ಯ) ಬದಲಾವಣೆ ಕಂಡರೂ ಆಳದಲ್ಲಿ (ಆಂತರಿಕ) ಮೂಲಭೂತ ಬಲಾವಣೆ ಹೊಂದಿಲ್ಲ. ಆಧುನಿಕ ವಿವಾಹಿತ ಮಹಿಳೆಯ ಸಂಬಂಧದಲ್ಲಿ ತವರುಮನೆ, ತವರಿನ ಬದಲಾವಣೆ ತರಲು ಸಾಧ್ಯವಾಗುತ್ತಿಲ್ಲ. ಅವಳು ಸಂಪ್ರದಾಯಕ್ಕೆ ಅನುಗುಣವಾಗಿಯೇ ಹೋಗಬೇಕು. ಕುಟುಂಬ ಅಥವಾ ಗಂಡನೇ ಎಲ್ಲದರ ಬಗ್ಗೆ ನಿರ್ಧರಿಸುತ್ತಾನೆ. ಹಾಗೆಯೇ ಅವಳು ಅದಕ್ಕೆ ಹೊಂದಿಕೊಂಡು ಹೋಗಬೇಕು. ಇಲ್ಲಿ ಅವಳ ಹಿತಾಸಕ್ತಿ, ಇಷ್ಟ-ಕಷ್ಟಗಳನ್ನು, ಸ್ವತಃ ಅವಳ ಅಗತ್ಯ ಮತ್ತು ಅಭಿರುಚಿಗಳನ್ನೆಲ್ಲಾ ಪರಿಗಣಿಸಿಲ್ಲ. ಇದನ್ನೆಲ್ಲಾ ಕುಟುಂಬ / ಗಂಡನನ್ನೆ ಆಧರಿಸಿವೆ. ಆಧುನಿಕ ಕುಟಂಬದ ಶಿಕ್ಷಿತ ಉದ್ಯೋಗಸ್ಥ ಹೊಂದಿರುವ ಮಹಿಳೆಯು ಹೊಸ ಆಲೋಚನೆ ಮಾಡುತ್ತಾಳೆ ಎಂಬ ನಂಬಿಕೆಯಿದೆ. ಈ ಹಿನ್ನೆಲೆಯಲ್ಲಿ ತವರಿನೊಂದಿಗಿನ ಸಂಬಂಧ ಹೊಂದಿರುವ ಅಭಿಪ್ರಾಯ

ತಿಳಿದುಕೊಳ್ಳುವುದರ ಭಾಗವಾಗಿ ಈ ಉದ್ದೇಶ. ಆಧುನಿಕ ಅರಿವಿನ ಹಂತದಲ್ಲಿ ಮಾಡಿದ ಬದಲಾವಣೆ ಸಂಪ್ರದಾಯಕತೆಯ ಜೊತೆಗೆ ಹೊಂದಿಕೊಂಡಿರುತ್ತವೆ. ಒಂದು ಹಂತದ ಬದಲಾವಣೆ ಪಡೆದಿದ್ದಾರೆ. ಈ ಹಿಂದಿನ ಪ್ರಶ್ನೆಗಳನ್ನು ಕೇಳಿರುವುದರ ಕಾರಣ ಅದನ್ನು ಅವರ ಜೀವನದಲ್ಲಿ ಅಳವಡಿಸಿಕೊಳ್ಳುವ ಸಾಧ್ಯತೆ ಆಗುತ್ತಿಲ್ಲ. ಅವಳ ದೈನಂದಿನ ಜೀವನಕ್ಕೂ ಹೆಚ್ಚಿನ ಗಮನವಿರುವುದು ಕಾಣಬಹುದು. ಮಹಿಳೆ ಹಕ್ಕುಗಳ ಬಗ್ಗೆ ಸಮಾನತೆ ತಿಳುವಳಿಕೆ ಎನ್ನುವುದು ಆಧುನಿಕ ಕುಟುಂಬದಲ್ಲಿ ತಿಳುವಳಿಕೆಯಾಗಿಯೇ ಹರಡಿದೆ. ಆಧುನಿಕ ಕುಟುಂಬಕ್ಕೂ ಸಾಂಪ್ರದಾಯಿಕ ಕುಟುಂಬಕ್ಕೂ ವ್ಯತ್ಯಾಸವಿಲ್ಲ. ಅರಿವಿನ ಸಂದರ್ಭದಲ್ಲಿಯೂ ಸಮಾನತೆ, ಸ್ವಾತಂತ್ರ್ಯತೆ ಸಾಮಾನ್ಯವಾಗಿ ಅರಿವೆ ಆಗಿದೆ. ಸ್ತ್ರೀವಾದದ ಅರಿವಿನ ಜೀವನ ಕ್ರಮವಾಗಿ ನೋಡಿದರೆ ಹೆಚ್ಚಿನ ಬದಲಾವಣೆ ಸಂದರ್ಭ ನೋಡುತ್ತೇವೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹೆಚ್ಚಿನ ರೀತಿಯಿಂದ ಬದಲಾವಣೆಗಳು ಆಗುತ್ತಿಲ್ಲ. ಇಂದು ಮಹಿಳೆಯರು ಜಾಗೃತಳಾಗುತ್ತಿದ್ದಾಳೆ. ವಿದ್ಯಾವಂತೆಯಾಗಿ ಹೊರ ಜಗತ್ತಿನ ಕಡೆ ಕಣ್ತೆರೆಯುತ್ತಿದ್ದಾಳೆ. ಅವಳ ಸ್ವತಂತ್ರ ವ್ಯಕ್ತಿತ್ವ ಹೆಚ್ಚುತ್ತಿದೆ. ಮಾನಸಿಕವಾಗಿ ಬೆಳೆಯುತ್ತಿದ್ದಾಳೆ. ಆರ್ದಿಕವಾಗಿ ಸ್ವತಂತ್ರಳಾಗುತ್ತಿದ್ದಾಳೆ. ಇನ್ನೂ ಮುಂದೆಯಾವ ರೀತಿಯ ದಬ್ಬಾಳಿಕೆಯನ್ನು ಅವಳು ಸಹಿಸಲಾರಳು. ಮೂಕ ವೇದನೆ ಪ್ರತಿಭಟನೆಗೆ ದಾರಿ ಮಾಡಿಕೊಡುತ್ತಿದೆ.

ಕುಟುಂಬದ ಒಳಗೆ ಹೆಣ್ಣಿನ ವ್ಯಕ್ತಿತ್ವದ ಮೇಲೆ ಸತತವಾಗಿ ಧಾಳಿ ನಡೆಯುತ್ತದೆ. ಆಕೆ ಇದರಲ್ಲಿ ತನ್ನನ್ನು ಲಯವಾಗಿಸಿಕೊಳ್ಳುತ್ತಾಳೆ. ಇಲ್ಲವೆ ಪ್ರತಿಭಟನೆಯ ಹೆಸರಿನಲ್ಲಿ ತನ್ನ ಹಕ್ಕನ್ನು ಮನವರಿಕೆ ಮಾಡಿಕೊಳ್ಳದೆ ಭ್ರಾಂತಳಾಗಿ ಏಕಾಂಗಿ ಯಾಗುತ್ತಾಳೆ. ಮದುವೆಗೆ ಮುಂಚೆ ತವರು, ಆನಂತರದಲ್ಲಿ ಗಂಡನ ಮನೆ, ನಿನ್ನದೆಂಬ ಯಾವ ಮನೆಯೂ ಇಲ್ಲ ಎಂಬ ಸಾಮಾಜಿಕ ದಬ್ಬಾಳಿಕೆಯನ್ನು ಈಕೆ ಒಪ್ಪಿಕೊಂಡಂತೆಯೇ ಆಗುತ್ತದೆ. ಕುಟುಂಬದ ಈ ದೌರ್ಜನ್ಯವನ್ನು, ಘರ್ಷಣೆಯನ್ನು ನಿಭಾಯಿಸುವುದು ಹೆಣ್ಣಿನ ಪಾಲಿಗೆ ಸುಲಭದ ಮಾತಂತೂ ಅಲ್ಲ. ಆದರೂ ಈ ಕುರಿತು ಅವಳು ಈಗ ಹೆಚ್ಚು ಎಚ್ಚರದಿಂದ ಯೋಚಿಸಬೇಕು. ಕುಟುಂಬ ಹೊರಗಿನ ಪುರುಷ ಲೋಕದಲ್ಲಿ ಇದರ ನಿರ್ವಹಣೆ ಸ್ವಲ್ಪ ಮಟ್ಟಿಗೆ ಸುಲಭ. ಏಕೆಂದರೆ ಇಲ್ಲಿ ಗಂಡು ಮಗು ತಾಯಿ ಎಂಬ ಸಂಬಂಧಗಳ ಸೂಕ್ಷ್ಮಗಳೇನೂ ಇಲ್ಲ. ಇದು ವ್ಯವಹಾರಿಕ ಲೋಕ. ಮನಸ್ಸಿಗಿಂತ ಬುದ್ಧಿ, ಧೈರ್ಯ, ಸಾಹಸ ಹಾಗೂ ವಿವೇಕ ಸೂಕ್ತ.

ಆಧಾರಗಳು

೧. ವಿಶ್ವಕನ್ನಡ ದಿನ ಪತ್ರಿಕೆ, ಮಹಿಳಾ ವಿಶ್ವ, ಏಪ್ರೀಲ್ ೩, ೨೦೦೬

೨. ರುದನೂರ ಎಚ್.ಬಿ., 'ತವರು ಮನೆ ತಣ್ಣಗಿರಲಿ', ಹಿಯರ್ ಬೆಂಗಳೂರು ನವೆಂಬರ್ ೩೦, ೨೦೦೪

೩. ಇಂದಿರಾ ಆರ್., *ಮಹಿಳೆ ಸಮಾಜ ಮತ್ತು ಸಂಸ್ಕೃತಿ*, ಮಹಿಳಾ ಅಧ್ಯಯನ ವಿಭಾಗ ಮಾಲೆ-೩, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವಸಹಾತುಶಾಹಿ ಸಂದರ್ಭದಲ್ಲಿ ಮುಂಚೂಣಿಗೆ ಬಂದ ಸ್ತ್ರೀ ಶಿಕ್ಷಣದ ಪ್ರಸ್ತಾಪವು ಭಾರತೀಯ ಮಹಿಳೆಯ ಬದುಕಿನಲ್ಲಿ ಮಹತ್ವದ ಬದಲಾವಣೆಯನ್ನು ಉಂಟುಮಾಡಿತು. ಸ್ತ್ರೀ ಶಿಕ್ಷಣ ಬೇಕೇ / ಬೇಡವೇ? ಸ್ತ್ರೀ ಶಿಕ್ಷಣದ ಬಗ್ಗೆ ಕ್ರಮ ಏನಾಗಿರಬೇಕು? ಯಾವ ಹಂತದವರೆಗೆ ಸ್ತ್ರೀ ಶಿಕ್ಷಣವನ್ನು ನೀಡಬೇಕು? ಇತ್ಯಾದಿ ಹಲವು ವಾದ-ವಿವಾದಗಳ ನಡುವೆಯೇ ವಿಚಾರವು ಹಂತ ಹಂತವಾಗಿ ಸಾಮಾಜಿಕ ಮನ್ನಣೆಯನ್ನು ಪಡೆಯುತ್ತಾ ಹೋಯಿತು.

ಸ್ತ್ರೀ ಶಿಕ್ಷಣದ ವಿಚಾರವನ್ನು ಹಿಂಬಾಲಿಸುತ್ತ ಬಂದ ಮಹಿಳಾ ಉದ್ಯೋಗದ ವಿಚಾರವು ಅವಳ ಬದುಕನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಹಿಸಿತು. ಕೌಟುಂಬಿಕ ಯೋಗಕ್ಷೇಮದ ಚೌಕಟ್ಟಿನೊಳಗೆ ಮನ್ನಣೆಯನ್ನು ಪಡೆದ ಮಹಿಳಾ ಉದ್ಯೋಗದ ಸಂಗತಿಯು ನಿಧಾನವಾಗಿ ಅವಳ ಆರ್ಥಿಕ, ಸಾಮರ್ಥ್ಯವನ್ನು ಹೆಚ್ಚಿಸ ತೊಡಗಿತು.

ಎಲ್ಲಕ್ಕಿಂತ ಹೆಚ್ಚಾಗಿ ಆಧುನಿಕ ಪುರುಷನು ಹೊಂದುತ್ತಾ ಬಂದ ಪಲ್ಲಟಗಳಿಗನುಗುಣವಾಗಿ ಸ್ತ್ರೀಯನ್ನು ಹೊಂದಿಸಬೇಕಾದ ಅವಶ್ಯಕತೆಯು ನಿಜವಾದ ಅರ್ಥದಲ್ಲಿ ಈ ಹೊತ್ತಿನ ಆ ಮಹಿಳೆಯನ್ನು ರೂಪಿಸಿತು. ಪುರುಷ ಪ್ರಧಾನ ಸಮಾಜದ ಅಗತ್ಯಕ್ಕನುಗುಣವಾದ ಸ್ತ್ರೀ ಶಿಕ್ಷಣ, ಉದ್ಯೋಗ, ವೈಚಾರಿಕತೆ, ಸಮಾನತೆ, ಸ್ವಾತಂತ್ರ್ಯ ಇತ್ಯಾದಿಗಳು ಸಮಾಜದಲ್ಲಿ ಕಾಣಿಸತೊಡಗಿದವು. ಮಹಿಳೆಯರ ಅಭಿವೃದ್ಧಿಗಾಗಿ ಸಂಘ-ಸಂಸ್ಥೆಗಳು ಮಹಿಳಾ ಪರ ಕಾನೂನುಗಳು ವಿಶೇಷ ಮೀಸಲು ಸವಲತ್ತು ಇತ್ಯಾದಿಗಳನ್ನು ಒದಗಿಸುತ್ತಾ ಬಂದ ಸಮಾಜವು ತನ್ನದೇ ಆದ ಅಳತೆಗೋಲುಗಳನ್ನು ಬಳಸಿ ಮಹಿಳಾ ಅಭಿವೃದ್ಧಿಯ ಪಥವನ್ನು ವಿವರಿಸ ತೊಡಗಿತು. ಅಂಕಿ-ಅಂಶಗಳ ಆಧಾರದ ಮೇಲೆ ಈ ಸಮಾಜವು ಸಾಧಿಸುತ್ತ ಬಂದಿರುವ ಲಿಂಗ ಸಮಾನತೆಯ ವಿಚಾರವನ್ನು ಮಹಿಳಾ ಸಬಲೀಕರಣವನ್ನು

ವಿವರಿಸ ತೊಡಗಿತು. ನಿರೀಕ್ಷಿತ ಗುರಿಗಳನ್ನು ಮುಟ್ಟಲಾಗದಿದ್ದರೂ ಕಣ್ಣಿಗೆ ಕಾಣುವ ಮಟ್ಟದ ಪ್ರಗತಿಯನ್ನು ಸಾಧಿಸಲಾಗಿದೆ ಎಂದು ಭಾವಿಸಲಾಯಿತು.

ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಆಧುನಿಕ ಶಿಕ್ಷಣವನ್ನು ಪಡೆದ ಆಧುನಿಕ ಕುಟುಂಬಗಳ ಸ್ತ್ರೀಯು ಹೊಂದಿರುವ ಚಿಂತನಾಕ್ರಮದ ಸ್ವರೂಪವೇನು? ಎಂಬುದನ್ನು ಅರ್ಥ ಮಾಡಿಕೊಳ್ಳುವ ಉದ್ದೇಶದಿಂದ ಈ ಅಧ್ಯಾಯದಲ್ಲಿ ಗುರುತಿಸಲಾಗಿರುವ ವಿಷಯಗಳಿಗೆ ಸಂಬಂಧಿಸಿರುವಂತೆ ಕ್ಷೇತ್ರಕಾರ್ಯ ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. ಕೆಲಮಟ್ಟಿಗಿನ ಆಧುನಿಕ ಸನ್ನಿವೇಶಗಳಿಗೆ ಸವಲತ್ತುಗಳಿಗೆ ತೆರೆದುಕೊಂಡಿರುವ ನಗರಗಳಲ್ಲಿನ ಕುಟುಂಬಗಳ ಮಹಿಳೆಯರು ತಮ್ಮ ಸುತ್ತ ಚರ್ಚೆಯಲ್ಲಿರುವ ಹಾಗೂ ತಮಗೆ ಉಪಯುಕ್ತವೆನ್ನಲಾಗುತ್ತಿರುವ ಅಥವಾ ತಮಗೆ ಸಂಬಂಧಿಸುವ ವಿಚಾರಗಳನ್ನು ಹೇಗೆ ಗ್ರಹಿಸುತ್ತಿದ್ದಾರೆ ಎಂಬುದನ್ನು ಅರಿಯಲು ಇಲ್ಲಿ ಪ್ರಯತ್ನಿಸಲಾಗಿದೆ. ಸ್ತ್ರೀ ಶಿಕ್ಷಣ, ಉದ್ಯೋಗ ಇತ್ಯಾದಿಗಳು ಮಹಿಳೆಯ ಬದುಕಿನಲ್ಲಿ ಉಂಟು ಮಾಡಿರುವ ಪಲ್ಲಟಗಳಿಗೂ ಅವಳಲ್ಲಿರುವ ವೈಚಾರಿಕತೆಯ ಸ್ವರೂಪಕ್ಕೂ ಇದ್ದಿರಬಹುದಾದ ಸಂಬಂಧ ಸ್ವರೂಪವನ್ನು ಇಲ್ಲಿ ಗುರುತಿಸಲು ಯತ್ನಿಸಲಾಗಿದೆ. ಶಿಕ್ಷಿತ, ಉದ್ಯೋಗಸ್ಥ, ಆಧುನಿಕ ಸ್ತ್ರೀಯು ಹೆಚ್ಚು ವಿಚಾರವಂತಳಾಗಿರುತ್ತಾಳೆ, ತನ್ನ ಸುತ್ತಲಿನ ಆಗು ಹೋಗುಗಳಿಗೆ ತೆರೆದುಕೊಂಡಿರುತ್ತಾಳೆ ಎಂಬ ಸಾಮಾನ್ಯ ನಂಬಿಕೆಯನ್ನು ಒರೆ ಹಚ್ಚುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದು.

ಸಮಕಾಲೀನ ಸಂದರ್ಭದಲ್ಲಿ ಕಂಡು ಬರುತ್ತಿರುವ 'ಮಾಧ್ಯಮ ಕ್ರಾಂತಿ'ಯು ಈ ಹೊತ್ತಿನ ಮಹಿಳೆಗೆ ವಿಶೇಷ ಅವಕಾಶವನ್ನೊಂದನ್ನು ಒದಗಿಸಿದೆ. ಮನೆಯ ಹೊಸ್ತಿಲನ್ನು ದಾಟದೆಯೇ ಜಾಗತೀಕ ಸುದ್ದಿಗಳು ಅವಳನ್ನು ತಲುಪುತ್ತಿವೆ. ಈ ಅವಕಾಶವನ್ನು ಬಳಸಿಕೊಂಡು ಸಮಾಜವು ಹಲವು ಸ್ತ್ರೀ ಕೇಂದ್ರಿತವಾದ ಮಾಹಿತಿಯನ್ನು ವಿಶ್ಲೇಷಣೆಯನ್ನು ಮಾಧ್ಯಮದ ಮೂಲಕ ಅವಳಿಗೆ ತಲುಪಿಸುತ್ತಿವೆ. ಒಟ್ಟಾರೆಯಾಗಿ ಈ ಹೊತ್ತಿನ ಮಾಧ್ಯಮಗಳು ಪುರುಷ ಹಿತಾಸಕ್ತಿಯ ಒಳಗೆ ಕೆಲಸ ಮಾಡುತ್ತಿವೆ ಎಂಬುದನ್ನು ಒಪ್ಪಿಕೊಳ್ಳುತ್ತಲೂ ಅದು ತಕ್ಕ ಪ್ರಮಾಣದ ಸ್ತ್ರೀಪರ ಕಾಳಜಿಯನ್ನು ವಹಿಸುತ್ತಿವೆ ಹಾಗೂ ಆಧುನಿಕ ಕುಟುಂಬಗಳ ಸ್ತ್ರೀಯರು ಈ ವಿಚಾರಧಾರೆಗೆ ಸಾಕಷ್ಟು ತೆರೆದುಕೊಂಡಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟು ಆಧುನಿಕ ಸ್ತ್ರೀಯರಲ್ಲಿ ಕಂಡುಬರುವ ಚಿಂತನಾಕ್ರಮದ ಸ್ವರೂಪವನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಅದಕ್ಕಾಗಿ ಮುಖ್ಯವಾಗಿ ಸ್ತ್ರೀ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯ, ಆಸ್ತಿಯ ಹಕ್ಕು, ಮೀಸಲಾತಿ, ಸ್ತ್ರೀ-ಪುರುಷರ ಸಮಾನತೆ ಇತ್ಯಾದಿ ವಿಚಾರಗಳ ಕುರಿತಂತೆ ಆಕೆ ಹೊಂದಿರುವ ಅಭಿಪ್ರಾಯವನ್ನು ಸಕಾರಣವಾಗಿ, ಗುಣಾತ್ಮಕ ವೈಧಾನಿಕತೆಯ ಬಳಕೆಯೊಂದಿಗೆ ಸಂಗ್ರಹಿಸಲಾಗಿದೆ.

ಒಂದು ಶತಮಾನದ ಹಿಂದೆಯೂ ಚರ್ಚೆಯ ವಿಷಯವಾಗಿದ ಮೇಲಿನೆಲ್ಲ ಅಂಶಗಳು ಹೇಗೆ ಈ ಹೊತ್ತಿಗೂ ಚರ್ಚೆಯ ಸಂಗತಿಯಾಗಿಯೇ ನಿರ್ವಹಣೆಗೊಳ್ಳುತ್ತಿವೆ ಹಾಗೂ ಆ ಚರ್ಚೆಯಲ್ಲಿ ಸ್ತ್ರೀಯರ ಪಾಲ್ಗೊಳ್ಳುವಿಕೆ ಈ ಹೊತ್ತಿಗೆ ನಗಣ್ಯ ಸ್ವರೂಪದಾಗಿದೆ ಎಂಬುದನ್ನು ಗಮನದಲ್ಲಿಟ್ಟು ಕೊಂಡು ಇಲ್ಲಿನ ಪ್ರಶ್ನೆಗಳನ್ನು ಹೊಸ ಕುತೂಹಲದೊಂದಿಗೆ ರೂಪಿಸಲಾಗಿದೆ. ಶಿಕ್ಷಿತ ಮಹಿಳೆ ಯೊಬ್ಬಳು ಪುರುಷನಿಗಿಂತ ಹೆಚ್ಚಿನ ಶಿಕ್ಷಣವನ್ನು ಸ್ತ್ರೀ ಪಡೆಯುವುದರ ಬಗ್ಗೆ ಉದ್ಯೋಗಸ್ಥ ಮಹಿಳೆಯೊಬ್ಬಳು ಆರ್ಥಿಕ ಸ್ವಾತಂತ್ರ್ಯದ ಬಗ್ಗೆ ಹೊಂದಿರಬಹುದಾದ ಅಭಿಪ್ರಾಯಗಳು ಏನಾಗಿರಬಹುದು ಎಂಬುದು ಕೂತೂಹಲ ಯೋಗ್ಯವಾದುದಾಗಿದೆ. ಅಂತೆಯೇ ಆಧುನಿಕ ಸ್ತ್ರೀಯು ತವರು ಮತ್ತು ಗಂಡನ ಮನೆಯ ಆಸ್ತಿಯನ್ನು ಕುರಿತಂತೆ ಹೊಂದಿರಬಹುದಾದ ತಿಳುವಳಿಕೆಯನ್ನು ಪ್ರತ್ಯೇಕಿಸಿ ಗ್ರಹಿಸುವುದು ಆಸ್ತಿ ಹಕ್ಕಿನ ಕುರಿತ ಒಟ್ಟಾರೆ ಚರ್ಚೆಗಿಂತ ಹೆಚ್ಚು ಉಪಯುಕ್ತವಾದು ದಾಗಿದೆ.

ಹೀಗೆ ಭಿನ್ನ ಭಿನ್ನ ಸಂಗತಿಗಳಿಗೆ ಸಂಬಂಧಿಸಿದ ಸೂಕ್ಷ್ಮ ವಿವರಗಳನ್ನು ಅರಿಯುವುದು, ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದ್ದು ಅದಕ್ಕಾಗಿ ಈ ಕೆಳಗಿನ ಪ್ರಶ್ನೆಗಳನ್ನು ರೂಪಿಸಿಕೊಳ್ಳಲಾಗಿದೆ.

ಮಹಿಳೆಯ ಬದುಕಿನ ಸಂದರ್ಭದಲ್ಲಿ ಅತ್ಯಂತ ಮಹತ್ವದ ಹಾಗೂ ಸಾಮಾಜಿಕ ವಾಸ್ತವ ವಾಗಿರುವ ಚಿಂತನಾಕ್ರಮದ ನಿರ್ವಚನೆ ಮತ್ತು ಮಹಿಳೆ ಎಂಬ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು ಆಧುನಿಕ ಕುಟುಂಬಗಳಲ್ಲಿನ ಸ್ತ್ರೀಯ ಶಿಕ್ಷಣ, ಉದ್ಯೋಗ ಹಾಗೂ ಆಲೋಚನಾ ಕ್ರಮಗಳ ಬಗ್ಗೆ ವಿಶ್ಲೇಷಿಸುವ ಉದ್ದೇಶದಿಂದ ಈ ಅಧ್ಯಯನದ ಭಾಗವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಕೇವಲ ೧೦೦ ಕುಟುಂಬಗಳನ್ನು ಮಾತ್ರ ಸೀಮಿತವಾಗಿಟ್ಟುಕೊಂಡು ಸಂದರ್ಶನ ವನ್ನು ಕೈಗೊಳ್ಳಲಾಗಿದೆ. ಈ ಕ್ಷೇತ್ರಾಧಾರಿತದ ವಿವರಗಳನ್ನು ಈ ರೀತಿಯಲ್ಲಿ ಗುರುತಿಸಿಕೊಳ್ಳಲಾಗಿದೆ.

**ಗುರುತಿಸಿಕೊಳ್ಳಲಾದ ಪ್ರಶ್ನೆಗಳು**

೧. ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಕೆಳಗಿದೆ ಎಂಬುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೨. ಸ್ತ್ರೀ ಶಿಕ್ಷಣ ಯಾವ ಹಂತದ್ದಾಗಿರಬೇಕು?

೩. ಗಂಡನಿಗಿಂತ ಹೆಂಡತಿ ಹೆಚ್ಚು ಓದುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೪. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಅಗತ್ಯವೇ? ಹೌದು / ಇಲ್ಲ ಎಂದಾದರೆ ಕಾರಣ ಕೊಡಿ?

೫. ಕುಟುಂಬದಲ್ಲಿ ಪುರುಷನಿಗಿಂತ ಹೆಚ್ಚಿನ ಉದ್ಯೋಗದಲ್ಲಿ ಸ್ತ್ರೀಯರು ಇರುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೬. ಆಸ್ತಿ ಹಕ್ಕಿನ ಬಗ್ಗೆ ನಿಮ್ಮ ಅಭಿಪ್ರಾಯ? ತವರು ಮನೆಯ ಆಸ್ತಿ ಬೇಕು? ಬೇಡವೆ? ಏಕೆ?

ಗಂಡನ ಮನೆಯ ಆಸ್ತಿ ಬೇಕು? ಬೇಡವೇ? ಏಕೆ?

೭. ಕುಟುಂಬದ ಆಸ್ತಿ ಇಬ್ಬರ ಹೆಸರಿನಲ್ಲಿ ಇರಬೇಕೆಂಬುದರ ಕುರಿತು ಅಭಿಪ್ರಾಯವೇನು?

೮. ಸ್ತ್ರೀ-ಪುರುಷನಿಗಿಂತ ಕಡಿಮೆ ಸಾಮರ್ಥ್ಯವನ್ನು ಹೊಂದಿರುತ್ತಾಳೆಯೇ? ಹೌದು / ಇಲ್ಲ?

೯. ಹೊಂದಿದ್ದರೆ ಹೊಂದಿಲ್ಲಾ ಎಂದಾದರೆ ನಿಮ್ಮ ಪ್ರಕಾರ ಅದಕ್ಕೆ ಕಾರಣವೇನು?

೧೦. ಮಹಿಳೆಯರಿಗೆ ಮೀಸಲಾತಿ ಇರಬೇಕೆ ಬೆಡವೇ? ಹೌದು / ಇಲ್ಲ?

ವೃತ್ತಚಿತ್ರ: ೫.೧




ಈ ಮೇಲ್ಕಾಣಿಸಿ ೫.೧ರ ವೃತ್ತಚಿತ್ರವನ್ನು ಗಮನಿಸಿದಾಗ ಇಲ್ಲಿ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಯಾವ ರೀತಿಯಲ್ಲಿರುವುದು ಎಂಬ ಪ್ರಶ್ನೆಯನ್ನು ಕುಟುಂಬದ ಮಹಿಳೆಯರಲ್ಲಿ ಕೇಳಿದಾಗ, ಶೇ. ೬೩ ರಷ್ಟು ಕುಟುಂಬದ ಸ್ತ್ರೀಯರು ಸರಿಸಮಾನವಾಗಿದೆ ಎಂದಾದರೆ, ಶೇ. ೨೩ ರಷ್ಟು ಕುಟುಂಬದ ಮಹಿಳೆಯರು ಸಮಾಜದಲ್ಲಿ ತಮ್ಮ ಸ್ಥಾನವು ಕುಸಿಯುತ್ತಿದೆ ಹಾಗೂ ಇದರ ಬಗ್ಗೆ ಚಿಂತಿಸಬೇಕಾಗಿದೆ ಎನ್ನುತ್ತಾರೆ. ಶೇ. ೧೪ ರಷ್ಟು ಕುಟುಂಬದವರು ಸಮಾಜದಲ್ಲಿ ತಮ್ಮ ಸ್ಥಾನ ಕೀಳರಿಮೆಯಲ್ಲಿದೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಕ್ಷೇತ್ರಕಾರ್ಯದ ಅಂಕಿ-ಅಂಶಗಳಿಂದ ಕಾಣಸಿಗುತ್ತದೆ. ಆಧುನಿಕ ಕುಟುಂಬಗಳಲ್ಲಿ ಸಮಾನತೆ ಬೇಕು ಎಂದು ಹೆಚ್ಚಿನ

ರೀತಿಯಲ್ಲಿ ಮಹಿಳೆಯರು ಕೇಳುತ್ತಿದ್ದಾರೆ. ಕಾರಣ ಇವರೆಲ್ಲ ಶಿಕ್ಷಿತರಾಗಿರುವುದಲ್ಲದೇ ತಮ್ಮ ಗಂಡಂದಿರ ಸರಿಸಮಾನವಾಗಿ ಉದ್ಯೋಗ ಮಾಡಿ ಸಂಬಳ ತರುವಂತವರಾಗಿದ್ದಾರೆ. ಇವರೆಲ್ಲರಿಗೂ ತಮ್ಮ ಸ್ಥಾನಮಾನದ ಅರಿವಿನ ಜ್ಞಾನ ಪಡೆದುಕೊಂಡಿದ್ದಾರೆ. ಈ ಕೋಷ್ಟಕದಲ್ಲಿ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದರೆ ಸರಿಸಮಾನವಾಗಿದೆ ಎಂದು ಹೇಳುವವರ ಸಂಖ್ಯೆಯೇ ಅಧಿಕವಾಗಿದೆ. ಇನ್ನೂ ಉಳಿದವರು ಇನ್ನೂಳಿದ ಹೆಚ್ಚಿನ ಜನರ ಅಭಿಪ್ರಾಯವೆಂದರೆ ಸರಿಸಮಾನವಾಗಿದೆ ಎಂದು ಹೇಳಿದರೂ ನಿಜಾಂಶದಲ್ಲಿ ಮಹಿಳೆಯ ಬದುಕು ಅಧಿಕ ಪ್ರಮಾಣದಲ್ಲಿ ಕುಸಿಯುತ್ತಿದೆ. ಅಲ್ಲದೇ ಹೆಚ್ಚು ಹೆಚ್ಚು ಹೊಸ ಸಮಸ್ಯೆಗಳೇ ಹುಟ್ಟಿಕೊಳ್ಳುತ್ತಿರುವುದರಿಂದಾಗಿ ಸಮಾಜದಲ್ಲಿ ಮಹಿಳೆಗೆ ಕೀಳರಿಮೆ ಇದೆ. ಸಮಾನತೆಗಾಗಿ ಅವರು ಹೋರಾಟ ನಡೆಸುತ್ತಲಿದ್ದಾರೆ.




೫.೨ರ ವೃತ್ತಚಿತ್ರದಲ್ಲಿ ತೋರಿಸುವಂತೆ ಸ್ತೀ ಶಿಕ್ಷಣ ಯಾವ ಹಂತದಲ್ಲಿರಬೇಕು ಎಂಬ ಪ್ರಶ್ನೆಯನ್ನು ಕುಟುಂಬದ ಮಹಿಳೆಯಲ್ಲಿ ಪ್ರಶ್ನಿಸಿದಾಗ ಶೇ. ೬೭ ರಷ್ಟು ಕುಟುಂಬದ ಸ್ತ್ರೀಯರು ಉನ್ನತ, ಉಚ್ಛಮಟ್ಟ, ವೃತ್ತಿ ಪರವಾಗಿರಬೇಕು ಎಂದಾದರೆ, ಶೇ. ೨೪ ರಷ್ಟು ಕುಟುಂಬದ ಮಹಿಳೆ ಯರು ಸ್ತ್ರೀಯರಿಗೆ ಶಿಕ್ಷಣದಲ್ಲಿ ಯಾವುದೇ ರೀತಿಯ ಕಡಿವಾಣಗಳಿರಬಾರದೆಂಬುದಾಗಿದೆ. ಶೇ. ೯ ರಷ್ಟು ಕುಟುಂಬದವರು ಪುರುಷರಿಗೆ ನೀಡುವ ಶಿಕ್ಷಣವನ್ನು ತಮಗೂ ನೀಡಬೇಕು ಎಂಬ ಅಭಿಪ್ರಾಯವನ್ನು ನೀಡಿರುವುದು ಈ ವೃತ್ತಚಿತ್ರದಿಂದ ತಿಳಿದುಬರುತ್ತದೆ. ಈ ಪ್ರಶ್ನೆಯಿಂದ ತಿಳಿದು ಕೊಳ್ಳುವುದೇನೆಂದರೆ ಆಧುನಿಕ ಸಂದರ್ಭಗಳಲ್ಲಿ ಮಹಿಳೆಯರು ಹಳೆಯ ಸಂಪ್ರದಾಯಗಳ ಜೊತೆಗೆ ತಮ್ಮ ಬದುಕನ್ನು ಯಾವ ರೀತಿಯಲ್ಲಿ ರೂಪಿಸಿಕೊಳ್ಳುತ್ತಿದ್ದಾರೆ ಎಂದು ಅರಿತುಕೊಳ್ಳುವುದಾಗಿದೆ. ಈ ವೃತ್ತಚಿತ್ರದಲ್ಲಿ ಮಾಹಿತಿ ನೀಡಿರುವ ಮಹಿಳೆಯರೆಲ್ಲರೂ ತಮ್ಮ ಶಿಕ್ಷಣ ಉನ್ನತ ಮಟ್ಟದಾಗಿರ ಬೇಕು. ಅಲ್ಲದೇ ವೃತ್ತಿಪರವಾಗಿರಬೇಕೆಂದು ಹೇಳುತ್ತಿದ್ದಾರೆ. ಕಾರಣ ಪರಾವಲಂಬಿತ ಜೀವನದಿಂದ

ತತ್ತರಿತರಾಗಿದ್ದಾರೆ. ಪ್ರತಿಯೊಂದಕ್ಕೂ ಗಂಡನನ್ನೇ ಅವಲಂಬಿಸಬೇಕು ತಮಗೆ ತಮ್ಮದೇ ಆದ ಆಲೋಚನೆ ಮಾಡುವ ಶಕ್ತಿ, ಧೈರ್ಯ ಬೇಕು. ಅಲ್ಲದೆ ಆರ್ಥಿಕವಾಗಿ ತಾವು ಮುಂದುವರೆಯ ಬೇಕೆಂಬ ಅಭಿಪ್ರಾಯ ಬಂದಿದ್ದಾರೆ ಈ ಹಿಂದೆ ಕೊಡುತ್ತಿದ್ದ ಶಿಕ್ಷಣ ಮಹಿಳೆಗೆ ಕೇವಲ ಓದು ಬರಹ ತಿಳಿಯುವುದಕ್ಕಾಗಿ ಮಾತ್ರ ಇತ್ತು. ಆದರೆ ಇಂದು ಪ್ರತಿಯೊಂದು ತಾಂತ್ರಿಕ ಶಿಕ್ಷಣ ಪಡೆಯಲು ಪುರುಷರಷ್ಟೇ ಹಕ್ಕು ಮತ್ತು ಅವಕಾಶಗಳು ಮಹಿಳೆಯರಿಗೂ ಒದಗಬೇಕು.




ಈ ಮೇಲ್ಕಾಣಿಸಿದ ೫.೩ರ ವೃತ್ತಚಿತ್ರದಿಂದ ಪತಿಗಿಂತ ಪತ್ನಿ ಹೆಚ್ಚಿಗೆ ಓದುವುದರ ಬಗ್ಗೆ ಅಭಿಪ್ರಾಯಗಳನ್ನು ಕೇಳಿದಾಗ ಅನೇಕ ಕುಟುಂಬದವರು ಶೇ. ೮೪ ರಷ್ಟು ಒಳ್ಳೆಯದು ಪತಿಗಿಂತ ಪತ್ನಿ ಹೆಚ್ಚಿನ ವಿದ್ಯಾಭ್ಯಾಸ ಮಾಡುವುದು ತಪ್ಪೆನಿಲ್ಲಾ ಎಂದಾದರೆ, ಶೇ. ೧೩ ರಷ್ಟು ಕುಟುಂಬದ ಸ್ತ್ರೀಯರು ಪತಿಗಿಂತ ಹೆಚ್ಚಿನ ವ್ಯಾಸಂಗ ಮಾಡಿದರು ಜಂಭ, ಓದದಿದ್ದರು ಕೀಳರಿಮೆ ಇರಬಾರದು ಎಂಬುದಾಗಿದೆ. ಶೇ. ೩ ರಷ್ಟು ಕುಟುಂಬದವರು ಸರಿಸಮನಾಗಿರಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಈ ಮೇಲಿನ ಪ್ರಶ್ನೆಯ ಮೂಲ ಉದ್ದೇಶ ಮಹಿಳೆಯರಿಗೆ ಪುರುಷರಿಗಿಂತ ಜಾಸ್ತಿ ಶಿಕ್ಷಣ ಇರಬೇಕೆ /ಬೇಡವೇ ಎಂದು ಅರಿತುಕೊಳ್ಳುವುದಾಗಿದೆ. ಮಹಿಳೆಯರು ನೀಡಿರುವ ಮಾಹಿತಿಯನ್ನು ಗಮನಿಸಿದರೆ ಹೆಚ್ಚು ಶಿಕ್ಷಣ ಪಡೆಯಬೇಕು ಅದರಿಂದ ತಮ್ಮ ಜ್ಞಾನ ಬೆಳೆಯುತ್ತದೆ ಎಂದು ಯೋಚನೆ ಮಾಡುತ್ತಿದ್ದಾರೆ. ಇನ್ನು ಕೆಲವರ ಅಭಿಪ್ರಾಯವೆಂದರೆ ಅವಳು ಹಾಗೂ ಆತ ಇಬ್ಬರೂ ಸರಿಸಮಾನ ಶಿಕ್ಷಣ ಪಡೆದರೆ ಒಳ್ಳೆಯದು `ಎನ್ನುವ ಅಭಿಪ್ರಾಯಕ್ಕೆ ಬರುತ್ತಾರೆ. ಕಾರಣ ಕೀಳರಿಮೆ ಯಾರಲ್ಲೂ ಬರಬಾರದು ಎನ್ನುತ್ತಾರೆ. . ಓದುವುದು ಹೆಚ್ಚಿನ ರೀತಿಯಲ್ಲಿ ಆದರೆ ಒಬ್ಬರಿಗೊಬ್ಬರು ಅರ್ಥ ಮಾಡಿಕೊಳ್ಳುವಲ್ಲಿ ತೊಂದರೆ ಯಾಗಬಹುದು ಎನ್ನುವ ಭಯಕ್ಕೆ ಒಳಗಾಗು ತ್ತಾರೆ. ಇನ್ನು ಕೆಲವರಂತು ಸಂಪೂರ್ಣ ಸಂಪ್ರದಾಯದ ಚೌಕಟ್ಟಿನಲ್ಲಿ ಇರುವುದರಿಂದಾಗಿ ಇವರು

ಹೇಳುವುದೆಂದರೆ ಓದಿದರು ಜಂಭ, ಓದಿದ್ದರೂ ಕೀಳರಿಮೆ ಭಾವನೆ ಇರಬಾರದು ಎನ್ನುತ್ತಾರೆ. ಒಟ್ಟಾರೆಯಲ್ಲಿ ಇವರೆಲ್ಲರ ಅಭಿಪ್ರಾಯವೆಂದರೆ ಗಂಡನಿಗೆ ಗೌರವ ಕೊಡುವುದು ನಿರಾಕರಿಸಬಾರದು, ಸರಿಸಮಾನವಾಗಿ ಹೊಂದಿಕೊಂಡು ಬಾಳಬೇಕು. ಏನಃ ಕಾರಣ ತಮ್ಮಲ್ಲಿ ಜಗಳ ಮಾಡಿಕೊಳ್ಳದೇ ಕುಟುಂಬ ಯಾವಾಗಲೂ ಸರಿಯಾದ ರೀತಿಯಲ್ಲಿ ಇರಬೇಕು ಎನ್ನುವ ಭಾವನೆ ಹೊಂದಿದ್ದಾರೆ.




ಮೇಲಿನ ೫.೪ರ ವೃತ್ತಚಿತ್ರದಲ್ಲಿ ತೋರಿಸಿರುವಂತೆ ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಅಗತ್ಯತೆ ಎಂಬುದರ ಕುರಿತು ಕುಟುಂಬದ ಮಹಿಳೆಯರಲ್ಲಿ ಪ್ರಶ್ನಿಸಿದಾಗ ಶೇ. ೯೫ ರಷ್ಟು ಕುಟುಂಬದ ಸ್ತ್ರೀಯರು ಆರ್ಥಿಕ ಸ್ವಾತಂತ್ರ್ಯತೆ ಇರಬೇಕು ಎಂದಾದರೆ, ಶೇ. ೫ ರಷ್ಟು ಕುಟುಂಬದವರು ಸ್ವಾತಂತ್ರ್ಯತೆ ಬೇಡ, ಆದರೆ ಮದುವೆಯಾದ ಮೇಲೆ ಇಬ್ಬರ ಜವಾಬ್ದಾರಿ ಇರಬೇಕು ಎನ್ನುವ ರೀತಿಯಲ್ಲಿ ಮಾಹಿತಿಯನ್ನು ನೀಡಿರುವುದು ಕಂಡುಬರುತ್ತದೆ. ಈ ಪ್ರಶ್ನೆಯ ಮೂಲ ಉದ್ದೇಶ ಆರ್ಥಿಕ ಸ್ವಾತಂತ್ರ್ಯತೆ ಅಗತ್ಯತೆ ಎಷ್ಟಿದೇ ಎಂದು ತಿಳಿದುಕೊಳ್ಳುವುದಾಗಿದೆ. ಮಹಿಳೆಯರಿಗೆ ಇಂದಿನ ದಿನಗಳಲ್ಲಿ ಆರ್ಥಿಕತೆ ಅಗತ್ಯ ತುಂಬಾ ಇದೆ ಎನ್ನುವ ಅಭಿಪ್ರಾಯಕ್ಕೆ ಎಲ್ಲರೂ ಒಪ್ಪಿಕೊಳ್ಳುತ್ತಿದ್ದಾರೆ. ಆಧುನಿಕ ಸಮಾಜದಲ್ಲಿ ಯಾವುದೇ ವ್ಯಕ್ತಿಯೂ ತಾನು ಸ್ವತಂತ್ರವಾಗಿ ಬದುಕಬೇಕಾದರೆ, ಆರ್ಥಿಕವಾಗಿ ಸ್ವತಂತ್ರ ಬೇಕೆ ಬೇಕು. ಪರಾವಲಂಬಿತನದಿಂದ ಬದುಕುತ್ತಿದ್ದರೆ ತಮಗೂ ತಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಬೇಕು. ತಮ್ಮ ಸ್ಥಾನಮಾನ ಗುರುತಿಸಿಕೊಳ್ಳಬೇಕು ಎನ್ನುವ ಅಭಿಪ್ರಾಯ ಪ್ರತಿಯೊಬ್ಬರಲ್ಲಿಯೂ ಇರಲೇ ಬೇಕು. ಕಾರಣ ಇಂದಿನ ಸಮಾಜದಲ್ಲಿ ವ್ಯಕ್ತಿಗಳನ್ನು ಗುರುತಿಸುತ್ತಿರುವುದು ಗುಣದಿಂದಲ್ಲ ಅವರ ಶ್ರೀಮಂತಿಕೆಯನ್ನು. ಹೀಗಾಗಿಯೇ ಹಣ ಯಾವ ವ್ಯಕ್ತಿಯಲ್ಲಿ ಇರುತ್ತದೆಯೋ ಅವರಿಗೆ ಸಮಾಜದಲ್ಲಿ ಅತೀ ಹೆಚ್ಚಿನ ಗೌರವ ಬೆಲೆ ನೀಡುತ್ತಿದ್ದಾರೆ. ಆದ್ದರಿಂದಾಗಿಯೇ ಮಹಿಳೆಯರು ಇಂದಿಗೂ ತಮ್ಮನ್ನು ತಾವು ಗುರುತಿಸಿಕೊಳ್ಳುವಲ್ಲಿ ತುಂಬಾ ಹಿಂದೆ ಬಿಳುವುದಾಗಿದೆ. ಆದರೆ ಈಗ ಎಲ್ಲರೂ ತಮ್ಮ ತಮ್ಮ ವಿಚಾರಗಳಿಂದ ಜ್ಞಾನದ ಅರಿವು ಪಡೆದಿದ್ದಾರೆ.

ಮುಂದಿನ ೫.೫ರ ವೃತ್ತಚಿತ್ರದಲ್ಲಿ ತೋರಿಸಿರುವ ಶೇಕಡವಾರು ಪ್ರಮಾಣದಲ್ಲಿ ಸ್ತ್ರೀ ಪುರುಷನಿಗಿಂತ ಹೆಚ್ಚಿನ ಉದ್ಯೋಗದಲ್ಲಿ ಇರುವ ಕುರಿತು ಪ್ರಶ್ನಿಸಿದಾಗ ಮೇಲಿನಂತೆ ಶೇ. ೪೯

ವೃತ್ತಚಿತ್ರ: ೫.೫ ಸ್ತ್ರೀ ಪುರುಷನಿಗಿಂತ ಹೆಚ್ಚಿನ ಉದ್ಯೋಗದಲ್ಲಿ ಇರುವ ಕುರಿತು




ರಷ್ಟು ಕುಟುಂಬದ ಮಹಿಳೆಯರು ಉದ್ಯೋಗದಲ್ಲಿ ಹೆಚ್ಚಿನ ಸ್ಥಾನದಲ್ಲಿದ್ದಾರೆ, ಸಾಮಾಜಿಕ ಗೌರವ ಹೆಚ್ಚಾಗುವುದಾಗಿರುತ್ತದೆ ಎಂದಾದರೆ, ಶೇ. ೩೭ ರಷ್ಟು ಕುಟುಂಬದ ಸ್ತ್ರೀಯರು ಆರ್ಥಿಕ ಬಲ ಕುಟುಂಬಕ್ಕೆ ಅನುಕೂಲವಾಗಿರುವುದಾಗಿ ತಿಳಿಸಿದರೆ, ಶೇ. ೧೪ ರಷ್ಟು ಕುಟುಂಬದವರು ಕಡಿಮೆ ದರ್ಜೆಯ ಉದ್ಯೋಗದಲ್ಲಿದ್ದರೆ ಜೀವನ ನೆಮ್ಮದಿಯಾಗಿರುತ್ತದೆ ಎಂಬ ತಮ್ಮ ಅಭಿಪ್ರಾಯಗಳನ್ನು ಕ್ಷೇತ್ರಕಾರ್ಯದಲ್ಲಿ ನೀಡಿರುವುದಾಗಿ ನಾವು ಕಾಣಬಹುದಾಗಿದೆ. ಈ ಹಿಂದೆ ಮಹಿಳೆಯರು ಪುರುಷರಿಗಿಂತ ಕಡಿಮೆ ದರ್ಜೆಯ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಇರುತ್ತಿದ್ದರು. ಕಾರಣ ಮಹಿಳೆಯರಿಗೆ ಮನೆಯಿಂದ ಹೊರಗೆ ಕಳುಹಿಸಲು ಯಾರು ಇಷ್ಟಪಡುತ್ತಿರಲಿಲ್ಲ. ಆದರೆ ಆಧುನಿಕ ಸಂದರ್ಭದಲ್ಲಿ ಬದಲಾವಣೆಗೆ ಅನುಗುಣವಾಗಿ ಪರವರ್ತನೆಯಾಗುತ್ತಿರುವುದರಿಂದ ಅವರ ಅಭಿಪ್ರಾಯ ಅರಿತುಕೊಳ್ಳುವುದಾಗಿದೆ. ಹೆಚ್ಚಿನಮಹಿಳೆಯರ ಹೇಳಿಕೆ ಎಂದರೆ ಸಾಮಾಜಿಕ ಗೌರವ ಹೆಚ್ಚಾಗುವುದು ಅಲ್ಲದೇ ಮನೆಯಲ್ಲಿ ಆರ್ಥಿಕ ಬಲ ಕುಟುಂಬಕ್ಕೆ ಅನುಕೂಲವಾಗುವುದು ಎಂದು ಹೇಳಿದವರೆಲ್ಲರೂ ಜ್ಞಾನದ ಅರಿವನ್ನು ಪಡೆದುಕೊಂಡಿದ್ದಾರೆ. ಇನ್ನೂಳಿದವರು ಸಹ ಶಿಕ್ಷಣ, ಉದ್ಯೋಗ ಮಾಡುತ್ತ ಲಿದ್ದರೂ ಸಹ ಇವರೂ ಇನ್ನು ಸಂಪ್ರದಾಯಗಳನ್ನು ಸಂಪೂರ್ಣ ಬಿಡಲು ಆಗದೇ ಇರುವುದ ರಿಂದಾಗಿಯೇ ಕಡಿಮೆ ದರ್ಜೆಯ ಉದ್ಯೋಗದ ದಲ್ಲಿ ಮಹಿಳೆಯರು ಇದ್ದರೆ, ನೆಮ್ಮದಿಯ ಜೀವನ ಆಗಿರುತ್ತದೆ ಎನ್ನುತ್ತಾರೆ. ಕುಟುಂಬದಲ್ಲಿ ಒಬ್ಬರನ್ನೊಬ್ಬರು ಪರಸ್ಪರ ಅರ್ಥ ಮಾಡಿಕೊಂಡು ಹೋದರೆ ಕುಟುಂಬದಲ್ಲಿ ಕಲಹ ಬರುವುದಿಲ್ಲ. ಆದರೂ ಒಬ್ಬರು ಹೆಚ್ಚಿನ ಹುದ್ದೆಯಲ್ಲಿ ಇದ್ದು ಇನ್ನೊಬ್ಬರು ಕಡಿಮೆಯಲ್ಲಿ ಇದ್ದರೆ ಹೊಂದಿಕೊಂಡು ಬಾಳುವುದು ಕಷ್ಟಕರ. ಅದರಲ್ಲೂ

ಮಹಿಳೆಯರು ಹೆಚ್ಚಿನ ಪ್ರಮಾಣದ ಉದ್ಯೋಗದಲ್ಲಿ ಇದ್ದರೆ ತನ್ನ ಗಂಡನ ಪ್ರತಿಷ್ಠೆ ಕಡಿಮೆಯಾಗ ಬಹುದು ಎಂಬ ಅಭಿಪ್ರಾಯಕ್ಕೆ ಬರುತ್ತಾರೆ.




೫.೬ ಎ ವೃತ್ತಚಿತ್ರದಲ್ಲಿ ತವರು ಮನೆಯ ಆಸ್ತಿಯನ್ನು ಕುರಿತು ಕುಟುಂಬದ ಮಹಿಳೆಯರಲ್ಲಿ ಪ್ರಶ್ನಿಸಿದಾಗ ಶೇ. ೭೧ ರಷ್ಟು ಕುಟುಂಬದ ಸ್ತ್ರೀಯರು ತವರು ಮನೆಯ ಆಸ್ತಿಯನ್ನು ನಿರಾಕರಿಸುತ್ತಾರೆ. ಆದರೆ, ಶೇ. ೨೯ ರಷ್ಟು ಕುಟುಂಬದ ಮಹಿಳೆಯರು ತವರು ಮನೆಯ ಆಸ್ತಿಯನ್ನು ನೀಡಬೇಕು ಎನ್ನುವ ಅಭಿಪ್ರಾಯವನ್ನು ನೋಡಬಹುದಾಗಿದೆ. ಈ ಪ್ರಶ್ನೆ ಕೇಳಿರುವ ಉದ್ದೇಶವೆಂದರೆ ಆಧುನಿಕ ಸಂದರ್ಭದಲ್ಲಿ ಎಲ್ಲ ಮಹಿಳೆಯರು ಶಿಕ್ಷಿತರಾಗುವುದಲ್ಲದೇ ಪ್ರತಿಯೊಂದರಲ್ಲಿ ತಾರತಮ್ಯ ಬೇಡ ಎನ್ನುವ ಅಭಿಪ್ರಾಯಕ್ಕೆ ಬರುತ್ತಿರುವುದು ಕಾಣಬಹುದಾಗಿದೆ. ಸರ್ಕಾರವು ಕೂಡಾ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರಿಗೂ ಹಕ್ಕು ಕೊಡಬೇಕು ಎಂಬ ಕಾನೂನು ಜಾರಿಯಲ್ಲಿ ಹೊರಡಿಸಿದರೂ ಅದರ ಲಾಭ ಎಷ್ಟು ಮಂದಿ ಪಡೆದುಕೊಳ್ಳುತ್ತಿದ್ದಾರೆಂದು ತಿಳಿದುಕೊಳ್ಳುವುದಾಗಿದೆ. ಹಿಂದಿನಿಂದಲೂ ಸಂಪ್ರದಾಯಗಳು ಮಹಿಳೆಯನ್ನು ಬೆಳೆಸಿರುವುದೇನೆಂದರೆ "ಕೊಟ್ಟ ಹೆಣ್ಣು ಕುಲದಿಂದ ಹೊರಗೆ" ಎಂದರೆ ತವರು ಮನೆಯ ಅಧಿಕಾರವನ್ನು ಕಳೆದುಕೊಳ್ಳಬೇಕು. ಹೀಗಾಗಿಯೇ ಅದೇ ಸಂಪ್ರದಾಯ ಗಳನ್ನು ಮಹಿಳೆಯರು ಇನ್ನೂ ಮುಂದುವರೆಸಿಕೊಂಡು ಹೋಗುತ್ತಿರುವುದರಿಂದಾಗಿಯೇ ತವರು ಮನೆಯ ಆಸ್ತಿ ಬೇಡ ಎನ್ನುವ ಅಭಿಪ್ರಾಯಕ್ಕೆ ಬರುತ್ತಿದ್ದಾರೆ. ಇನ್ನೂಳಿದವರು ತವರು ಮನೆಯ ಆಸ್ತಿ ಬೇಕೆನ್ನುವರು ಸಂಪೂರ್ಣ ಜ್ಞಾನ ಪಡೆಯುತ್ತಿರುವುದರಿಂದಾಗಿ ತಾವು ಆ ಮನೆಯಲ್ಲಿಯೆ ಹುಟ್ಟಿ ಬೆಳೆದವರು ನಮಗೂ ಅಲ್ಲಿ ಹಕ್ಕಿದೆ ಎನ್ನುತ್ತಾರೆ. ಒಟ್ಟಾರೆಯಲ್ಲಿ ಗಂಡನ ಮನೆಯಲ್ಲಿ ಚೆನ್ನಾಗಿ ಇರುವ ಮಹಿಳೆಯರೆಲ್ಲರೂ ತವರು ಮನೆಯ ಆಸ್ತಿ ತಮಗೆ ಬೇಡವೆಂದೇ ಹೇಳುತ್ತಾರೆ.

ಹಾಗೆಯೇ ೫.೬ ಬಿ ವೃತ್ತಚಿತ್ರದಿಂದ ಗಂಡನ ಮನೆ ಆಸ್ತಿಯ ಕುರಿತು ಕುಟುಂಬದ

ಮಹಿಳೆಯರಲ್ಲಿ ಪ್ರಶ್ನಿಸಿದಾಗ ಕ್ಷೇತ್ರಕಾರ್ಯದ ಮಾಹಿತಿಯಂತೆ ಶೇ. ೯೧ ರಷ್ಟು ಕುಟಂಬದ ಸ್ತ್ರೀಯರು ಗಂಡನ ಮನೆಯ ಆಸ್ತಿಯನ್ನು ಬೇಕು ಎಂದಾದರೆ, ಶೇ. ೯ ರಷ್ಟು ಕುಟುಂಬದವರು ಗಂಡನ ಮನೆಯ ಆಸ್ತಿಯನ್ನು ನಿರಾಕರಿಸುವುದಾಗಿ ತಮ್ಮ ಅಭಿಪ್ರಾಯವನ್ನು ನೀಡಿರುವುದನ್ನು ನಾವು ವೃತ್ತಚಿತ್ರದಿಂದ ಕಾಣಬಹುದು. ಈ ಪ್ರಶ್ನೆಯ ಉದ್ದೇಶ ಮಹಿಳೆಯರು ಆಧುನಿಕ ಸಂದರ್ಭದಲ್ಲಿ




ಗಂಡನ ಮನೆಯ ಆಸ್ತಿಯನ್ನು ಹೇಗೆ ಸ್ವೀಕರಿಸಿಕೊಳ್ಳುತ್ತಿದ್ದಾಳೆ ಎಂದು ಅರಿತುಕೊಳ್ಳುವುದಾಗಿದೆ. ಈ ಹಿಂದೆ ಮಹಿಳೆ ಯರಿಗೆ ಅಂತ ಆಸ್ತಿ ಇರುತ್ತಿರಲಿಲ್ಲ. ಗಂಡನ ಮನೆಯ ಆಸ್ತಿಯಾದರೂ ಪಿತೃಪ್ರಧಾನ ಸಮಾಜದಲ್ಲಿ ತಂದೆಯಿಂದ ಮಗನಿಗೆ ವರ್ಗಾವಣೆಯಾಗುತ್ತಿದೆ. ಪ್ರತ್ಯೇಕ್ಷವಾಗಿ ತನ್ನ ಗಂಡನ ಆಸ್ತಿ ಅವಳ ಹೆಸರಿನಲ್ಲಿ ಇರುವುದಿಲ್ಲ. ಗಂಡನ ಮನೆಯ ಸೇರಿದ ಪ್ರತಿಯೊಬ್ಬರ ಅಭಿಪ್ರಾಯವೆಂದರೆ ಈ ಮನೆಯಲ್ಲಿ ತಾವು ಕೊನೆಯವರೆಗೂ ಬದುಕಿಬಾಳಬೇಕಾಗಿದೆ ಹೀಗಾಗಿಯೇ ತಮಗೆ ತಮ್ಮ ಗಂಡನ ಮನೆಯ ಆಸ್ತಿ ಬೇಕೇ ಬೇಕು ಎನ್ನುವ ಅಭಿಪ್ರಾಯಕ್ಕೆ ಬರುತ್ತಿದ್ದಾರೆ. ಗಂಡನ ಮನೆಯ ಆಸ್ತಿ ವಂಶಾಭಿವೃದ್ಧಿಗಾಗಿಯಾದರೂ ಬೇಕು ಎನ್ನುತ್ತಾರೆ. ಗಂಡನ ಮನೆಯ ಆಸ್ತಿ ಬೇಡ ಎನ್ನುವವರು ತಮಗೆ ಅಂಥ ಎಲ್ಲಿಯೂ ಆಸ್ತಿ ಇರುವುದಿಲ್ಲ. ತಾನು ಇರುವವರೆಗೂ ತನ್ನ ಗಂಡನ ಮನೆಯವರ ಏಳಿಗಾಗಿ ದುಡಿಯುವೇ ನಂತರ ತನ್ನ ಉದ್ಯೋಗದ ಆಸ್ತಿಯೆಲ್ಲವು ಮಕ್ಕಳಿಗೆ, ಗಂಡನಿಗೆ ಆಗುತ್ತದೆ. ಇರುವವರೆಗೂ ತನಗೆ ಸರಿಯಾಗಿ ನೋಡಿಕೊಂಡರೆ ಅಷ್ಟೇ ಸಾಕು ಎನ್ನುತ್ತಾರೆ.

೫.೭ರ ವೃತ್ತಚಿತ್ರದಲ್ಲಿ ನೀಡಿರುವ ಮಾಹಿತಿಯಂತೆ ಕುಟುಂಬದ ಆಸ್ತಿ ಇಬ್ಬರ ಹೆಸರಿನಲ್ಲಿ ಇರುವುದರ ಕುರಿತು ಕುಟುಂಬದವರಲ್ಲಿ ಪ್ರಶ್ನಿಸಿದಾಗ ಶೇ. ೯೭ ರಷ್ಟು ಕುಟುಂಬದ ಮಹಿಳೆಯರು ಒಳ್ಳೆಯದು ಹಾಗೂ ಉತ್ತಮವಾಗಿರುತ್ತದೆ ಎಂಬ ಅಭಿಪ್ರಾಯವಾದರೆ, ಶೇ. ೩ ರಷ್ಟು ಕುಟುಂಬ




ದವರು ಅವರ ಹೆಸರಿನಲ್ಲಿದ್ದಾರೆ ಸಾಕು ಎಂಬುದನ್ನು ಕೇತ್ರಕಾರ್ಯದ ಮಾಹಿತಿಯಲ್ಲಿ ವ್ಯಕ್ತಪಡಿಸಿ ರುವುದಾಗಿರುವುದು ಕಂಡುಬರುತ್ತದೆ. ಈ ಪ್ರಶ್ನೆಯ ಉದ್ದೇಶ ಆಧುನಿಕ ಕುಟುಂಬಗಳಲ್ಲಿ ಮಹಿಳೆಯು ಪ್ರತಿಯೊಂದರಲ್ಲಿ ಮುಂದೆ ಬರುತ್ತಿದ್ದಾಳೆ. ಪ್ರತಿಯೊಂದು ಕ್ಷೇತ್ರದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಆದರೂ ಅವರು ತಾವು ಪುರುಷರಿಗಿಂತಲೂ ಕಡಿಮೆಯ ಸಾಮರ್ಥ್ಯವನ್ನು ಹೊಂದಿದವರೆಂದೇ ಭಾವಿಸಿ ಕೊಳ್ಳುತ್ತಿದ್ದಾರೆ. ಕಾರಣ ಮೂಲದಿಂದಲೂ ಅವಳ ತಲೆಯಲ್ಲಿ ಹಿರಿಯರು ಭಿತ್ತಿರುವ ತರಬೇತಿ ಇನ್ನು ಸಂಪೂರ್ಣವಾಗಿ ಹೋಗುತ್ತಿಲ್ಲ. ಜ್ಞಾನವೇನು ಪಡೆದಿದ್ದಾರೆ ಆದರೆ ಆಸ್ತಿಯ ವಿಷಯ ವಿರಲಿ ಕುಟುಂಬದ ಯಾವುದೇ ವಿಷಯದಲ್ಲೂ ಸ್ವಂತ ಅಭಿಪ್ರಾಯ ನಿರ್ಧಾರ ತೆಗೆದುಕೊಳ್ಳಲು ಹಿಂದೇಟು ಹಾಕುತ್ತಿದ್ದಾರೆ. ಪುರುಷರಿಗಿಂತಲೂ ಇವಳು ಹೆಚ್ಚಿನ ಶ್ರಮವಹಿಸಿ ಕೆಲಸ ನಿರ್ವಹಿಸಿದರೂ ಕುಟುಂಬದ ಕೆಲಸಕ್ಕೆ ಯಾವ ಆದಾಯವು ಇಲ್ಲದಿರುವುದರಿಂದಾಗಿಯೇ ಅವಳು ತನ್ನ ಸಾಮರ್ಥ್ಯ ಕಡಿಮೆ ಎಂಬ ಅಭಿಪ್ರಾಯಕ್ಕೆ ಒಪ್ಪಿಕೊಳ್ಳುವಂತೆ ಈ ಸಮಾಜ ನಿರ್ಮಾಣಮಾಡಿಬಿಟ್ಟಿರುತ್ತದೆ. ಹೀಗಾಗಿಯೇ ಅವರು ಸಹ ಅದನ್ನು ಒಪ್ಪಿಕೊಂಡೆ ನಡೆಯುವಂಥ ಸ್ಥಿತಿ ಇದೆ.



೫.೮ರ ವೃತ್ತಚಿತ್ರದಲ್ಲಿ ಸ್ತ್ರೀ-ಪುರುಷನಿಗಿಂತ ಕಡಿಮೆ ಸಾಮರ್ಥ್ಯವನ್ನು ಹೊಂದಿರುತ್ತಾಳೆ ಕುರಿತು ಕುಟುಂಬದ ಮಹಿಳೆಯರಲ್ಲಿ ಅಭಿಪ್ರಾಯವನ್ನು ಸಂಗ್ರಹಿಸಿದಾಗ. ಶೇ. ೫೨ ರಷ್ಟು ಕುಟುಂಬದ ಸ್ತ್ರೀಯರು ಇಲ್ಲ, ತಾವು ಕುಟುಂಬದ ಕಣ್ಣಾಗಿರುವುದಾಗಿ ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದರೆ, ಶೇ. ೪೮ ರಷ್ಟು ಕುಟುಂಬದ ಮಹಿಳೆಯರು ಹೌದು, ದೈಹಿಕ ಬಲದಿಂದ ನಾವು ಪುರುಷನಿಗಿಂತ ಕಡಿಮೆ ಸಾಮರ್ಥ್ಯವನ್ನು ಹೊಂದಿರುವುದಾಗಿ ಅಭಿಪ್ರಾಯವನ್ನು ನೀಡಿದ್ದಾರೆ. ಈ ಪ್ರಶ್ನೆಗೆ ಮಹಿಳೆಯರ ಹೇಳಿಕೆ ನೋಡಿದರೆ ಸಾಮರ್ಥ್ಯವೇನು ಕಡಿಮೆ ಇಲ್ಲ. 'ಆದರೂ ದೈಹಿಕ ಬಲದಿಂದ ಆಗಿ ತಮ್ಮನ್ನು ಕಡಿಮೆ ಎಂದು ಒಪ್ಪುವ ರೀತಿಯಲ್ಲಿ ಸಮಾಜ ನಿರ್ಮಾಣ ಮಾಡಿರುವುದರಿಂದಾಗಿಯೇ ತಾವು ಅದನ್ನು ಒಪ್ಪಿಕೊಂಡು ಬಾಳುವಂತಾಗಿದೆ ಎನ್ನುತ್ತಾರೆ. ಸೃಷ್ಟಿಯ ರಚನೆಗೆ ಮಹಿಳೆಯೇ ಕಾರಣ, ಕುಟುಂಬದ ಏಳಿಗೆಗೆ, ಮಕ್ಕಳ ಭವಿಷ್ಯಕ್ಕೆ ಅವಳು ಕಣ್ಣಾಗಿರುತ್ತಾಳೆ. ಹಾಗಾಗಿ ಯಾರು ಯಾವುದರಲ್ಲೂ ಕಡಿಮೆ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಕೇವಲ ದೈಹಿಕ ಬಲದಿಂದ ಮಾತ್ರ ಮಹಿಳೆ ಪುರುಷನಿಗಿಂತ ಕಡಿಮೆ ಸಾಮರ್ಥ್ಯವನ್ನು ಹೊಂದಿದ್ದರಿಂದ ಮಹಿಳೆ ಪುರುಷನಿಗಿಂತ ಎಲ್ಲಾ ವಿಷಯದಲ್ಲಿ ಕಡಿಮೆ ಸಾಮರ್ಥ್ಯವನ್ನು ಹೊಂದಿರುತ್ತಾಳೆ ಎಂದು ಹೇಳುವುದು ಸರಿಯಾದ ಉತ್ತರವಲ್ಲ. ಮಾನಸಿಕವಾಗಿ ಪುರುಷನಷ್ಟೇ ಸಮರ್ಥಳು. ಪುರುಷರು ಮಾಡುವ ಎಲ್ಲಾ ಕೆಲಸಗಳನ್ನು ಇಂದು ಮಹಿಳೆಯರು ಮಾಡುತ್ತಿದ್ದಾರೆ. ಯಾವುದರಲ್ಲೂ ತಾವು ಕಡಿಮೆಯಿಲ್ಲ ಎನ್ನುವ ರೀತಿಯಲ್ಲಿ ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಸಾಧನೆಯನ್ನು ಮಾಡಿ ತೋರಿಸುತ್ತಿದ್ದಾರೆ. ಈ ಹಿಂದಿನ ದಿನಗಳಲ್ಲಿ ಹೊರಗಡೆ ಹೋಗದಿರುವುದರಿಂದ ಕಡಿಮೆ ಸಾಮರ್ಥ್ಯ ಹೊಂದಿದ್ದಾಳೆ ಎಂದರೆ ಒಪ್ಪಿಕೊಳ್ಳುತ್ತಿದ್ದರು. ಆದರೆ ಆಧುನಿಕ ಸಂದರ್ಭದಲ್ಲಿ ಪುರುಷನಷ್ಟೇ ದುಡಿಯುತ್ತಾಳೆ.



೩.೯ರ ವೃತ್ತಚಿತ್ರದಲ್ಲಿ ಕೇಳಿರುವಂತೆ ಪುರುಷನಿಗಿಂತ ಕಡಿಮೆ ಸಾಮರ್ಥ್ಯ ಹೊಂದಿದ್ದಾರೆಯೇ ಅಥವಾ ಹೊಂದಿಲ್ಲವೇ ಎಂದಾದರೆ ಕುರಿತು ನಿಮ್ಮ ಅಭಿಪ್ರಾಯ ಏನಾಗಿದೆ ಎಂದು ಪ್ರಶ್ನಿಸಿದಾಗ. ಶೇ. ೩೩ ರಷ್ಟು ಕುಟುಂಬದ ಮಹಿಳೆಯರು ಆತ್ಮ ಸಾಕ್ಷಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಳೆ ಎಂಬ ಅಭಿಪ್ರಾಯವಾದರೆ, ಶೇ. ೨೭ ರಷ್ಟು ಕುಟುಂಬದ ಸ್ತ್ರೀಯರು ಸ್ತ್ರೀ ಮತ್ತು ಪುರುಷರ ನಡುವೆ ಸರಿಸಮಾನವಾಗಿದೆ ಎಂಬ ಅನಿಸಿಕೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ, ಶೇ. ೨೦ ರಂತೆ ಎರಡು ವರ್ಗದ ಕುಟುಂಬದವರು ಪುರುಷನಷ್ಟೇ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ ಎಂದಾದರೆ, ಮತ್ತೊಂದು ವರ್ಗವು ಮಹಿಳೆಯು ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿದ್ದಾಳೆ ಎಂಬ ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿರುವುದು ವೃತ್ತಚಿತ್ರದಿಂದ ಕಾಣಬಹುದಾಗಿದೆ. ಈ ಪ್ರಶ್ನೆಯ ಕೇಳುವ ಮೂಲ ಉದ್ದೇಶ ಆಧುನಿಕ ಕುಟುಂಬದ ಮಹಿಳೆಯರೆಲ್ಲರೂ ತಾವು ಎಲ್ಲ ರೀತಿಯಲ್ಲಿಯೂ ಮುಂದುವರೆಯುತ್ತಿರುವುದರಿಂದಾಗಿ ಈ ಪ್ರಶ್ನೆಗೆ ಅವರೆಲ್ಲರ ಉತ್ತರವು ತಾವು ಸಾಮರ್ಥ್ಯವನ್ನು ಕಡಿಮೆ ಹೊಂದಿಲ್ಲ. ಇನ್ನು ಹೆಚ್ಚಿಸಿಕೊಳ್ಳುತ್ತಿದ್ದೇವೆ. ಆತ್ಮ ಸಾಕ್ಷಿಯಿಂದ ತಮ್ಮ ಕಾರ್ಯದಲ್ಲಿ ಕೆಲಸಗಳನ್ನು ನಿರ್ವಹಿಸುತ್ತಿದ್ದೇವೆ. ಸ್ತ್ರೀ-ಪುರುಷರ ನಡುವೆ ಸರಿಸಮಾನವಾಗಿ ಜವಾಬ್ದಾರಿಗಳನ್ನು ನಿರ್ವಹಿಸುತ್ತಿರುವ ಸಂದರ್ಭದಲ್ಲಿ ತಾವು ಪುರುಷರಿಗಿಂತ ಕಡಿಮೆ ಸಾಮರ್ಥ್ಯವನ್ನು ಪಡೆದಿಲ್ಲ ಎನ್ನುವ ಅಭಿಪ್ರಾಯಕ್ಕೆ ಬರುತ್ತಿದ್ದಾರೆ. ಆರ್ಥಿಕ ಸ್ವಾವಲಂಬನೆ ಇದ್ದರೆ ಕೌಟುಂಬಿಕ ವಿಷಯದ ವ್ಯವಹಾರಗಳು ಚೆನ್ನಾಗಿ ನಡೆಯುತ್ತದೆ. ಪ್ರತಿಯೊಂದಕ್ಕೂ ಗಂಡನಿಗೆ ಹಣ ಕೇಳುವುದು ಸರಿಯಲ್ಲ. ಆ ಸ್ವಾತಂತ್ರ್ಯ ಇದ್ದರೆ ಒಳ್ಳೆಯ ಜೀವನ ನಡೆಸಬಹುದು. ಪ್ರಸ್ತುತ ಸಮಾಜದಲ್ಲಿ ಸ್ತ್ರೀಯರು ಪರಾವಲಂಬನೆಗೆ ಒಳಗಾಗದೆ ಸ್ವತಂತ್ರವಾಗಿ ಬದುಕಲು ಇಷ್ಟಪಡುತ್ತಾರೆ. ಸಂಸಾರದ ನಿರ್ವಹಣೆ ಸರಿಯಾದ ರೀತಿಯಲ್ಲಿ ನಿರ್ವಹಿಸುವವಳೇ ಮಹಿಳೆ. ಕೆಲವಸ್ತುಗಳನ್ನು ಖರೀದಿಸುವುದು ಮಹಿಳೆಯರಿಗೆ ಅಗತ್ಯವಾಗಿರುತ್ತದೆ.



೫.೧೧ರ ವೃತ್ತಿಚಿತ್ರದಲ್ಲಿ ತೋರಿಸಿರುವಂತೆ ಮಹಿಳೆಯರಿಗೆ ಮೀಸಲಾತಿ ಇರುವುದರ ಕುರಿತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುಟುಂಬಗಳಿಗೆ ಪ್ರಶ್ನಿಸಿದಾಗ ಶೇ. ೮೪ ರಷ್ಟು ಕುಟುಂಬದ ಮಹಿಳೆಯರು ಹೌದು, ಮಹಿಳೆಯರಿಗೆ ಮೀಸಲಾತಿ ಇರಬೇಕು ಎಂದಾದರೆ, ಶೇ. ೧೬ ರಷ್ಟು ಕುಟುಂಬದ ಸ್ತ್ರೀಯರು ಮೀಸಲಾತಿ ಇರುವುದು ಬೇಡ ಎನ್ನುವವರಾಗಿದ್ದಾರೆ ಎಂಬ ಅಭಿಪ್ರಾಯವನ್ನು ಕಾಣಬಹುದಾಗಿದೆ. ಈ ಪ್ರಶ್ನೆಗು ಉದ್ದೇಶ ಪ್ರತಿಯೊಂದು ಕ್ಷೇತ್ರದಲ್ಲಿಯೂ ಮಹಿಳೆಯರು ಇಂದು ಮುಂದುವರೆಯುತ್ತಿವಾಗ ರಾಜಕೀಯ ಕ್ಷೇತ್ರದಲ್ಲಿ ಏಕೆ ಮೀಸಲಾತಿ ಇರಬಾರದು ಮೀಸಲಾತಿ ಸರ್ಕಾರ ಕೇವಲ ಶೇ. ೩೩ ರಷ್ಟು ಮಾತ್ರ ನೀಡಿದೆ. ಇನ್ನು ಶೇ. ೫೦ ರಷ್ಟು ನೀಡುವಂತೆ ಆಗಬೇಕು ಎನ್ನುತ್ತಾರೆ. ಮೀಸಲಾತಿ ಬೇಕು ಎನ್ನುವವರೆಲ್ಲರೂ ತಾವು ಯಾವುದರಲ್ಲೂ ಕಡಿಮೆ ಇಲ್ಲ. ಶಿಕ್ಷಿತರು ಉದ್ಯೋಗಸ್ಥರು ಅಲ್ಲದೇ ತಮಗೂ ಜ್ಞಾನವಿದೆ. ಪುರುಷರು ರಾಜಕೀಯದಲ್ಲಿ ಇದ್ದರೆ ನಿಷ್ಠೆಯಿಂದ ಪ್ರಾಮಾಣಿಕವಾಗಿ ದುಡಿಯುವುದಿಲ್ಲ. ಮಹಿಳೆಯರಿಗಾದರೆ ಯಾವುದೇ ದುಶ್ಚಟಗಳು ಇರುವುದಿಲ್ಲ. ಅನಾವಶ್ಯಕವಾಗಿ ಹಣ ಖರ್ಚು ಮಾಡಲು ಇಚ್ಛಿಸುವುದಿಲ್ಲ. ಮಿತವಾಗಿ ಕಾರ್ಯನಿರ್ವಹಿಸುತ್ತಾರೆ. ದಕ್ಷತೆಯಿಂದ ದುಡಿಯುವುದಾಗಿ ತಿಳಿಸುತ್ತಾರೆ. ರಾಜಕೀಯದಲ್ಲಿ ಮೀಸಲಾತಿ ಬೇಡ ಎನ್ನುವವರೆಲ್ಲರೂ ತಮಗೆ ಕುಟುಂಬದಲ್ಲಿಯೇ ಸರಿಯಾದ ಅಧಿಕಾರ ಇಲ್ಲದಿರುವ ಸಂದರ್ಭದಲ್ಲಿ ರಾಜಕೀಯದಲ್ಲಿ ಅಧಿಕಾರ ಪಡೆಯಲು ಈ ಸಮಾಜ ಒಪ್ಪುವುದಿಲ್ಲ. ಅಲ್ಲದೇ ಆರ್ಥಿಕವಾಗಿ ಮಹಿಳೆಯರಿಗೆ ಯಾವುದೇ ಅಧಿಕಾರ ಸಿಗುತ್ತಿಲ್ಲ.

ಈ ಪ್ರಶ್ನೆಯ ಉದ್ದೇಶ ಮೀಸಲಾತಿ ಬೇಕು ಎನ್ನುವುದಕ್ಕೆ ಮಹಿಳೆಯರು ನೀಡಿರುವ ಮಾಹಿತಿ ಯನ್ನು ತಿಳಿದುಕೊಳ್ಳುವುದಾಗಿದೆ. ಮೀಸಲಾತಿ ನೀಡಿದರೆ ಮಹಿಳೆಯರಿಗೆ ಆರ್ಥಿಕವಾಗಿ ಸಾಮಾಜಿಕವಾಗಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ಧೈರ್ಯದಿಂದ ಮುಂದುವರೆಯಲು ಅನುಕೂಲವಾಗುತ್ತದೆ. ಸಮಾಜ ದಲ್ಲಿ ತಮಗೂ ಒಂದು ವ್ಯಕ್ತಿತ್ವವಿದೆ ಎಂದು ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಅಲ್ಲದೇ ಗೌರವ ಮನ್ನಣೆಯು ದೊರೆಯುತ್ತದೆ. ಮೀಸಲಾತಿಯ ಇಲ್ಲದಿದ್ದರೆ ಸಮಾಜದಲ್ಲಿ ಸಮಾನತೆ ಹೇಗೆ ಬರುತ್ತದೆ. ಸಮಾನತೆಯನ್ನು ಪಡೆಯಬೇಕಾದರೆ ಮೀಸಲಾತಿ ಬೇಕೇ ಬೇಕು. ಮೀಸಲಾತಿ ಇರದಿದ್ದರೆ ಮಹಿಳೆಯ ಬದುಕು ಹಿಂದೆ ಯಾವ ರೀತಿಯಲ್ಲಿ ಇತ್ತೋ ಅದೇ ರೀತಿಯಲ್ಲಿ ಇಂದು ಕೂಡ ಮುಂದುವರೆಯುತ್ತದೆ.





ನವು ಪ್ರಮುಖ
ಕುಟುಂಬಗಳಲ್ಲಿ
ದಿರುವುದಾಗಿದ್ದು
ರೆಗಳಲ್ಲಿ ಕೂಡ
ಧಿಕ ಸಂಗತಿಗಳ
ತ್ತು ಅದರಲ್ಲಿನ
ಅಧ್ಯಯನಗಳಲ್ಲಿ
ನ್ನವಾದ ಕೆಲವು
ಮಹಿಳೆಯರನ್ನು
ನ್ನು ಏಕಕಾಲಕ್ಕೆ
ನವಾಗಿ ತುಂಬಿಸಿ
ಅವರು ನೀಡುವ
ಿ ಅವುಗಳನ್ನು
ಬಾರದು ಎಂಬ
ನಿರೀಕ್ಷಿಸಿದರಿಂದ

ಸ್ವಲ್ಪ ಪ್ರಮಾಣದ ತೊಡಕು ಕೂಡ ಎದರಾಯಿತು.

ಅವರು ಕೆಲವೊಂದು ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಹಾಗೂ ಉತ್ತರಿಸುವುದರಲ್ಲಿ



# ಗ್ರಂಥಾಲಯ
## ಕನ್ನಡ ವಿಶ್ವವಿದ್ಯಾಲಯ, ಹಂಪಿ
### ರಶೀದಿ

ಸಂಖ್ಯೆ : 7715 ದಿನಾಂಕ : 09/10/2018

ಇವರಿಂದ [illegible]

ಈ ಕೆಳಗಿನ ಬಾಬ್ತುಗಳಿಗೆ ಹಣ ಸ್ವೀಕರಿಸಲಾಗಿದೆ.

| ಕ್ರ ಸಂ. | ಶುಲ್ಕದ ವಿವರಗಳು | ಮೊಬಲಗು ರೂ. | ಪೈ. |
|---|---|---|---|
| 1. | ಠೇವಣಿಹಣ | 50= | 00 |
| 2. | ವಿಳಂಬಿತ ದಂಡ | | |
| 3. | ಕಳೆದುಕೊಂಡ ಪುಸ್ತಕದ ಮೊತ್ತ | | |
| 4. | ಇತರ ಬಾಬ್ತುಗಳ ಬಾಬ್ತು | | |
| | ಸಿ.ಡಿ. ಶುಲ್ಕ | 50= | 00 |

ಒಟ್ಟು (ಅಕ್ಷರಗಳಲ್ಲಿ) ಐವತ್ತು ರೂಪಾಯಿಗಳು

ಮಾತ್ರ ......................... ಮಾತ್ರ

ಹಣ ಪಡೆದವರ ಸಹಿ ಮುಖ್ಯ ಗ್ರಂಥಪಾಲಕರ ಸಹಿ

ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ ಎಂಬ ಈ ಅಧ್ಯಯನವು ಪ್ರಮುಖ ವಾಗಿ ಶಿಕ್ಷಿತ, ಉದ್ಯೋಗಸ್ಥ ಮಹಿಳೆಯರನ್ನು ಹೊಂದಿರುವ ನಗರದ ವಿಭಕ್ತ ಕುಟುಂಬಗಳಲ್ಲಿ ಕಂಡುಬರುವ ಪಿತೃಪ್ರಧಾನತೆಯ ಸ್ವರೂಪವನ್ನು ಅರಿಯುವ ಉದ್ದೇಶವನ್ನು ಹೊಂದಿರುವುದಾಗಿದ್ದು ಕುಟುಂಬ ಒಂದರ ಪಿತೃಪ್ರಧಾನತೆಯ ಗುಣಲಕ್ಷಣಗಳು ಸೂಕ್ಷ್ಮಾತಿಸೂಕ್ಷ್ಮ ನೆಲೆಗಳಲ್ಲಿ ಕೂಡ ವ್ಯಾಪಿಸಿದ್ದು, ಎಂಬುದನ್ನು ಗಮನದಲ್ಲಿಟ್ಟುಕೊಂಡು ಕೇವಲ ನಾಲ್ಕು ಪ್ರಾತಿನಿಧಿಕ ಸಂಗತಿಗಳ ವಿಶ್ಲೇಷಣೆ ಅಧ್ಯಯನವನ್ನು ಸೀಮಿತಗೊಳ್ಳಿಸಿಕೊಳ್ಳಲಾಯಿತು. ಕುಟುಂಬಗಳು ಮತ್ತು ಅದರಲ್ಲಿನ ಲಿಂಗ ವ್ಯವಸ್ಥೆಯ ಕುರಿತು ಸಮಾಜ ವಿಜ್ಞಾನ ಶಿಸ್ತಿನಲ್ಲಿ ಹಾಗೂ ಮಹಿಳಾ ಅಧ್ಯಯನಗಳಲ್ಲಿ ಈಗಾಗಲೇ ನಡೆದಿರುವ ಅಧ್ಯಯನಗಳನ್ನು ಗಮನಲ್ಲಿಟ್ಟುಕೊಂಡು ಅದಕ್ಕಿಂತ ಭಿನ್ನವಾದ ಕೆಲವು ಅಂಶಗಳನ್ನು ಇಲ್ಲಿ ಗುರುತಿಸಿಕೊಳ್ಳಲಾಯಿತು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಹಿಳೆಯರನ್ನು ಮಾತ್ರ ಸಂದರ್ಶನಕ್ಕಾಗಿ ಆರಿಸಿಕೊಳ್ಳಲಾಯಿತು. ಸಾಧ್ಯವಾದಷ್ಟು ಮಾಹಿತಿಗಳನ್ನು ಏಕಕಾಲಕ್ಕೆ ಅವರಿಂದ ಪಡೆಯ ಲಾಯಿತು. ಕೆಲವು ಸಂದರ್ಶನಕಾರರು ಪ್ರಶ್ನಾವಳಿಗಳನ್ನು ನಿಧಾನವಾಗಿ ತುಂಬಿಸಿ ಕೊಳ್ಳುದಾಗಿ ಕೋರಿದಾಗಿಗ್ಗೂ ಅದಕ್ಕೆ ಅವಕಾಶವನ್ನು ನೀಡಲಿಲ್ಲ. ಏಕೆಂದರೆ ಅವರು ನೀಡುವ ಉತ್ತರಗಳು ಅವರ ಸಾಧ್ಯವಾದ ಸ್ವ-ಇಚ್ಛೆಯ ಉತ್ತರಗಳಾಗಿರಬೇಕು ಹಾಗೂ ಅವುಗಳನ್ನು ತುಂಬುವಲ್ಲಿ ಕುಟುಂಬದ ಇನ್ನಿತರ ಸದಸ್ಯರ ಅಭಿಪ್ರಾಯಗಳು ಅಲ್ಲಿ ನುಸುಳಿರಬಾರದು ಎಂಬ ಉದ್ದೇಶದಿಂದಾಗಿ ಈ ರೀತಿ ಸಂದರ್ಶನಕಾರರಿಂದ ತಕ್ಷಣದ ಉತ್ತರಗಳನ್ನು ನಿರೀಕ್ಷಿಸಿದರಿಂದ ಸ್ವಲ್ಪ ಪ್ರಮಾಣದ ತೊಡಕು ಕೂಡ ಎದರಾಯಿತು.

ಅವರು ಕೆಲವೊಂದು ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಹಾಗೂ ಉತ್ತರಿಸುವುದರಲ್ಲಿ

ಹಿಂಜರಿದರು. ಕೆಲವೊಮ್ಮೆ ತೋರಿಕೆಯ ಉತ್ತರವನ್ನು ನೀಡುತ್ತಿರಬಹುದೇ ಎಂಬ ಅನುಮಾನವು ಬರುವಂತಾಯಿತು. ಇಷ್ಟಾಗಿಯೂ ಈ ಅಧ್ಯಯನವು ಸಂದರ್ಶನಗಾರರ ಮಾಹಿತಿಯನ್ನು ಅಧಿಕೃತವೆಂದು ಭಾವಿಸಿ ತನ್ನ ವಿಶ್ಲೇಷಣೆಯನ್ನು ನಡೆಸಿದೆ. ಕ್ಷೇತ್ರಕಾರ್ಯದ ವ್ಯಾಪ್ತಿ, ಸಂಖ್ಯಾವ್ಯಾಪ್ತಿ ಕಡಿಮೆದಾದರೂ ಅದನ್ನು ಪ್ರಾತಿನಿಧಿಕವೆಂದು ಗುರುತಿಸಿಕೊಂಡು ಅಧ್ಯಯನವನ್ನು ರೂಪಿಸಿದೆ.

ಅಧ್ಯಯನದ ನಾಲ್ಕು ಪ್ರಮುಖ ವಿಷಯಗಳಲ್ಲಿ ಮೊದಲನೆಯಾದದ ಕೌಟುಂಬಿಕ ಶ್ರಮವಿಭಜನೆ ಮತ್ತು ಮಹಿಳೆ ಎಂಬ ವಿಷಯದಲ್ಲಿ ಆಧುನಿಕ ಕುಟುಂಬಗಳು ಉದ್ಯೋಗಸ್ಥ ಮಹಿಳೆಯರನ್ನು ಹೊಂದಿರುವ ಆಧುನಿಕ ಕುಟುಂಬಗಳಲ್ಲಿನ ಮಹಿಳೆಯರ ಅಭಿಪ್ರಾಯವನ್ನು ಅರಿಯಲು ಯತ್ನಿಸಲಾಗಿದೆ. ಅದಕ್ಕಾಗಿ ಕೌಟುಂಬಿಕ ಶ್ರಮವಿಭಜನೆ ಎಂಬ ವಿಷಯವನ್ನು ಗೃಹಕೃತ್ಯ, ಗೃಹಸಂಬಂಧಿತ ಹೊರಗಿನ ಕೆಲಸಗಳು ಹಾಗೂ ಮಕ್ಕಳ ಪೋಷಣೆ ಎಂಬ ಮೂರು ನೆಲೆಗಳಲ್ಲಿ ವಿಭಜಿಸಿ ಗುರುತಿಸಿಕೊಳ್ಳಲಾಯಿತು.

ಕೌಟುಂಬಿಕ ಶ್ರಮವಿಭಜನೆಯ ಕುರಿತಂತೆ ಈ ಅಧ್ಯಯನದಲ್ಲಿ ಕೆಲವು ಕುತೂಹಲಕಾರಿಯಾದ ಫಲಿತಗಳು ಈ ಕೆಳಕಂಡಂತೆ ದೊರೆಯುತ್ತವೆ.

೧. ಗೃಹಕೃತ್ಯಗಳನ್ನು ಮಹಿಳೆಯೇ ಮಾಡಬೇಕೆಂಬ ಸಾಂಪ್ರದಾಯಿಕ ಚಿಂತನೆಯಿಂದ ತಾತ್ವಿಕವಾಗಿ ಈ ಕುಟುಂಬಗಳು ಹೊರಬಂದಂತೆ ಕಾಣುತ್ತದೆ.

೨. ಪತಿಯು ಗೃಹಕೃತ್ಯಗಳಲ್ಲಿ ನೇರವಾಗುವುದು ತಪ್ಪಿಲ್ಲವೆಂಬ ಆಲೋಚನಾಕ್ರಮ ಹಂತ ಹಂತವಾಗಿ ರೂಪಗೊಳ್ಳುತ್ತಿರುವಂತೆ ಕಾಣುತ್ತದೆ.

೩. ಉದ್ಯೋಗಸ್ಥ ಮಹಿಳೆಯರನ್ನು ಪ್ರಧಾನವಾಗಿ ಹೊಂದಿರುವ ಆಧುನಿಕ ಕುಟುಂಬಗಳಲ್ಲಿ ಆರ್ಥಿಕ ಪರಿಸ್ಥಿತಿಯಲ್ಲಿ ಒಂದು ಹಂತದ ಸುಧಾರಣೆಯನ್ನು ಕಾಣಬಹುದಾದುದರಿಂದ ಈ ಕುಟುಂಬಗಳಲ್ಲಿ ಗಂಡ ಗೃಹಕೃತ್ಯಗಳಲ್ಲಿ ಸಹಭಾಗಿಯಾಗಬೇಕು ಎನ್ನುವ ವಿಚಾರ ಪ್ರಾಯೋಗಿಕವಾಗುವುದಕ್ಕೆ ಬದಲಾಗಿ ಮನೆಯ ಕೆಲಸದವರನ್ನೇ ಇಟ್ಟುಕೊಳ್ಳಲಾಯಿತು ಎನ್ನುವ ಪರಿಹಾರವು ಎದ್ದು ಕಾಣುತ್ತದೆ.

೪. ಇನ್ನೂ ಗೃಹ ಸಂಬಂಧಿತ ಹೊರಗಿನ ಕೆಲಸಗಳನ್ನು ನಿಭಾಯಿಸುವುದರಲ್ಲಿ ಈ ಮಹಿಳೆಯರಿಗೆ ಸಾಕಷ್ಟು ಉತ್ಸಾಹವಿರುವುದು ಕಂಡುಬರುತ್ತದೆ. ಏಕೆಂದರೆ ಈ ಮಹಿಳೆಯರು ಈ ಕೆಲಸಗಳನ್ನು 'ಹೊರೆ' ಎಂದು ಭಾವಿಸುವುದಕ್ಕೆ ಬದಲಾಗಿ ತಮ್ಮ 'ಮುಂದುವರೆಯುವಿಕೆ' ಎಂಬ ಅಭಿಪ್ರಾಯವನ್ನು ಹೊಂದಿದವರಾಗಿದ್ದಾರೆ.

೫. ಕೊನೆಯದಾಗಿ ಮಕ್ಕಳ ಪಾಲನೆಯ ವಿಚಾರವನ್ನು ಯೋಗಕ್ಷೇಮದ ನೆಲೆಯಲ್ಲಿ ವಿವರಿಸಿ ಕೊಂಡಿರುವುದು ಕಂಡುಬರುತ್ತದೆ.

ಅಧ್ಯಯನದ ಎರಡನೆಯ ಹಂತದ ಅಂಶವಾದ ಸಂಪನ್ಮೂಲ ಬಳಕೆ ಮತ್ತು ಮಹಿಳೆ ವಿಚಾರವು ಕೆಲವು ನಿರ್ಣಯ, ತೀರ್ಮಾನಗಳನ್ನು ನೀಡುವುದಾಗಿರುತ್ತದೆ.

೧. ಈ ಕುಟುಂಬಗಳ ಮಹಿಳೆಯರು ಕೂಡ ತಮ್ಮ ಸಂಕಷ್ಟದಲ್ಲಿ ಒದಗಿ ಬರುವ ವಿಚಾರವಾಗಿಯೇ ಆಭರಣಗಳನ್ನು ನಂಬುತ್ತಾರೆ. ಉದ್ಯೋಗಸ್ಥ ಮಹಿಳೆಯರಾದರೂ ಇನ್ನಿತರ ಹೂಡಿಕೆಯ ಸಂಗತಿಗಳತ್ತ ಇವರ ಗಮನ ವಿಶೇಷವಾಗಿ ಹರಿದಂತಿಲ್ಲ.

೨. ಆಸ್ತಿಯ ಹಕ್ಕು ಪತಿ-ಪತ್ನಿಯರಿಬ್ಬರ ಹೆಸರಿನಲ್ಲಿರಬೇಕು ಎಂಬುದರ ಬಗ್ಗೆ ಕೆಲವರು ಒಲವು ತೋರಿದರಾದರೂ ಬಹುಸಂಖ್ಯಾತ ಮಹಿಳೆಯರು ಈ ಪ್ರಶ್ನೆಯನ್ನು ಕುಟುಂಬದ ಹಿತಾಸಕ್ತಿ ಗಂಡ-ಹೆಂಡತಿಯರ ನಡುವಿನ ಅನೂನ್ಯತೆಯ ನೆಲೆಯಲ್ಲಿಯೇ ಗುರುತಿಸಿ ಯಾರ ಹೆಸರಿನಲ್ಲಿದ್ದರೇನು ಮತ್ತು ಪತಿಯ ಹೆಸರಿನಲ್ಲಿರುವುದೇ ಒಳಿತು ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

೩. ಎಲ್ಲಕ್ಕಿಂತ ಮುಖ್ಯವಾದ ಪ್ರಶ್ನೆ ವಿವಾಹಿತ ಮಹಿಳೆಯರ ದುಡಿಮೆಯ ಪ್ರತಿಫಲದಲ್ಲಿ ತವರಿನವರ ಪಾಲೇನು? ಎಂಬ ಪ್ರಶ್ನೆಗೆ ಇವರು ಉತ್ತರಿಸಿರುವುದು ಈ ಪ್ರಶ್ನೆಯನ್ನು ಸ್ವೀಕರಿಸುವುದರಲ್ಲಿಯೇ ಇಲ್ಲಿನ ಮಹಿಳೆಯರು ಸ್ವಲ್ಪ ಹಿಂಜರಿಯುವುದು ಕಾಣುತ್ತದೆ. ಆದ್ದರಿಂದಲೇ ಅವರು ಹೆಣ್ಣಿನ ದುಡಿಮೆಯನ್ನು ಇವಳು ಕೊಡಲು ಬಯಸಿದರೂ ಅವರು ಪಡೆದುಕೊಳ್ಳಲು ನಿರಾಕರಿಸುತ್ತಾರೆಂದು ಸುತ್ತು ಬಳಕೆಯ ಉತ್ತರವನ್ನು ನೀಡಿದ್ದಾರೆ.

೪. ಮನೆಯ ಉಪಭೋಗಿ ಸರಕುಗಳು ಖರೀದಿಯಲ್ಲಿ ಮಹಿಳೆಯರ ನಿರ್ಧಾರಕ ಶಕ್ತಿ ಏನು ಎಂಬ ಪ್ರಶ್ನೆಗೆ ಕುಟುಂಬದ ಯೋಗಕ್ಷೇಮದ ನೆಲೆಯಲ್ಲಿ ನಿಂತು ಉತ್ತರಿಸುತ್ತಾರೆ. ಅಂದರೆ ಆಭರಣಗಳು, ಗೃಹ ಉಪಯೋಗಿ ವಸ್ತುಗಳಾದಾದರೆ ತಾವು ಮಕ್ಕಳಿಗೆ ಸಂಬಂಧಿಸಿದ ವಸ್ತುಗಳಾದರೆ ಅವರು ಹೀಗೆ ಸರಕುಗಳು ಯಾರ ಅಗತ್ಯಕ್ಕಾಗಿ ಇರುತ್ತವೆಯೋ ಅವರು ಎನ್ನುವ ಅಭಿಪ್ರಾಯವನ್ನು ವಿವರಿಸುತ್ತಾರೆ. ಒಟ್ಟಾರೆಯಾಗಿ ಹೇಳುವಾಗ ಮನೆಯವರೆಲ್ಲರೂ ಸೇರಿ ಎನ್ನುವ ರೀತಿಯಲ್ಲಿ ಅದನ್ನು ಸೂತ್ರೀಕರಿಸಿ ಉತ್ತರಿಸಿದ್ದಾರೆ.

ಅಧ್ಯಯನದ ಮೂರನೆಯ ಮುಖ್ಯ ವಿಷಯವಾದ ತವರು ಮತ್ತು ಮಹಿಳೆ ಎಂಬ ಅಧ್ಯಯನದ ಉತ್ತರಗಳು ಅಷ್ಟೇ ಕುತೂಹಲಕಾರಿಯಾಗಿವೆ. ಹಿಂದಿನ ಅಧ್ಯಾಯನದಲ್ಲಿ ಹೆಣ್ಣುಮಕ್ಕಳ

ದುಡಿಮೆಯ ಮೇಲೆ ತವರಿನವರ ಹಕ್ಕೇನು? ಎನ್ನುವ ಅಂಶವನ್ನು ಪ್ರಸ್ತಾಪಿಸಿರುವುದರಿಂದ ಅದನ್ನು ಹೊರತಪಡಿಸಿದರಿಂದ ಇನ್ನೂಳಿದ ಅಂಶಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

೧. ತವರು ಮನೆಯವರೊಂದಿಗೆ ಸಂಪರ್ಕವನ್ನು ಇಟ್ಟುಕೊಳ್ಳಬಹುದಾದ ವಿಧಾನ ಯಾವುದು? ಎಂಬ ವಿಚಾರಕ್ಕೆ ಭಿನ್ನ ಭಿನ್ನ ಉತ್ತರಗಳು ಹೆಚ್ಚು ಕಡಿಮೆ ಸರಿಸಮಾನವಾಗಿ ದೊರೆಯುತ್ತವೆ. ಇಷ್ಟಾಗಿಯೂ ಅವಶ್ಯವಿದ್ದಾಗ ಭೇಟಿ ನೀಡಬೇಕು ಎಂಬಂತಹ ಉತ್ತರವು ಈ ಅವಶ್ಯಕತೆಯ ನಿರ್ಧಾರವು ಪಿತೃಪ್ರಧಾನ ಸಮಾಜದೇ ಎನ್ನುವ ಪ್ರಶ್ನೆಯನ್ನು ಹುಟ್ಟುಹಾಕುತ್ತದೆ.

೨. ಇಷ್ಟಾಗಿಯೂ ಗಂಡನಿಗೆ 'ಮಾಹಿತಿ ನೀಡಿಯೇ' ಹೋಗುವುದು ಒಳ್ಳೆಯದು ಎಂಬ ಅಭಿಪ್ರಾಯ ಎನ್ನುವುದು ವಾಸ್ತವಾಗಿ ಅಪ್ಪಣೆ ಪಡೆದು ಹೋಗುವುದು ಎನ್ನುವುದರ ಸುಧಾರಿತ ರೂಪವೆನಿಸುತ್ತದೆ.

೩. ತಂದೆ-ತಾಯಿಯರನ್ನು ನೋಡಿಕೊಳ್ಳುವ ವಿಚಾರ ಬಂದಾಗ ತಾವು ಇನ್ನೊಂದು ಮನೆಯ ಹಿರಿಯರ ಜವಾಬ್ದಾರಿಯನ್ನು ಹೊರುವ ತಾತ್ವಿಕ ಚೌಕಟ್ಟಿನಲ್ಲಿ ಬರುವುದರಿಂದ ತಮ್ಮ ತಂದೆ ತಾಯಿಯರನ್ನು ತಮ್ಮ ಸಹೋದರರೇ ನೋಡಿಕೊಳ್ಳಬೇಕೆಂಬ ತರ್ಕವನ್ನು ಒಪ್ಪಿದವರಾಗಿದ್ದಾರೆ.

೪. ನಾಲ್ಕನೆಯದಾಗಿ ಗಂಡನ ಮನೆಯಲ್ಲಿ ಹೆಂಡತಿ ಎನ್ನುವ ಬದಲಾಗಿ ಹೆಂಡತಿಯ ಮನೆಯಲ್ಲಿ ಗಂಡ ವಾಸಿಸುವ / ನೆಲೆಸುವ ಎಂಬ ವಿಚಾರಕ್ಕೆ ಹೆಚ್ಚು ಕಡಿಮೆ ಎಲ್ಲ ಮಹಿಳೆಯರು ಅಸಮತಿ ಸೂಚಿಸಿದ್ದಾರೆ.

ಈ ವಿಷಯದ ವಿವರಣೆಯ ಸಂದರ್ಭದಲ್ಲಿ ಗಂಡ ಹೆಂಡತಿಯ ಮನೆಗೆ ಹೋಗುವುದಕ್ಕೂ ಆತನ 'ಸಾಮರ್ಥ್ಯ'ಕ್ಕೂ ಸಂಬಂಧವಿರುವಂತೆ ಆಲೋಚಿಸುತ್ತಾರೆ. ಸ್ವಾವಲಂಬಿಯಾದ ಸಮರ್ಥನಾದ ಗಂಡಸು ಹೆಂಡತಿಯ ಮನೆಗೆ ಹೋಗಿ ನೆಲೆಸುವ ಪ್ರಶ್ನೆ ಬರುವುದಿಲ್ಲ ಎಂಬ ಅರ್ಥದ ವಿವರಣೆ ಅದಾಗಿದೆ.

ಅಧ್ಯಯನಕ್ಕೆ ಗುರುತಿಸಿಕೊಳ್ಳಲಾಗುವ ನಾಲ್ಕನೆಯ ಹಾಗೂ ಕೊನೆಯ ಅಂಶವಾದ ಚಿಂತನಾಕ್ರಮ ಮತ್ತು ಮಹಿಳೆಗೆ ಇರುವ ಸಂಬಂಧ ಸ್ವರೂಪವನ್ನು ಕುರಿತ ಅಧ್ಯಯನವು ಕುತೂಹಲಕಾರಿಯಾಗಿದೆ. ಚಿಂತನಾಕ್ರಮ ಮತ್ತು ಮಹಿಳೆ ಎಂಬ ಭಾಗವು ಒಂದು ಬಗೆಯ ಸಂದಿಗ್ಧತೆಯನ್ನು ಅಧ್ಯಯನ ಸಂದರ್ಭದಲ್ಲಿ ಹುಟ್ಟುಹಾಕಿದೆ. ಆಧುನಿಕ ಕುಟುಂಬಗಳಲ್ಲಿ ಮಹಿಳೆ ತಾತ್ವಿಕವಾಗಿ ಮಹಿಳಾ ಪ್ರಶ್ನೆಗಳನ್ನು ಗ್ರಹಿಸುವುದಕ್ಕೂ ವೈಯಕ್ತಿಕವಾಗಿ ಅವುಗಳನ್ನು ಸ್ವೀಕರಿಸುವುದಕ್ಕೂ ನಡುವೆ ಇರುವ

ಸಂಬಂಧವನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಹಾಗಾಗಿ ಈ ಹಿಂದಿನ ಅಧ್ಯಾಯಗಳಲ್ಲಿ ಗುರುತಿಸಲಾಗಿರುವ ಕೆಲವು ಪ್ರಶ್ನೆಗಳು ಇಲ್ಲಿಯೂ ಕಂಡುಬರುತ್ತವೆ. ಉದಾಹರಣೆಗೆ ಆಸ್ತಿಯ ಹಕ್ಕಿನ ಬಗ್ಗೆ ನಿಮ್ಮ ಅಭಿಪ್ರಾಯವೆಂದು ಇಲ್ಲಿ ತಾತ್ವಿಕವಾಗಿ ಕೇಳಲಾದ ಪ್ರಶ್ನೆಯನ್ನು ಸಂಪನ್ಮೂಲ ಬಳಕೆ ಮತ್ತು ಮಹಿಳೆ ಮೂರನೆಯ ಅಧ್ಯಾಯದಲ್ಲಿ ಇನ್ನೊಂದು ರೀತಿಯಲ್ಲಿ ಪ್ರಶ್ನಿಸಲಾಗಿದೆ. ಹಾಗಾಗಿ ಮೇಲ್ನೋಟಕ್ಕೆ ಈ ಪ್ರಶ್ನೆಗಳು ಪುನರಾವರ್ತನೆಗೊಂಡಿವೆ ಎನಿಸುವುದಾದರೂ ಈ ಪುನರಾ ವರ್ತನೆಯನ್ನು ಪ್ರಜ್ಞಾಪೂರಕವಾಗಿಯೇ ಮಾಡಲಾಗಿದೆ.

೧. ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ ಕೆಳಗಿದೆ ಎಂಬ ಪ್ರಮೇಯದೊಂದಿಗೆ ಸ್ತ್ರೀವಾದಿ ಚಿಂತನೆ, ಹೋರಾಟ ಮತ್ತು ಮಹಿಳಾ ಅಧ್ಯಾಯನಗಳು ಚಟುವಟಿಕೆಗೆ ತೊಡಗುತ್ತವೆ. ತಮ್ಮ ಚಟುವಟಿಕೆಗಳ ಗುರಿಯಾಗಿ ಮಹಿಳೆಯ ಸ್ಥಾನಮಾನವನ್ನು ಉತ್ತಮಿಕೆಯನ್ನು ಗುರುತಿಸಿಕೊಳ್ಳುತ್ತದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಈ ಪ್ರಮೇಯವನ್ನು ತಲೆಕೆಳಗಾಗಿಸುವ ರೀತಿಯಲ್ಲಿ ಸ್ತ್ರೀಯರ ಸ್ಥಾನ ಸರಿಸಮಾನವಾಗಿದೆ ಎಂಬ ಉತ್ತರವನ್ನು ಹೆಚ್ಚು ಪ್ರಮಾಣದ ಅಂದರೆ ಶೇ. ೬೩ ರಷ್ಟು ಮಹಿಳೆಯರು ನೀಡುತ್ತಾರೆ. ಹಾಗಾಗಿ ಈ ದಿಕ್ಕಿನಲ್ಲಿ ಯೋಚಿಸಬೇಕಾದ ಅಗತ್ಯವಿದೆ. ಏಕೆಂದರೆ ಇದೇ ಮಹಿಳೆಯರು ಉಳಿದ ಅಧ್ಯಾಯಗಳಲ್ಲಿ ವಿವಿಧ ಪ್ರಶ್ನೆಗಳಿಗೆ ನೀಡಿರುವ ಉತ್ತರಗಳನ್ನು ಗಮನಿಸಿದರೆ ಅದು ಸ್ತ್ರೀ-ಪುರುಷರ ಸಮಾನತೆಯೇನು ಸಾಧಿಸಿತೋರಿಸಲಾಗದು. ಹಾಗಿದ್ದಾಗ ಅಲ್ಲಿಯ ಮಹಿಳೆಯರು ನೀಡಿದ ವಿವರಗಳಿಗೂ ಇಲ್ಲಿ ಅವರು ಮಂಡಿಸುತ್ತಿರುವ ತಾತ್ವಿಕ ಅಧ್ಯಯಕ್ಕೆ ಬಂದಿರುವುದನ್ನು ಪರಿಶೀಲಿಸಬೇಕಾಗುತ್ತದೆ.

೨. ಇನ್ನೂ ಸ್ತ್ರೀ ಶಿಕ್ಷಣದ ಸಂದರ್ಭದಲ್ಲಿಯೂ ಸ್ತ್ರೀ ಶಿಕ್ಷಣ ಉನ್ನತ ಮಟ್ಟದಾಗಿರಬೇಕು. ಪತ್ನಿಯೂ ಪತಿಗಿಂತ ಹೆಚ್ಚು ಓದಿರುವುದರಿಂದ ಉನ್ನತ ಉದ್ಯೋಗವನ್ನು ಮಾಡುವುದರಲ್ಲಿ ತಪ್ಪೇನಿಲ್ಲ ಎಂಬ ಕ್ರಾಂತಿವಾದಿಗಳು ಅಭಿಪ್ರಾಯ ಮಂಡಿಸಿರುವರಾದರೂ ಕೆಲವರು ಪುರುಷರಿಗಿಂತ ಕಡಿಮೆಯ ಹಂತದ ಶಿಕ್ಷಣ, ಉದ್ಯೋಗಗಳು ಕೌಟುಂಬಿಕ ನೆಮ್ಮದಿಯನ್ನು ತರುತ್ತದೆ ಎಂಬ ಒಳಧ್ವನಿಯನ್ನು ಹೈಲೇಟಿಸಿದ್ದಾರೆ. ಅಂದರೆ ಈ ಹೊತ್ತಿನ ಆಧುನಿಕ ಕುಟುಂಬಗಳಲ್ಲಿ ತಾತ್ವಿಕವಾಗಿ ಮಹಿಳೆಯರು ಮುಂದುವರಿಕೆಯ ಬಗ್ಗೆ ಹೆಚ್ಚಿನ ತಕಾರರಿಲ್ಲ ಎಂಬುದು ನಿಜವಾದರೂ ಕೌಟುಂಬಿಕ ಬದುಕು ನಿರಾತಂಕವಾಗಿ ಮುಂದುವರಿಯಲು ಸ್ತ್ರೀಯರು ಪಿತೃಪ್ರಧಾನ ಮೌಲ್ಯಗಳ ಒಳಗೆ ವ್ಯವಹರಿ ಸುವುದು ತಮ್ಮ ಪ್ರಗತಿಯನ್ನು ವ್ಯಾಖ್ಯಾನಿಕೊಳ್ಳುವುದು ಒಳಿತ್ತೆಂಬ ಸಾಮಾನ್ಯ ತಿಳುವಳಿಕೆಯೊಂದು ಈ ಮಹಿಳೆಯರಲ್ಲಿ ಇರುವಂತೆ ಕಂಡುಬರುತ್ತದೆ. ಇಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಮುಖ್ಯ

ವಿಷಯ ತವರು ಮನೆಯ ಆಸ್ತಿ ಬೇಡ ಹಾಗೂ ಗಂಡನ ಮನೆಯ ಆಸ್ತಿ ಬೇಕು ಎಂಬುದರ ಕುರಿತು ಬಹುಸಂಖ್ಯಾತ ಮಹಿಳೆಯರ ಒಲವುವಿರುವುದು ವಿಶೇಷಣೆಗೆ ಒಳಪಡಬೇಕಿದೆ. ಗಂಡನ ಮನೆಯ ಆಸ್ತಿ ಹಕ್ಕು ಸ್ತ್ರೀಯರಿಗೆ ಇರಬೇಕು ಎನ್ನುವ ಮೂಲಕ ಈ ಮಹಿಳೆಯರು ಒಂದು ಕಡೆ ಪಿತೃಪ್ರಧಾನತೆಯ ಮೌಲ್ಯವನ್ನು ನಿರಾಕರಿಸುತ್ತಿದ್ದರೆ ಇನ್ನೊಂದು ಕಡೆ ತವರು ಮನೆಯ ಆಸ್ತಿ ಬೇಡ ಎಂಬುದರ ಮೂಲಕ ಅದನ್ನು ಸ್ವೀಕರಿಸುತ್ತಿದ್ದಾರೆ. ಏಕೆಂದರೆ ವಿವಾಹಿತ ಸ್ತ್ರೀ ತನ್ನನ್ನು ತಾನು ಪೂರ್ಣ ಪ್ರಮಾಣದಲ್ಲಿ ಗಂಡನೊಂದಿಗೆ ಗುರುತಿಸಿಕೊಳ್ಳುವುದರಿಂದ ತಾನು ತವರು ಮನೆಯ ಆಸ್ತಿಯ ಹಕ್ಕಿಗೆ ಅರ್ಹಳಲ್ಲ ಎಂಬ ಸಂಪ್ರದಾಯಿಕ ನೈತಿಕತೆ ಯೊಂದು ಇಲ್ಲಿ ಕೆಲಸ ಮಾಡುತ್ತಿದೆ. ಹಾಗೆಯೇ ತವರು ಮನೆಯ ಆಸ್ತಿಯಲ್ಲಿ ಪಾಲು ಕೇಳುವುದು ತನ್ನ ಸಹೋದರರಿಗೆ ಮಾಡುವ ಅನ್ಯಾಯವೆಂಬ ಮೌಲ್ಯವು ಇಲ್ಲಿ ಹಾಸುಹೊಕ್ಕಾಗಿದೆ. ಹಾಗಾಗಿ ಸಾಕಷ್ಟು ಪ್ರಗತಿಶೀಲರಲ್ಲಿ ಕಂಡು ಬರುವ ಆಧುನಿಕ ಕುಟುಂಬದ ಮಹಿಳೆ ತನ್ನ ಬೇರುಗಳನ್ನು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯ ಒಳಗೆ ಉಳಿಸಿಕೊಂಡಿದೆ ಎಂಬುದನ್ನು ಇದು ಸೂಚಿಸಿದೆ. ಇಷ್ಟೆಲ್ಲದರ ನಡುವೆ ದೈಹಿಕವಾಗಿ, ನೈರ್ಸಕವಾಗಿ ಸ್ತ್ರೀ ಪುರುಷನಿಗಿಂತ ದುರ್ಬಲಳಾಗಿರಬಹುದು ಅಥವಾ ಈ ಹೊತ್ತಿನ ಮಹಿಳೆಯರಲ್ಲಿ ಕಾಣುತ್ತಿರುವ ಅಬಲತ್ವವು ನಿಸರ್ಗ ಸಹಜವಾದುದು. ಸಮಾಜ ನಿರ್ಮಿತವಾದುದಲ್ಲ ಎಂಬ ಅಭಿಪ್ರಾಯವೊಂದು ಈ ಆಧುನಿಕ ಮಹಿಳೆಯರ ಮನದಲ್ಲಿಯೂ ಇರುವುದು ಕಂಡುಬರುತ್ತದೆ.

ಈ ಎಲ್ಲದರ ನಡುವೆಯೂ ಮಹಿಳಾ ಮೀಸಲಾತಿಯಂತಹ ವಿಚಾರದಲ್ಲಿ ಆಧುನಿಕ ಮಹಿಳೆ ಯರು ಹೊಂದಿರುವ ಮೀಸಲಾತಿ ಪರ ಅಭಿಪ್ರಾಯವು ತನ್ನೆಲ್ಲ ಸಂದಿಗ್ಧತೆಯ ನಡುವೆಯೂ ಆಕೆ ಮುನ್ನಡೆಯುತ್ತಿರುವುದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ.

ಮೇಲಿನೆಲ್ಲ ಸಂಗತಿಗಳನ್ನು ಕ್ರೋಢಿಕರೀಸಿ ಗ್ರಹಿಸುವುದಾದರೆ ಆಧುನಿಕ ಕುಟುಂಬಗಳಲ್ಲಿನ ಮಹಿಳೆ ತನ್ನದೇ ಆದ ಒಂದು ಗುರುತನ್ನು ರೂಪಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಹಾಗೆಯೇ ತನ್ನ ಅಸ್ತಿತ್ವ, ಸ್ಥಾನಮಾನಗಳ ಕುರಿತಂತೆ ಬಹಳ ಕ್ರಾಂತಿಕಾರಕವಾದ ಪ್ರಶ್ನೆಗಳನ್ನು ಆಕೆ ಎತ್ತುತ್ತಿಲ್ಲ. ಆದರೂ ಇರುವ ವ್ಯವಸ್ಥೆಯೊಳಗೆ ತನ್ನ ಸವಲತ್ತು ವೃದ್ಧಿಸಿಕೊಳ್ಳುವ ತನ್ನ ಸುತ್ತಲಿನ ಗಡಿಗೇರೆಗಳನ್ನು ವಿಸ್ತರಿಸಿಕೊಳ್ಳುವ ಪ್ರಯತ್ನದಲ್ಲಿರುವುದು ಕಂಡುಬರುತ್ತದೆ. ಈ ಆಶೆಯಿಂದಾಗಿಯೇ ಆಕೆ ತಾನು ಆ ಕುಟುಂಬಗಳಲ್ಲಿ ಹೊರಬೇಕಾದ ನಿರ್ವಹಿಸಬೇಕಾದ ಕೆಲವು ಜವಾಬ್ದಾರಿಗಳನ್ನು ತನ್ನ ಪ್ರಗತಿಯ ಮೆಟ್ಟಿಲುಗಳಾಗಿ ಗುರುತಿಸಿಕೊಳ್ಳುತ್ತಿದ್ದಾಳೆ. ತನ್ನ ನಡಿಗೆ ಸಲ್ಪ ನಿಧಾನವಾದರೂ ಅಥವಾ ತೆವಳಿಕೆ ಯಾದರೂ ತನ್ನ ಸಂಗಾತಿಯನ್ನು ಜೊತೆಗೆ ಕೊಂಡ್ಯೊಯುತ ಕಲ್ಯಾಣಾವಾದಿ ಆಸೆಗಳನ್ನು ಪೋಷಿಸಿ

ಕೊಂಡವಳಾಗಿದ್ದಾಳೆ. ಕುಟುಂಬ ವ್ಯವಸ್ಥೆಯನ್ನು ಬುಡಮೇಲು ಮಾಡುವುದಕ್ಕಿಂತ ಪರಿವರ್ತಿಸಿ ಕೊಳ್ಳುವುದು ತಾನು ಅದರ ಕೇಂದ್ರವಾಗುವುದು ಹೆಚ್ಚು ಸೂಕ್ತವಾದ ಆಲೋಚನೆ ಅವಳಿಗಿದೆ. ಆದ್ದರಿಂದಲೇ ಇಲ್ಲಿನ ಮಹಿಳೆಯರು ತಮ್ಮ ಸಂದರ್ಶನಗಳಲ್ಲಿಯೂ ಕೂಡ ಮಧ್ಯಾಂತರದ ಉತ್ತರಗಳನ್ನು ಹೆಚ್ಚಾಗಿ ನೀಡುವುದರಲ್ಲಿ ಹೆಚ್ಚು ಆಸಕ್ತರಾಗಿದ್ದಾರೆ. ಪ್ರಗತಿಪರ ಅಭಿಪ್ರಾಯಗಳನ್ನು ನೀಡುತ್ತಲೇ ಅವು ಸ್ವಲ್ಪ ತೀವ್ರಗಾಮಿ ಎನಿಸುವಂತಾದಾಗ ಪ್ರಜ್ಞಾಪೂರ್ವಕವಾಗಿಯೇ ಹಿಂಜರಿಯುತ್ತಾರೆ. ಇದಕ್ಕೆ ಉದಾಹರಣೆಗೆ ಆಸ್ತಿ ಯಾರ ಹೆಸರಿನಲ್ಲಿದರೇನು? ಗಂಡನಿಗಿಂತ ಕಡಿಮೆ ಉದ್ಯೋಗದಲ್ಲಿ ರುವುದು ಕೌಟುಂಬಿಕ ನೆಮ್ಮದಿಯ ಉತ್ತಮತೆ ಎನ್ನುವಂತ ವ್ಯವಹಾರಿಕ ತಿಳುವಳಿಕೆಯನ್ನು ಹೊಂದಿದ್ದಾರೆ.

ಪ್ರಸ್ತುತ ಅಧ್ಯಾಯನವನ್ನು ಕೈಗೆತ್ತಿಕೊಳ್ಳುವಾಗ ಕೆಲವು ಮೂಲಭೂತ ಪ್ರಶ್ನೆಗಳಿದ್ದವು. ಆಧುನಿಕ ಕುಟುಂಬಗಳ ಮಹಿಳೆ ಎನ್ನುವ ಸಾಮುದಾಯಿಕ ಪರಿಕಲ್ಪನೆಯೊಂದು ಇದೆಯೇ? ಉದ್ಯೋಗಸ್ಥ ಮಹಿಳೆ v/s ಗೃಹಿಣಿ ಎಂಬ ವಿಭಜನಾಕ್ರಮವು ಈ ಹೊತ್ತಿಗೆ ಪ್ರಸ್ತುತವೇ ಆಧುನಿಕ ಕುಟುಂಬ ಎನ್ನುವ ಸಂದರ್ಭದಲ್ಲಿ ಯಾವ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು ಇತ್ಯಾದಿ ಹಲವು ತಾತ್ವಿಕ ಪ್ರಶ್ನೆಗಳಿದ್ದವು. ಆದರೆ ಕ್ಷೇತ್ರಕಾರ್ಯ ನಡೆಸಿ ವಿಶ್ಲೇಷಿಸುವ ಹಂತದಲ್ಲಿ ಈ ಮೇಲಿನ ಪ್ರಶ್ನೆಗಳ ಉತ್ತರಗಳು ಸಾಕಷ್ಟು ತೃಪ್ತಿಕರವಾಗಿವೆ. ಮಹಿಳೆಯರ ನಡುವಿನ ಎಲ್ಲ ಭಿನ್ನತೆಗಳನ್ನು ಗಮನದಲ್ಲಿಟ್ಟು ಕೊಂಡಾಗ ಉದ್ಯೋಗಸ್ಥ ಮಹಿಳೆಯರ ಆಧುನಿಕ ಕುಟುಂಬದ ಮಹಿಳೆಯರೆಂಬಂತಹ ಒಂದು ಗುರುತನ್ನು ಊರ್ಜಿತಗೊಳಿಸಿಕೊಳ್ಳಲು ಸಾಧ್ಯವಾಯಿತು. ಹಾಗೆಯೇ ಆಧುನಿಕ ಕುಟುಂಬ ಎಂಬುದರ ನಿರ್ವಚನ ಸಂದರ್ಭದಲ್ಲಿ ಹಲವು ಗುಣಲಕ್ಷಣಗಳನ್ನು ಅದು ಆಧಾರಿಸಿಬಹುದಾಗಿದ್ದು ಪ್ರಸ್ತುತ ಅಧ್ಯಯನವು ಉದ್ಯೋಗಸ್ಥ ಮಹಿಳೆಯರನ್ನು ಹೊಂದಿರುವ ವಿಭಕ್ತ ಕುಟುಂಬಗಳು ಎಂಬ ವಿವರಣೆ ಯೊಂದಿಗೆ ಅದನ್ನು ಸೀಮಿತಗೊಳಿಸಿ ಕೊಳ್ಳಬೇಕಾಯಿತು.

ಪ್ರಸ್ತುತ ಅಧ್ಯಯನವು ಅತ್ಯಂತ ವಿಸ್ತಾರವಾದ ಕುಟುಂಬಗಳ ಅಧ್ಯಯನಗಳಲ್ಲಿ ಒಂದು ಸಣ್ಣ ಕೆಲಸವಾಗಿದ್ದು ತನ್ನ ಇತಿಮಿತಿ ಒಳಗೆ ಫಲಿತಗಳನ್ನು ಕಂಡುಕೊಳ್ಳಲು ಪ್ರಯತ್ನಸಿದೆ. ಮಹಿಳೆಯರ ಸ್ಥಾನಮಾನ ಎಂಬ ಬಹುದೊಡ್ಡ ತಾತ್ವಿಕ ಚರ್ಚೆಯೊಂದಿನ್ನು ಪರೋಕ್ಷವಾಗಿಯಾದರೂ ಪರಿಶೀಲಿಸಲು ಅಧ್ಯಯನದ ವ್ಯಾಪಕ ಕ್ಷೇತ್ರದಲ್ಲಿ ವ್ಯಾಪಕವಾದ ಮಹಿಳೆಯರ ಅಧ್ಯಯನ ವಿಸ್ತಾರ ವಾದ ಕ್ಷೇತ್ರಕ್ಕೆ ತನ್ನದೇ ಆದ ಪೂರಕ ಸಾಮಾಗ್ರಿಗಳನ್ನು ಒದಗಿಸಿಕೊಳ್ಳುವಲ್ಲಿ ಕಣ್ಣು ಕಾಣುವ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

# ಅನುಬಂಧಗಳು

೧. ಆಧಾರಗ್ರಂಥಗಳು

೨. ಪ್ರಶ್ನಾವಳಿ

೩. ವಕ್ತೃಗಳು

ಅನುಬಂಧ - ೧

## ಆಧಾರ ಗ್ರಂಥಗಳು

ಅನಸೂಯ ಕಾಂಬಳೆ., ವಿಚಾರ ಸಾಹಿತ್ಯ ಮತ್ತು ಹೆಣ್ಣು (ವೈಚಾರಿಕ ಲೇಖನಗಳು ಸಂಗ್ರಹ,) ವೈಚಾರಿಕ ಸಾಹಿತ್ಯ ಪ್ರಕಾಶನ, ಬೆಳಗಾವಿ, ೧೯೯೯

ಅಂದನೂರ ಶೋಭಾ (ಸಂ.) ಮಹಿಳೆಯ ಮುನ್ನಡೆ, ಮಾನಿನಿ ರಾಜಾಜಿನಗರ, ಬೆಂಗಳೂರು, ೧೯೯೮

ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು (ಆರು ಉಪನ್ಯಾಸಗಳು), ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

ಇಂದಿರಾ ಆರ್., ಸ್ತ್ರೀವಾದಿ ದಿಕ್ಸೂಚಿ, ಪ್ರಕಟಣೆ ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೬

ಇಂದಿರಾ ಆರ್., ಮಹಿಳೆ ಮತ್ತು ಕೌಟುಂಬಿಕ ಹಿಂಸೆ, (ಶ್ರೀಮತಿ ಕವಿತಾ ಸ್ಮಾರಕ ಉಪನ್ಯಾಸಕ ಮಾಲೆ-೩), ಮೈಸೂರು, ೨೦೦೨

ಇಂದಿರಾ. ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ (ಮಹಿಳಾ ಅಭಿವೃದ್ಧಿ ವಿಭಾಗ ಮಾಲೆ-೩), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಉಷಾ ಎಂ., ಮಹಿಳಾ ಅಧ್ಯಯನ ಸಂಪುಟ-೫, ಸಂಚಿಕೆ ೧-೨, ಜನವರಿ - ಡಿಸೆಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಉಷಾ ಎಂ., ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಉಷಾ ಎಂ., ಮಹಿಳೆ ಮತ್ತು ಜಾತಿ : ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ಒಡೆಯರ್ ಡಿ. ಹೆಗ್ಗಡೆ ಎನ್. ಅನ್ನಪೂರ್ಣೇಶ್ವರಿ., ಮಹಿಳಾ ಅಧ್ಯಯನಗಳು ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ಪ್ರಕಾಶಕರು ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

ಕಮಲಾ ಹಂಪನಾ, ಬೊಗಸೆ (ಮಹಿಳೆ ಸುತ್ತ-ಮುತ್ತ) ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಕಬ್ಬಿಸ್ ಎ.ಸಿ., ಕಾನೂನು ಸಾಕ್ಷರತಾ ಮಾಲೆ , ಕಕ್ಷಿದಾರರಿಗೆ ಕಿವಿ ಮಾತು, ಕರ್ನಾಟಕ ರಾಜ್ಯ ಕಾನೂನು ಸೇವೆಗಳು ಪ್ರಾಧಿಕಾರ, ಬೆಂಗಳೂರು, ೨೦೦೫

ಕಿಶೋರಿ ನಾಯಕ್ ಕೆ., ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು, ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೯

ಗಾಯತ್ರಿ ನಾವಾಡ., ವಿರಚನೆ (ಸ್ತ್ರೀವಾದಿ ಸಂಸ್ಕೃತಿ ಚಿಂತನೆ), ಪ್ರಕಾಶಕರು ಎನ್.ಆರ್. ಎ.ಎಂ.ಎಚ್. ಪ್ರಕಾಶನ ಕೊಟ್ಟೇಶ್ವರ ದಕ್ಷಿಣ ಕನ್ನಡ, ೧೯೯೭

ಗೀತಾ ಕೃಷ್ಣಮೂರ್ತಿ., ಮಹಿಳೆ ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಚಂದ್ರಶೇಖರ ಟಿ.ಆರ್., ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಚಂದ್ರಶೇಖರ ಟಿ.ಆರ್., ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಜ್ಯೋತ್ಸ್ನಾಕಾಮತ್., ಮಹಿಳೆ ಅಂದು-ಇಂದು, (ಲೇ) ಸ್ತ್ರೀ-ಪುರುಷರ ಸಮಾನತೆ : ಒಂದು ವಿವೇಚನೆ, ಪ್ರೇಮ ಸಾಯಿ ಪ್ರಕಾಶನ, ಬೆಂಗಳೂರು, ೨೦೦೧

ನೇಮಿಚಂದ್ರ., ಮಹಿಳಾ ಅಧ್ಯಯನ ಅಂಕಿತ ಪುಸ್ತಕ ೫೩, ಬೆಂಗಳೂರು, ೨೦೦೧

ನಂಜುಡೆ ಗೌಡ ಕೆ., (ಪ್ರ.ಸಂ.) ಎಂ.ಎ. ಅರ್ಥಶಾಸ್ತ್ರ, ಗಂಗಾ ಕಾವೇರಿ, (ಲೇ) ಸ್ತ್ರೀ ಸ್ವಾತಂತ್ರ್ಯ, ಬರಗೂರು ರಾಮಚಂದ್ರಪ್ಪ (ಮಹಿಳಾ ಶಕ್ತಿ ಸಂವರ್ಧನೆ ಕುರಿತು ಲೇಖನಗಳ ಸಂಕಲನ), ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕಿಯರ ಸಂಘ, ಬೆಂಗಳೂರು, ೨೦೦೦

ಫ್ರೆಡಿರಿಕ್ ಎಂಗೆಲ್ಸ್., ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ (ಲೂಯಿ ಎಚ್. ಮಾರ್ಗವನರ ಪರಿಶೋಧನೆಗಳ ಬೆಳಕಿನಲ್ಲಿ) ಮಾಸ್ಕೋ, ೧೯೮೦

ಪೆರ್ಲ ಮಾ.ಭ., ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ೨೦೦೦

ಬರಗೂರು ರಾಮಚಂದ್ರಪ್ಪ., (ಪ್ರ.ಸಂ.) ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪ್ರಥಮ ಮುದ್ರಣ ೧೯೯೩, ದ್ವಿತೀಯ ಮುದ್ರಣ ೨೦೦೭

ಮುಳುಗುಂದ ಚ.ವಿ., ಎಚ್.ವಿ. ನಾಗೇಶ, (ಸಂ) ಪ್ರಕಟಣೆ-೨, ಆಧುನಿಕ ಮಹಿಳೆ ಮತ್ತು ಸಮಾಜ, ಮಾತ್ರೋಶ್ರೀ ಪ್ರಕಾಶನ, ಮುದ್ದೆಬಿಹಾಳ

ರಾಜಶೇಖರ ಎಸ್., ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ, ೨೦೦೧

ವನಜಾ ವೆಂ., ಕುಟುಂಬ ಮತ್ತು ಮಹಿಳೆ, ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ಸಂ-೨ ಸಂಚಿಕೆ-೨, ಜುಲೈ, ೨೦೦೦, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಾಣಿಶ್ರೀ ಟಿ.ಕೆ., ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು, ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ವಿಜಯಾದಬ್ಬೆ., ನಾರಿ : ದಾರಿ-ದಿಗಂತ, ರಚನಾ ಪ್ರಕಾಶನ, ಮೈಸೂರು, ೧೯೯೭

ವಿಜಯಾ., ನಿಜಧ್ಯಾನ, ಪ್ರೆಸ್‌ಕ್ಲಬ್ ಪ್ರಕಾಶನ, ಬೆಂಗಳೂರು, ೨೦೦೫

ವಿಭಿನ್ನ ನೆಲೆಗಳು, ವಿಭಿನ್ನ ರಾಜಕೀಯ ಜೆಂಡರ್ ಹಾಗೂ ಅನನ್ಯತೆಗಳು ಒಂದು ವಿಚಾರ ಸಂಕೀರ್ಣ, ನವೆಂಬರ್ ೨೦೦೫, ಹೆಂಗಸರ ಹಕ್ಕಿನ ಸಂಘ ನೆರವು, ಹಿವೋಸ್, ಇಂಡಿಯಾ, ೨೦೦೬

ವಿಜಯಶ್ರೀ ಸಬರದ (ಸಂ.) ಮಹಿಳೆ ಶೋಷಣೆ - ಸವಾಲುಗಳು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫

ವಿವಿಧ ಲೇಖಕರು, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಸುವರ್ಣ ಕರ್ನಾಟಕ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

ವಿಘ್ನೇಶ್ ಎನ್. ಭಟ್., ಭಾರತ ಮತ್ತು ಆಧುನಿಕೋತ್ತರ ಸಮಾಜ ('ಅರಿವು' ವಿಸ್ತರಣೋಪನ್ಯಾಸ ಮಾಲಿಕೆ-೮) ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೧

ಸಮತಾ ಬಿ. ದೇಶಮಾನೆ., ಸಮಾಜಶಾಸ್ತ್ರ ಮತ್ತು ಮಹಿಳೆ, ಚೇತನ ಬುಕ್‌ಹೌಸ್, ಮೈಸೂರು, ೨೦೦೩

ಸುಮಿತ್ರ ಬಾಯಿ ಎಸ್., ವಿಜಯದಬ್ಬೆ (ಅನು) ಮೈಥಿಲಿ ಶಿವರಾಮನ್ (ಮೂಲ) ವಿಮೋಚನೆಯೆಡೆಗೆ, ಮೈಸೂರು, ೧೯೮೬

ಶಾಂತಾ ಇಮ್ರಾಪುರ., ಮಹಿಳಾ-ಸಾಹಿತ್ಯ-ಸಂಸ್ಕೃತಿ, ಚೇತನಾ ಪ್ರಕಾಶನ, ಧಾರವಾಡ, ೨೦೦೧

ಶಿವಚಿತ್ತಾಪ್ಪ ಕೆ., ಎಂ. ಚೌಡೇಗೌಡ., ಮಹಿಳೆ ಮತ್ತು ಅಭಿವೃದ್ಧಿ, ಚಿನ್ಮಯಿ ಪ್ರಕಾಶನ, ಮೈಸೂರು, ೨೦೦೫

ಶ್ರೀ ಮುಗಳಿ, ವೈ.ಕೆ. ಸಂಧ್ಯಾ., (ಪ್ರ.ಸಂ.) ಮಹಿಳೆ ಮತ್ತು ಉದ್ಯೋಗ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ಶ್ರೀಮತಿ ಎಚ್.ಎಸ್., ಹೆಣ್ಣು-ಹೆಂಗಸು, ಬಾಲ್ಯದ ಕೆರೆ ಪ್ರಕಾಶನ, ಮಂಡ್ಯ

ಶ್ರೀಮತಿ ಎಚ್.ಎಸ್., ಚಹರೆ, ಇಳಾ ಪ್ರಕಾಶನ, ಬೆಂಗಳೂರು

ಶ್ರೀಮತಿ ಎಚ್.ಎಸ್., ಮಹಿಳಾ ಅಧ್ಯಯನ ವಿಶೇಷ ಸಂಚಿಕೆ - ದಕ್ಷಿಣಾಯನ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಶ್ರೀಮತಿ ಎಚ್.ಎಸ್., ಸೇರಿಕೊಂಡ ಎಳೆಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಶ್ರೀಮತಿ ಎಚ್.ಎಸ್., ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಶ್ರೀಮತಿ ಎಚ್.ಎಸ್., ಮಹಿಳೆ ದುಡಿಮೆ ಮತ್ತು ಬಿಡುವು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಶ್ರೀಮತಿ ರಮಾದೇವಿ (ಸಂ) ಉರ್ಧ್ವಮುಖಿ, (ಲೇ) ಮಹಿಳೆ ಮತ್ತು ರಾಜಕಾರಣ ಸರಿತಾ ಕೆ. ದೇಸಾಯಿ, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕಿಯರ ಸಂಘ, ಬೆಂಗಳೂರು, ೨೦೦೧

ಶ್ರೀಮತಿ ವಿಮಲಾ ರಾಮರಾವ್., ಮಹಿಳೆ ಮತ್ತು ನಗರ ಜೀವನ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨

ಶೈಲಜಾ ಹಿರೇಮಠ., ಮಾತೃಪ್ರಧಾನ ಪರಿಕಲ್ಪನೆ, (ಕುವೆಂಪು ಜನ್ಮ ಶತಮಾನೋತ್ಸವ ವರ್ಷ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಶೈಲಜಾ ಹಿರೇಮಠ., (ಸಂ) ಮಹಿಳಾ ಅಧ್ಯಯನ ಸಂಪುಟ-೮ ಸಂಚಿ-೧ ಜನವರಿ - ಜೂನ್, ೨೦೦೬

ಹಾ.ಮಾ.ನಾಯಕ., (ಪ್ರ.ಸಂ.) ಕನ್ನಡ ವಿಶ್ವಕೋಶ, ಸಂ-೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

ಹೇಮಲತಾ ಮಹರ್ಷಿ., ಇಪ್ಪತ್ತೊಂದನೆಯ ಶತಮಾನದತ್ತ ಮಹಿಳೆ (ಕಾನೂನು, ಸಮಾಜ ಮತ್ತು ಮಹಿಳೆ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

ಹೇಮಲತಾ ಎಚ್.ಎಂ., ಮಹಿಳಾ ಅಧ್ಯಯನ ಅರ್ಥ, ಹುಟ್ಟು ಬೆಳವಣಿಗೆ ಪರಿಕಲ್ಪನೆ ಸಿದ್ಧಾಂತಗಳು, ಡಿ.ವಿ.ಕೆ. ಮೂರ್ತಿ ಮೈಸೂರು, ೨೦೦೪

ಹೇಮಲತಾ ಎಚ್.ಎಂ., ರಾಜಕೀಯ ಪ್ರಕ್ರಿಯೆಗಳಲ್ಲಿ ಮಹಿಳೆಯರು ಅಭಿವೃದ್ಧಿ ಪ್ರಕ್ರಿಯೆಗಳಲ್ಲಿ ಮಹಿಳೆಯರು "ಕೃಷಿ ಮಹಿಳೆಯ ದುಡಿಮೆ"ಯ ವಿಶ್ಲೇಷಣೆ, ಪ್ರಕಾಶಕರು ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪

## ಇಂಗ್ಲೀಷ್ ಗ್ರಂಥಗಳು


Abha Avasthi, A.K. Srivastava, Rawat., Modernity Feminism and Women Emporment, Publication Jaipur and New Delhi, 2001

Asima Sahu., Women's Liberation and Human Rights. Pointer Publication, Jaipur, 2000 (Inida)

Anita Arya., Indian Women Vol.3, Gyan Pùblishing housing, New Delhi

Bela Rani Sharma., Women Marriage, Family violence and Divorce, Mangal Deep Publications Jaipur, 1997, (India)

Carle C., Zimmerman and T.K.N. Unnithan (Ed), Family and Civilisation in the East and East and the West (With Particular reference to India and the U.S.A.) Thinker and Co.Ltd., Rampartrow, Bombay, 1975

Jyotsna Mishra., Women and Human Rights, Kalpaz Publications, New Delhi, 2000

Lakshamidevi (Editior in Chief), Encyclopacdio of Women Development and Family Welfare series, Women and Development

Maithile Vishwanathan, Women and Society, Vol.-I, Printwell Jaipur, 1994, (India)

Sarojinishintri., Dr. C.R. Yaravinteli Math., Dr. S.L. Shantakumari (Ed), Sumatika Kodkar Karnataka University, Dharwad, 1997

Savita Thankur Joshi., Women and Development, Mittal publication, New Delhi, 1999

Vijayakumar Koushik., Belakanisharma, Encyclopaedia of Human Rights and Women's Development Vol. 5, Sarup and son's, New Delhi, 1998

Vpreti H.C., Nandini Upreti, (Articil) Family Mobility and the position of women in the Indian family Institute for sustainable Development, Lucknous Anmal Publication Pvt. Ltd., New Delhi, 1999

Women and Problems of Gender Discriminination women and their environment (Vol. III)

## ನಿಯತಕಾಲಿಕೆಗಳು


ಯೋಜನಾ ವರದಿ ಜಾಗತೀಕರಣ ಮತ್ತು ಜೀವನಾಧಾರದ ಯಥಾ ದೃಷ್ಟಿ, ಪ್ರೊ. ಎಚ್.ಮಸಾಪತಿ, ಮಹಿಳಾವಾದಿ ವಿಶ್ಲೇಷಣೆ - ಮೇ, ೨೦೦೨

ಹೊಸತು - ಧರ್ಮಗಳೆಂಬ ಮೂಢನಂಬಿಕೆಗಳಿಗಾಗಿ, ಸೀತಾರಾಂ ಕುರುವರಿ - ಸೆಪ್ಟೆಂಬರ್, ೨೦೦೪

ಹೊಸತು - ಜಾಗತೀಕರಣ ಮತ್ತು ಶಿಕ್ಷಣ, ಡಾ. ಜಯಪ್ರಕಾಶ ಮಾವಿನಕುಳಿ - ಅಕ್ಟೋಬರ್, ೨೦೦೬

ಮಾನಸ - ಮಹಿಳೆಯರ ಮೇಲೆ ನಡೆಯುವ ಹಿಂಸೆ, ಕೆ. ವತ್ಸಲ - ಜೂನ್ ೨೦೦೪, ಫೆಬ್ರವರಿ ಮಾರ್ಚ್ ೧೯೯೭, ಮಾರ್ಚ್ ೧೯೯೮, ಮಾರ್ಚ್ ೨೦೦೧, ಮೇ ೨೦೦೧

ಮಾನಸ - ಚುನಾವಣಾ ರಾಜಕೀಯ ಮಹಿಳಾ ಸಂಘಟನೆಗಳ ವ್ಯಕ್ತಿಗಳ ಅಭಿಪ್ರಾಯ - ಮಾರ್ಚ್ ೧೯೯೮

ಶೂದ್ರ - ಮಹಿಳಾ ಶೋಷಣೆಯ ಸ್ವರೂಪ, ಲೇ ಮಹೇಶ ತಿಪ್ಪಶೆಟ್ಟಿ, ೧೯೯೨-೯೩ ಸಂ-೧೯

ಸಂವಾದ - ಮಹಿಳೆ ಮತ್ತು ಸಾರ್ವಜನಿಕ ಜೀವನ, ಕೆ.ವಿದ್ಯಾ - ಮಾರ್ಚ್ ೨೦೦೪

ಅಚಲ - ಮಹಿಳಾವಾದ ಮತ್ತು ಮಹಿಳಾ ಸಂವೇದನೆ, ಕೆ. ಶ್ರೀಲತಾ ಉಡುಪ - ಫೆಬ್ರವರಿ ೨೦೦೩

ಅಚಲ - ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ, ಕವಿತಾ ಬಿ.ಆರ್., - ಅಗಸ್ಟ್, ೨೦೦೪

ಯೋಜನೆ - ಮಹಿಳಾ ಅಭ್ಯುದಯಕ್ಕೆ ಅಂಬೇಡ್ಕರ್‌ವರ ಕೊಡುಗೆ, ಸುಭಾಶಚಂದ್ರ ಸಿ. ನಾಟೀಕರ - ಮಾರ್ಚ್, ೨೦೦೦


## ದಿನಪತ್ರಿಕೆಗಳು


ವಿಜಯಕರ್ನಾಟಕ - ಸಾಪ್ತಾಹಿಕ ವಿಜಯ ನವೆಂಬರ್ ೦೬

ವಿಜಯಕರ್ನಾಟಕ - ಆರೋಗ್ಯ ವಿಜಯ ಜೂಲೈ ೧೮

ವಿಜಯಕರ್ನಾಟಕ - ಮಹಿಳಾ ವಿಜಯ ಜೂಲೈ ೨೫

ಸಂಯುಕ್ತ ಕರ್ನಾಟಕ - ಸಿಂಧೂರ ೬-೩-೧೦, ೧೮-೪-೨೦೦೫ ಸಾಪ್ತಾಹಿಕ ಸೌರಭ

ಪ್ರಜಾವಾಣಿ - ಭೂಮಿಕಾ, ೨೦೦೫-೦೬

**ಮಾಸ ಪತ್ರಿಕೆಗಳು**

ಪ್ರಿಯಾಂಕ - **ಅತ್ತೆಯನ್ನು ಅಮ್ಮನಂತೆ ಕಾಣಬಹುದಲ್ಲವೆ!** ಜನವರಿ ೨೦೦೭, ಪು.೩೦

ಕರ್ಮವೀರ - **ಹೆಣ್ಣಿಗೆ ಸ್ವಾವಲಂತಿನ ಶಾಪವೇ?** ಸುಕನ್ಯಾ, ಸೆಪ್ಟೆಂಬರ್ ೨೦೦೪

ಮನೀಷಾ - **ಗೃಹಕೃತ್ಯದಲ್ಲಿ ಗೃಹಿಣಿಯರ ಪಾತ್ರ,** ಸುಮನ್ ಕೆ.ಎಚ್. ಭಟ್ - ೨೦೦೨-೦೩ **(ವಾರ್ಷಿಕ ಸಂಚಿಕೆ)**

## ಅನುಬಂಧ - ೨

# ಪ್ರಶ್ನಾವಳಿ

## ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ

---

ಕ್ರ.ಸಂ. ...................

### I - ವ್ಯಕ್ತಿಗತ ವಿವರ

ಹೆಸರು :

ವಿಳಾಸ :

ವಯಸ್ಸು :

ವಿದ್ಯಾರ್ಹತೆ : ಜಾತಿ : ಧರ್ಮ :

ಉದ್ಯೋಗ

ವಿವಾಹದ ವಯಸ್ಸು :

ಕೌಟುಂಬಿಕ ವಿವರ :

ಕುಟುಂಬದ ಸದಸ್ಯರು

| ಕ್ರ.ಸಂ. | ಸಂಬಂಧ | ಸ್ವರೂಪ | ಪತಿ, ಪತ್ನಿ ಮಗ, ಮಗಳು | ವಯಸ್ಸು | ಶಿಕ್ಷಣ | ಉದ್ಯೋಗ |
|---|---|---|---|---|---|---|
| ೧ | | | | | | |
| ೨ | | | | | | |
| ೩ | | | | | | |
| ೪ | | | | | | |
| ೫ | | | | | | |

## II - ಕೌಟುಂಬಿಕ ಶ್ರಮವಿಭಜನೆ ಮತ್ತು ಮಹಿಳೆ

*(ಸೂಚನೆ : ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸುವಾಗ ತಮಗೆ ಯಾವುದು ಅನ್ವಯವಾಗುತ್ತದೆಯೋ ಅದಕ್ಕೆ ಈ ✓ ಗುರುತು ಹಾಕಿ ಮತ್ತು ಕೆಲವೊಂದು ಪ್ರಶ್ನೆಗಳಿಗೆ ವಿವರಣೆ ಕೊಡಿ)*

೧. ಮನೆಯ ಕೆಲಸದಲ್ಲಿ ನೆರವು :

ಅ. ಗಂಡ ಆ. ಮಕ್ಕಳು ಇ. ಕೆಲಸದವರಿಂದ ಈ ಯಾರು ಇಲ್ಲ

೨. ಮನೆಯ ಹೊರಗೆ ನಿರ್ವಹಿಸಬೇಕಾದ ಮನೆಯ ಕೆಲಸ :

ಅ. ವಿದ್ಯುಚ್ಛಕ್ತಿ ಬಿಲ್ ಪಾವತಿ ಆ. ದೂರವಾಣಿ ಬಿಲ್ ಪಾವತಿ

ಇ. ಅಗತ್ಯ ವಸ್ತುಗಳ ಖರೀದಿ ಯಾರೂ ನಿರ್ವಹಿಸುತ್ತಾರೆ

೩. ಮಕ್ಕಳ ಶೈಕ್ಷಣಿಕ ಅಗತ್ಯವನ್ನು ನಿರ್ವಹಿಸುವ, ಅವರ ಶಾಲೆಗೆ ಭೇಟಿ ನೀಡುವ ಮತ್ತು ಮಕ್ಕಳ ಓದಿನ ಬಗ್ಗೆ ಗಮನ ನೀಡುವರು ಅಥವಾ ಜವಾಬ್ದಾರಿ ಮನೆಯಲ್ಲಿ ಯಾರು?

ಅಥವಾ

ಮಕ್ಕಳ ಶೈಕ್ಷಣಿಕ ಅಭಿವೃದ್ಧಿ ಬಗ್ಗೆ ಮನೆಯಲ್ಲಿ ಜವಾಬ್ದಾರಿ ನಿರ್ವಹಿಸುವವರು ಯಾರು?

೪. ಕಛೇರಿ ಕೆಲಸವನ್ನು ಮನೆಯಲ್ಲಿ ಮಾಡುತ್ತೀರಿ ಅಂತಹ ಸಂದರ್ಭದಲ್ಲಿ ಕೌಟುಂಬಿಕ ಕೆಲಸದ ಹೊಂದಾಣಿಕೆ ಹೇಗೆ?

೫. ಕಛೇರಿ ಕೆಲಸದ ಅಗತ್ಯಕ್ಕಾಗಿ ಪ್ರಯಾಣ ಕೈಗೊಳ್ಳುವಿರೊ ಆಗ ನಿಮ್ಮ ಗೈರು ಹಾಜರಿಯಲ್ಲಿ ಕುಟುಂಬದ ನಿರ್ವಹಣೆ ಯಾರದು?

೬. ಹೆಣ್ಣು ಮಕ್ಕಳಿಗೆ ಸೂಕ್ತವೆನಿಸುವ ಉದ್ಯೋಗಗಳು ಯಾವ ಬಗೆಯದು?

ಅ. ಬ್ಯಾಂಕ್, ಪೋಸ್ಟ್ ಆಫಿಸ್ ಆ. ಟೀಚರ್

ಇ. ಫೀಲ್ಡ್‌ನಲ್ಲಿ ನಿರ್ವಹಿಸುವ ಕೆಲಸ

೭. ನಿಮ್ಮ ಅಭಿಪ್ರಾಯದಲ್ಲಿ ಇಂತಹದೇ ಕೆಲಸ ಹೆಣ್ಣು ಮಕ್ಕಳಿಗೆ ಸೂಕ್ತವೆಂದು ಹೇಳುವುದಾದರೆ ಏಕೆ ಕಾರಣ ಕೊಡಿ?

೧. ಮನೆಯ ಕೆಲಸದಲ್ಲಿ ನಿಮ್ಮ ಗಂಡನ ನೆರವು ಹೇಗಿದೆ?

೨. ಮನೆಯ ಹೊರಗಡೆ ಮಾಡಬೇಕಾದ ಕೆಲಸದ ನೆರವು ಯಾವ ರೀತಿಯಲ್ಲಿದೆ?

೩. ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯ ಜವಾಬ್ದಾರಿಯಾರದು?

೪. ಕಛೇರಿಯ ಕೆಲಸವನ್ನು ಮನೆಯಲ್ಲಿ ಮಾಡುವ ಸಂದರ್ಭದಲ್ಲಿ ಹೊಂದಾಣಿಕೆ ಹೇಗೆ?

## III - ಸಂಪನ್ಮೂಲ ಹಂಚಿಕೆ ಮತ್ತು ಮಹಿಳೆ

೧. ಹೆಣ್ಣು ಮಕ್ಕಳು ಒಡವೆ ಹೊಂದುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಅ. ಅಲಂಕಾರಕ್ಕೆ ಆ. ಭದ್ರತೆಗೆ ಇ. ಪ್ರತಿಷ್ಠೆಗೆ ಈ. ಬೇಕಿಲ್ಲ

೨. ನೀವು ಮಾಡುವ ಆಸ್ತಿ ಯಾರ ಹೆಸರಿನಲ್ಲಿರಬೇಕು

ಅ. ಗಂಡ ಆ. ನನ್ನ ಹೆಸರು ಇ. ಇಬ್ಬರ ಹೆಸರಿನಲ್ಲಿ

೩. ಮಕ್ಕಳ ಲಾಲನೆ ಪಾಲನೆ ಮಾಡುವ ಕುರಿತು ಸ್ತ್ರೀಗೆ ಹೆಚ್ಚಿನ ಹಕ್ಕುಗಳಿರಬೇಕೆ?

೪. ಹೆಣ್ಣು ಮಕ್ಕಳ ದುಡಿಮೆಯ ಮೇಲೆ ಆತನ ಕುಟುಂಬದವರ ಪಾಲೇನು?

೫. ಮನೆಯಲ್ಲಿ ಕೊಳ್ಳುವ ವಸ್ತುಗಳ ಆಯ್ಕೆ ಯಾರದು?

೬. ಸೀನಿಮಾ / ಪ್ರವಾಸ / ಸ್ನೇಹಿತ / ಸಂಬಂಧಿಕರ ಮನೆಗೆ ಹೋಗುವ ಹವ್ಯಾಸವಿದೆಯೇ? ಹೇಗೆ ಹೋಗುತ್ತೀರಿ?

೭. ಹೆಣ್ಣು ಮಕ್ಕಳ ಉದ್ಯೋಗದ ಗುರಿ ಏನಾಗಿರಬೇಕು?

೮. ಕುಟುಂಬದ ಆದಾಯ ವೆಚ್ಚದ ಹೊಣೆ ಯಾರದು?

೯. ಗಂಡ ಮಕ್ಕಳು ಮನೆಯಲ್ಲಿ ಇಲ್ಲದ ಸಮಯದಲ್ಲಿ ನೀವು ಒಬ್ಬರೇ ಇದ್ದಾಗ ನಿಮ್ಮ ಊಟದ ವ್ಯವಸ್ಥೆ ಹೇಗಿರುತ್ತದೆ?

೧೦. ಗಂಡನ ದುಡಿಮೆಯ ಮೇಲೆ ಆತನ ಕುಟುಂಬದವರ ಪಾಲೇನು?

## IV - ತವರು ಮತ್ತು ಮಹಿಳೆ

೧. ತವರಿಗೆ ಎಷ್ಟು ಸಲ ಭೇಟಿ ನೀಡುತ್ತೀರಿ? ಆಗ ನಿಮ್ಮ ಮನೆಯವರು ನಿಮ್ಮೊಡನೆ ಬರುವರೆ?

೨. ತವರಿನವರು ಸಂಕಷ್ಟದಲ್ಲಿದ್ದರೇ ನಿಮ್ಮ ಜವಾಬ್ದಾರಿ ಏನೆಂದು ಭಾವಿಸುವಿರಿ?

೧. ನೀವೆ ತವರು ಮನೆಗೆ ಹೋಗುವಿರೋ?

೨. ಅಥವಾ ಅವರನ್ನೇ ನಿಮ್ಮ ಮನೆಗೆ ಕರೆಸಿಕೊಳ್ಳುವಿರೋ?

೩. ಅಕ್ಕ / ಅಮ್ಮ / ಸಹೋದರರು ಅವರೇ ನೋಡಿಕೊಳ್ಳುತ್ತಾರೆಯೋ?

೩. ತವರಿನಿಂದ ಸಹಾಯ ಪಡೆಯುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೪. ಹೆಂಡತಿಯ ವಾಸಸ್ಥಾನದಲ್ಲಿ ಗಂಡ ಇರುವುದರ ಬಗ್ಗೆ ನಿಮ್ಮ ಅಭಿಪ್ರಾಯ?

೫. ತವರು ಮನೆಗೆ ನೀವು ಸಾಧಾರಣವಾಗಿ ಏನನ್ನು ಉಡುಗೊರೆಯಾಗಿ ಕೊಡುತ್ತೀರಿ? ಇದನ್ನು ಕೊಡುವುದರ ಬಗ್ಗೆ ನಿಮ್ಮ ಮನೆಯವರ ಪ್ರತಿಕ್ರಿಯೆ ಏನು?

೬. ತವರು ಮನೆಯವರು ನಿಮಗೆ ಏನನ್ನು ಉಡುಗೊರೆಯಾಗಿ ಕೊಡುತ್ತಾರೆ? ಇದರ ಬಗ್ಗೆ ನಿಮ್ಮ ಮನೆಯವರ ಪ್ರತಿಕ್ರಿಯೆ ಏನು?

## V - ಚಿಂತನಾ ಕ್ರಮ ಮತ್ತು ಮಹಿಳೆ

೧. ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಕೆಳಗಿದೆ ಎಂಬುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೨. ಸ್ತ್ರೀ ಶಿಕ್ಷಣ ಯಾವ ಹಂತದ್ದಾಗಿರಬೇಕು?

೩. ಗಂಡನಿಗಿಂತ ಹೆಂಡತಿ ಹೆಚ್ಚು ಓದುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೪. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಅಗತ್ಯವೇ? ಹೌದು / ಇಲ್ಲ ಎಂದಾದರೆ ಕಾರಣ ಕೊಡಿ?

೫. ಕುಟುಂಬದಲ್ಲಿ ಪುರುಷನಿಗಿಂತ ಹೆಚ್ಚಿನ ಉದ್ಯೋಗದಲ್ಲಿ ಸ್ತ್ರೀಯರು ಇರುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

೬. ಆಸ್ತಿ ಹಕ್ಕಿನ ಬಗ್ಗೆ ನಿಮ್ಮ ಅಭಿಪ್ರಾಯ?

೧. ತವರು ಮನೆಯ ಆಸ್ತಿ : ಬೇಕು? ಬೇಡವೆ? ಏಕೆ?____________________

೨. ಗಂಡನ ಮನೆಯ ಆಸ್ತಿ : ಬೇಕು? ಬೇಡವೇ? ಏಕೆ?____________________

೭. ಕುಟುಂಬದ ಆಸ್ತಿ ಇಬ್ಬರ ಹೆಸರಿನಲ್ಲಿ ಇರಬೇಕೆಂಬುದರ ಕುರಿತು ಅಭಿಪ್ರಾಯವೇನು?

೮. ಸ್ತ್ರೀ-ಪುರುಷನಿಗಿಂತ ಕಡಿಮೆ ಸಾಮರ್ಥ್ಯವನ್ನು ಹೊಂದಿರುತ್ತಾಳೆಯೇ? ಹೌದು / ಇಲ್ಲ?

೯. ಹೊಂದಿದ್ದಗೆ ಹೊಂದಿಲ್ಲಾ ಎಂದಾದರೆ ನಿಮ್ಮ ಪ್ರಕಾರ ಅದಕ್ಕೆ ಕಾರಣವೇನು?

೧೦. ಮಹಿಳೆಯರಿಗೆ ಮೀಸಲಾತಿ ಇರಬೇಕೆ / ಬೆಡವೇ? ಹೌದು / ಇಲ್ಲ?

ಸ್ಥಳ :

ದಿನಾಂಕ :

ಸಹಿ/-

## ಅನುಬಂಧ - ೩ ಅಧ್ಯಯನಕ್ಕೆ ಮಾಹಿತಿ ಒದಗಿಸಿದ ವಕ್ತೃಗಳು

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೧ | ಶ್ರೀಮತಿ ಚಂದ್ರಭಾಗಮ್ಮ | ೪೮ | ಪರಿಶಿಷ್ಟ | ಎಂ.ಎ.,ಬಿಎಡ್ | ಉಪನ್ಯಾಸಕಿ | ಶಕ್ತಿನಗರ |
| ೨ | ಶ್ರೀಮತಿ ಶೋಭಾಗಂ | ೨೧ | ಸಮಗಾರ | ಪಿಯುಸಿ ದ್ವಿತೀಯ | ಸಹ ಶಿಕ್ಷಕಿ | ಶಕ್ತಿನಗರ |
| ೩ | ಶ್ರೀಮತಿ ಜಯಮಾಲಾ | ೩೧ | ಪರಿಶಿಷ್ಟ | ಪಿಯುಸಿ ಇಂಟರ್‌ಶಿಫ್ | ಸಹ ಶಿಕ್ಷಕಿ | ಶಕ್ತಿನಗರ |
| ೪ | ಶ್ರೀಮತಿ ಜಯಂತಿ | ೩೩ | ಮಚಿಗಾರ | ಬಿ.ಎ., ಬಿಎಡ್ | ಬಿ.ಆರ್.ಪಿ | ಶಕ್ತಿನಗರ |
| ೫ | ಶ್ರೀಮತಿ ಅನಿತಾ | ೩೮ | ದೇವಾಂಗ | ಇಂಟರ್‌ಶಿಫ್ | ಸಹ ಶಿಕ್ಷಕಿ | ಆದರ್ಶನಗರ |
| ೬ | ಶ್ರೀಮತಿ ಶರಣಮ್ಮ ನೆಲೋಗಿ | ೫೫ | ಲಿಂಗಾಯತ | ಬಿ.ಎ. ಟಿಸಿಎಚ್ | ಶಿಕ್ಷಕಿ | ಪಿ.ಡಬ್ಲ್ಯು.ಡಿ. ಜೇವರ್ಗಿ |
| ೭ | ಶ್ರೀಮತಿ ಚಂದುಬಾಯಿ ಕೋರೆ | ೩೯ | ಲಿಂಗಾಯತ | ಎಂ.ಎ. ಬಿಎಡ್ | ಸಹ ಶಿಕ್ಷಕಿ | ಮತ್ತಂಪುರ |
| ೮ | ಶ್ರೀಮತಿ ಶರಣಮ್ಮ ಬಿ. ಕಮರಿಮಠ | ೩೪ | ಲಿಂಗಾಯ | ಬಿ.ಎ. ಬಿಎಡ್., ಟಿಸಿಎಚ್ | ಸಹ ಶಿಕ್ಷಕಿ | ಮಹೆಬೂಬ್ ನಗರ |
| ೯ | ಶ್ರೀಮತಿ ನೀಲಮ್ಮ | ೫೪ | ಜಂಗಮ | ಟಿ.ಸಿ.ಎಚ್. | ಸಹ ಶಿಕ್ಷಕಿ | ಬಡೆಪೂರ |
| ೧೦ | ಶ್ರೀಮತಿ ಹೇಮಾವತಿ | ೪೧ | ಜಂಗಮ | ಟಿ.ಸಿ.ಎಚ್. | ಸಹ ಶಿಕ್ಷಕಿ | ಓಕಳಿ ಕ್ಯಾಂಪ್ |
| ೧೧ | ಶ್ರೀಮತಿ ಮನೋರಮಾ ನಾಯಕ | ೪೦ | ಲಂಬಾಣಿ | ಬಿ.ಎ. ಬಿಎಡ್ | ಸಹ ಶಿಕ್ಷಕಿ | ಆದರ್ಶನಗರ |
| ೧೨ | ಶ್ರೀಮತಿ ರೇಣುಕಾ | ೩೨ | ಗಾಣಿಗ | ಬಿ.ಎ. ಬಿಎಡ್ | ಶಿಕ್ಷಕಿ | ಶಕ್ತಿನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೧೩ | ಶ್ರೀಮತಿ ತಾರಾಬಾಯಿ | ೫೩ | ಪರಿಶಿಷ್ಟ | ಪಿಯುಸಿ | ಸಹ ಶಿಕ್ಷಕಿ | ಶಕ್ತಿನಗರ |
| ೧೪ | ಶ್ರೀಮತಿ ಗಿರಿಜಾ | ೩೯ | ಲಂಬಾಣಿ | ಟಿಸಿಎಚ್ | ಸಹ ಶಿಕ್ಷಕಿ | ಆದರ್ಶನಗರ |
| ೧೫ | ಶ್ರೀಮತಿ ಶಾರದಾ | ೨೬ | ಲಿಂಗಾಯತ | ಬಿ.ಎ. | ಸಹ ಶಿಕ್ಷಕಿ | ಶಕ್ತಿನಗರ |
| ೧೬ | ಶ್ರೀಮತಿ ನಿರ್ಮಲಾ | ೪೮ | ಲಿಂಗಾಯತ | ಎಸ್‌ಎಸ್‌ಎಲ್‌ಸಿ ಟಿಸಿಎಚ್ | ಸಹ ಶಿಕ್ಷಕಿ | ಸಂತೋಷ ಕಾಲೋನಿ |
| ೧೭ | ಶ್ರೀಮತಿ ಉಷಾದೇವಿ | ೫೫ | ಬ್ರಾಹ್ಮಣ | ಎಸ್‌ಎಸ್‌ಎಲ್‌ಸಿ ಟಿಸಿಎಚ್ | ಸಹ ಶಿಕ್ಷಕಿ | ಓಂ ನಗರ |
| ೧೮ | ಶ್ರೀಮತಿ ಜಗದೇವಿ | ೪೦ | ಲಿಂಗಾಯತ | ಪಿಯುಸಿ - ದ್ವಿತೀಯ | ಸಹ ಶಿಕ್ಷಕಿ | ಓಂ ನಗರ |
| ೧೯ | ಶ್ರೀಮತಿ ಭಾರತಿ | ೪೦ | ಪರಿಶಿಷ್ಟ | ಎಸ್‌ಎಸ್‌ಎಲ್‌ಸಿ ಟಿಸಿಎಚ್ | ಸಹ ಶಿಕ್ಷಕಿ | ಸಿ.ಐ.ಬಿ. ಕಾಲೋನಿ |
| ೨೦ | ಶ್ರೀಮತಿ ಜಯಶ್ರೀ | ೨೩ | ಕಬ್ಬಲಿಗ | ಬಿ.ಎ. ಎಂ.ಎ. | ಪ್ರಥಮ ದರ್ಜೆ ಸಹಾಯಕರು | ಸೂಪರ್ ಮಾರ್ಕೆಟ್, ಗುಲ್ಬರ್ಗಾ |
| ೨೧ | ಶ್ರೀಮತಿ ಮಹಾದೇವಿ | ೪೮ | III-ಬಿ | ಟಿ.ಸಿ.ಎಚ್ | ಸಹ ಶಿಕ್ಷಕಿ | ಎಂ.ಆರ್.ಎಂ.ಸಿ. ಕಾಲೇಜು, ಗುಲ್ಬರ್ಗಾ |
| ೨೨ | ಶ್ರೀಮತಿ ಶ್ರೀದೇವಿ | ೪೦ | III-ಬಿ | ಟಿ.ಸಿ.ಎಚ್ | ಸ್ವಯಂ ಸೇವಕಿ | ಜಗತ್ |
| ೨೩ | ಶ್ರೀಮತಿ ಮಹಾನಂದ | ೪೩ | ಕೂರಮಾ | ಟಿ.ಸಿ.ಎಚ್ | ಸಹ ಶಿಕ್ಷಕಿ | ಜಗತ್ |
| ೨೪ | ಶ್ರೀಮತಿ ಶಿವಲಿಂಗಮ್ಮ ಆರ್. | ೪೨ | ಒಕ್ಕಲಿಗ | ಎಂ.ಎ. ಬಿಎಡ್ | ಶಿಕ್ಷಕಿ | ಬ್ರಹ್ಮಪುರ |
| ೨೫ | ಶ್ರೀಮತಿ ರಾಜಮ್ಮಾ ಪಾಟೀಲ್ | ೩೪ | ನೇಕಾರ | ಬಿ.ಎ. | ಸಹ ಶಿಕ್ಷಕಿ | ಗಾಂಧೀನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೧೬ | ಶ್ರೀಮತಿ ಪಾರ್ವತಿ ಎಲ್. | ೨೫ | ಆದಿ ಕರ್ನಾಟಕ | ಟಿ.ಸಿ.ಎಚ್. | ಸಹ ಶಿಕ್ಷಕಿ | ಗಾಂಧೀನಗರ |
| ೧೭ | ಶ್ರೀಮತಿ ಶಾಂತ | ೫೨ | ಕ್ರಿಶ್ಚಿಯನ್ | ಬಿ.ಎ. | ಶಿಕ್ಷಕಿ | ಗಾಂಧೀನಗರ |
| ೧೮ | ಶ್ರೀಮತಿ ಬೇಬಿನಂದಾ | ೪೨ | ಡೋರ | ಟಿ.ಸಿ.ಎಚ್. | ಶಿಕ್ಷಕಿ | ಸ್ಟೇಷನ್ ಬಜಾರ್ |
| ೧೯ | ಶ್ರೀಮತಿ ಶೋಭಾ | ೪೭ | ಕ್ರಿಶ್ಚಿಯನ್ | ಟಿ.ಸಿ.ಎಚ್. | ಶಿಕ್ಷಕಿ | ಗುಲ್ಲಾಬಡಿ |
| ೨೦ | ಶ್ರೀಮತಿ ನಾಗಮ್ಮ | ೩೨ | ಪರಿಶಿಷ್ಟ | ಟಿ.ಸಿ.ಎಚ್. | ಶಿಕ್ಷಕಿ | ಸ್ಟೇಷನ್ ಬಜಾರ್ |
| ೨೧ | ಶ್ರೀಮತಿ ಸಾವಿತ್ರಿಬಾಯಿ | ೪೫ | ಲಿಂಗಾಯತ | ಎಂ.ಎ. | ಶಿಕ್ಷಕಿ | ಸರಸ್ವತಿ ಪುರ |
| ೨೨ | ಶ್ರೀಮತಿ ವಿದ್ಯಾ | ೩೦ | ಲಿಂಗಾಯತ | ಬಿ.ಎ. ಎಂಎಡ್ | ಶಿಕ್ಷಕಿ | ವೆಂಕಟೇಶನಗರ |
| ೨೩ | ಶ್ರೀಮತಿ ಶಾಂತಾ ಜಯಪ್ರಕಾಶ್ | ೩೪ | ಪರಿಶಿಷ್ಟ | ಟಿ.ಸಿ.ಎಚ್. | ಶಿಕ್ಷಕಿ | ಶಾಸ್ತ್ರೀನಗರ |
| ೨೪ | ಶ್ರೀಮತಿ ದೀಪಾ | ೩೦ | ಬ್ರಾಹ್ಮಣ | ಟಿ.ಸಿ.ಎಚ್. | ಶಿಕ್ಷಕಿ | ವೆಂಕಟೇಶ ನಗರ |
| ೨೫ | ಶ್ರೀಮತಿ ಸುರೇಖಾ ಆರ್.ಪಿ. | ೩೪ | ಬ್ರಾಹ್ಮಣ | ಬಿ.ಎ. | ಶಿಕ್ಷಕಿ | ಸ್ಟೇಷನ್ ರೋಡ್ |
| ೨೬ | ಶ್ರೀಮತಿ ಸದಮಲ | ೩೭ | ಕ್ರಿಶ್ಚಿಯನ್ | ಪಿ.ಯು.ಸಿ. | ಕಿ.ಮ.ಆರೋಗ್ಯ ಕಾರ್ಯಕರ್ತೆ | ಸಿ.ಐ.ಬಿ. ಕಾಲೋನಿ |
| ೨೭ | ಶ್ರೀಮತಿ ಲಲಿತಾಬಾಯಿ | ೩೦ | ಪರಿಶಿಷ್ಟ | ಪಿ.ಯು.ಸಿ | ಶಿಕ್ಷಕಿ | ಘಾಟಗೇಲೆಔಟ್ |
| ೨೮ | ಶ್ರೀಮತಿ ಮಲ್ಲಮ್ಮ | ೪೬ | ಪರಿಶಿಷ್ಟ | ಬಿ.ಎ. | ಶಿಕ್ಷಕಿ | ಶಕ್ತಿನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೩೯ | ಶ್ರೀಮತಿ ಸುವರ್ಣ ಬಾಯಿ | ೨೬ | ಪರಿಶಿಷ್ಟ | ಬಿ.ಎ. | ಸ್ವಯಂಸೇವಕಿ | ಆಶೋಕ ನಗರ |
| ೪೦ | ಶ್ರೀಮತಿ ಸರಸ್ವತಿ | ೩೦ | ಲಿಂಗಾಯತ | ಎನ್.ಟಿ.ಸಿ. | ಶಿಕ್ಷಕಿ | ಸಿ.ಐ.ಬಿ. ಕಾಲೋನಿ |
| ೪೧ | ಶ್ರೀಮತಿ ಸುರೇಖಾ | ೨೮ | ಪರಿಶಿಷ್ಟ | ಎಂ.ಎಸ್ಸಿ. ಬಿ.ಎಡ್ | ಶಿಕ್ಷಕಿ | ಸಿ.ಐ.ಬಿ. ಕಾಲೋನಿ |
| ೪೨ | ಶ್ರೀಮತಿ ಸ್ಟೇಲಾಕರುಣ | ೪೨ | ಕ್ರಿಶ್ಚಿಯನ್ | ಬಿ.ಎ. ಎಂ.ಎಡ್ | ಶಿಕ್ಷಕಿ | ವೆಂಕಟೇಶ ನಗರ |
| ೪೩ | ಶ್ರೀಮತಿ ಕಲಾವತಿ | ೩೩ | ಬ್ರಾಹ್ಮಣ | ಟಿ.ಸಿ.ಎಚ್. | ಶಿಕ್ಷಕಿ | ಸಂಗಮೇಶ್ವರ ಕಾಲೋನಿ |
| ೪೪ | ಶ್ರೀಮತಿ ಚಂದ್ರಮ್ಮ | ೨೩ | ಪರಿಶಿಷ್ಟ | ಎಂ.ಎಸ್.ಡಬ್ಲ್ಯು | ಸಮಾಜ ಕಾರ್ಯಕರ್ತೆ | ಬಿದ್ದಾಪುರ ಕಾಲೋನಿ |
| ೪೫ | ಶ್ರೀಮತಿ ಪಾಪಮ್ಮ | ೪೬ | ಪರಿಶಿಷ್ಟ | ಬಿ.ಎ. | ಸಹಾಯ ಶಿ.ಯೋಜನಾಧಿಕಾರಿ | ಸಿ.ಐ.ಬಿ. ಕಾಲೋನಿ |
| ೪೬ | ಶ್ರೀಮತಿ ಡಾ. ಶಾಂತಮಠ | ೪೨ | ಜಂಗಮ | ಎಂ.ಎ. ಪಿಎಚ್.ಡಿ | ಅಧ್ಯಾಪಕರು | ಜೇವರ್ಗಿ |
| ೪೭ | ಶ್ರೀಮತಿ ಸರೋಜಾ | ೪೦ | ವೀರಶೈವ | ಬಿ.ಎ. | ಲೆಕ್ಕಾಧಿಕಾರಿ | ರಾಜಾಪೂರ |
| ೪೮ | ಶ್ರೀಮತಿ ನಾಗರತ್ನ | ೪೫ | ವೀರಶೈವ | ಬಿ.ಎ. | ಶಿಕ್ಷಕಿ | ಸಂತೋಷ ಕಾಲೋನಿ |
| ೪೯ | ಶ್ರೀಮತಿ ಛಾಯ | ೩೮ | ಕುರುಬ | ಎಂ.ಎಸ್ಸಿ. ಎಂಫಿಲ್ | ಶಿಕ್ಷಕಿ | ಗುಬ್ಬಿ ಕಾಲೋನಿ |
| ೫೦ | ಶ್ರೀಮತಿ ಶಿವಲೀಲಾ | ೪೦ | ಜಂಗಮ | ಎಂ.ಲೀಬ್ | ಗ್ರಂಥಪಾಲಕರು | ಪಿ.ಡಿ.ಎ. |
| ೫೧ | ಶ್ರೀಮತಿ ರೇಷ್ಮಾ ಆರ್. | ೨೫ | ಪರಿಶಿಷ್ಟ | ಬಿ.ಎ. | ಸಹಾಯಕಿ ಗ್ರಂಥಪಾಲಕಿ | ಶಕ್ತಿನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೫೨ | ಶ್ರೀಮತಿ ಜಗದೇವಿ | ೩೨ | ಪರಿಶಿಷ್ಟ | ಟಿ.ಸಿ.ಎಚ್. | ಶಿಕ್ಷಕಿ | ಬಿದ್ದಾಪೂರ ಕಾಲೋನಿ |
| ೫೩ | ಶ್ರೀಮತಿ ಆಶಾ | ೨೨ | ಪರಿಶಿಷ್ಟ | ಬಿ.ಪಿ. | ಗುಮಾಸ್ತೆ | ಎ.ಸಿ.ಸಿ. ಕಾಲೋನಿ |
| ೫೪ | ಶ್ರೀಮತಿ ಮಹಾನಂದಾ | ೩೨ | ಲಿಂಗಾಯತ | ಎಂ.ಕಾಂ. | ಕಿರಿಯಸಹಾಯಕಿ | ಎಂ.ಬಿ. ನಗರ |
| ೫೫ | ಶ್ರೀಮತಿ ಮಲ್ಲಮ್ಮ | ೩೨ | ಲಿಂಗಾಯತ | ಬಿ.ಕಾಂ. | ಕಿರಿಯ ಸಹಾಯಕಿ | ಎಂ.ಬಿ. ನಗರ |
| ೫೬ | ಶ್ರೀಮತಿ ಮೀನಾಕ್ಷಿ | ೩೨ | ಲಿಂಗಾಯತ | ಬಿ.ಎ. | ಬ್ಯಾಂಕ್ ಉದ್ಯೋಗಿ | ಸುಪರ್ ಮಾರ್ಕೆಟ್ |
| ೫೭ | ಶ್ರೀಮತಿ ಜಯಲಕ್ಷ್ಮಿ | ೩೨ | ವೀರಶೈವ | ಎಂ.ಕಾಂ. ಎಂಫಿಲ್ | ಬ್ಯಾಂಕ್ ಉದ್ಯೋಗಿ | ಸುಪರ್ ಮಾರ್ಕೆಟ್ |
| ೫೮ | ಶ್ರೀಮತಿ ರೇಣುಕಾ ಬಿ. | ೩೩ | ವೀರಶೈವ | ಎಂ.ಕಾಂ. | ಬ್ಯಾಂಕ್ ಉದ್ಯೋಗಿ | ಬಸವೇಶ್ವರ ಕಾಲೋನಿ |
| ೫೯ | ಶ್ರೀಮತಿ ಕನಕ ಕುಲಕರ್ಣಿ | ೩೬ | ಬ್ರಾಹ್ಮಣ | ಪಿ.ಯು.ಸಿ. | ಶಿಕ್ಷಕಿ | ವಿವೇಕಾನಂದ ನಗರ |
| ೬೦ | ಶ್ರೀಮತಿ ಪ್ರತಿಭಾ | ೪೦ | ಲಿಂಗಾಯತ | ಎಂ.ಎ. ಎಂಎಡ್ | ಶಿಕ್ಷಕಿ | ಶಾಸ್ತ್ರೀನಗರ |
| ೬೧ | ಶ್ರೀಮತಿ ಚೆನ್ನಮ್ಮಾ | ೨೮ | ಲಿಂಗಾಯತ | ಪಿ.ಯು.ಸಿ. ಟಿಸಿಎಚ್ | ಶಿಕ್ಷಕಿ | ಶಾಸ್ತ್ರೀನಗರ |
| ೬೨ | ಶ್ರೀಮತಿ ನಿರ್ಮಲಾ | ೩೦ | ಲಿಂಗಾಯತ | ಬಿ.ಎ. ಬಿಎಡ್ | ಶಿಕ್ಷಕಿ | ಶಾಸ್ತ್ರೀನಗರ |
| ೬೩ | ಶ್ರೀಮತಿ ನೀಲಮ್ಮ | ೩೦ | ಲಿಂಗಾಯತ | ಟಿ.ಸಿ.ಎಚ್. | ಶಿಕ್ಷಕಿ | ಶಾಸ್ತ್ರೀನಗರ |
| ೬೪ | ಶ್ರೀಮತಿ ಗಂಗಮ್ಮ | ೪೫ | ಲಿಂಗಾಯತ | ಟಿ.ಸಿ.ಎಚ್. | ಶಿಕ್ಷಕಿ | ಶಾಸ್ತ್ರೀನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೬೫ | ಶ್ರೀಮತಿ ಲಕ್ಷ್ಮೀ | ೪೨ | ಮರಾಠ | ಟಿ.ಸಿ.ಎಚ್. | ಸಹ ಶಿಕ್ಷಕಿ | ಬಾಲಾಜಿ ನಗರ |
| ೬೬ | ಶ್ರೀಮತಿ ಮಂಜುಳಾ | ೪೩ | ಪರಿಶಿಷ್ಟ | ಬಿ.ಎ. ಬಿಎಡ್ | ಪ್ರೌಢ ಶಿಕ್ಷಕಿ | ಬಾಲಾಜಿ ನಗರ |
| ೬೭ | ಶ್ರೀಮತಿ ಶ್ರೀದೇವಿ | ೩೪ | ಪರಿಶಿಷ್ಟ | ಬಿ.ಎ. | ಕೆ.ಇ.ಬಿ. ಕಿರಿಯ ಸಹಾಯಕಿ | ಬಸವ ನಗರ |
| ೬೮ | ಶ್ರೀಮತಿ ಸುರೇಖಾ | ೩೬ | ನೇಕಾರ | ಬಿ.ಎ. ಬಿಎಡ್ | ಸಹ ಶಿಕ್ಷಕಿ | ಮಲ್ಲಾಬಾದ |
| ೬೯ | ಶ್ರೀಮತಿ ಸುಮಿತ್ರಾ | ೪೨ | ಲಂಬಾಣಿ | ಟಿ.ಸಿ.ಎಚ್. | ಸಹ ಶಿಕ್ಷಕಿ | ರಾಜಾಪುರ ಕಾಲೋನಿ |
| ೭೦ | ಶ್ರೀಮತಿ ಮಾರೆಮ್ಮಾ | ೫೦ | ಪರಿಶಿಷ್ಟ | ಟಿ.ಸಿ.ಎಚ್. | ಸಹ ಶಿಕ್ಷಕಿ | ಸಿ.ಐ.ಬಿ. ಕಾಲೋನಿ |
| ೭೧ | ಶ್ರೀಮತಿ ಅಂಬಿಕಾ | ೨೨ | ಪರಿಶಿಷ್ಟ | ಎಂ.ಎಸ್.ಡಬ್ಲ್ಯು | ಸಮಾಜ ಕಾರ್ಯಕರ್ತೆ | ಭೀಮನಗರ |
| ೭೨ | ಶ್ರೀಮತಿ ಸುಹಾಸಿನಿ | ೩೨ | ಕ್ರಿಶ್ಚಿಯನ್ | ಎಂ.ಕಾಂ. | ಅಕೌಂಟೆಟ್ | ಸಿ.ಐ.ಬಿ. ಕಾಲೋನಿ |
| ೭೩ | ಶ್ರೀಮತಿ ಜಯಲಕ್ಷ್ಮೀ | ೨೫ | ಲಿಂಗಾಯತ | ಬಿ.ಎಲ್.ಐ.ಸಿ. | ಸ. ಗ್ರಂಥಪಾಲಕಿ | ಕಾಂತಾ ಲೇಔಟ್ |
| ೭೪ | ಶ್ರೀಮತಿ ಶೈಲಾ | ೨೮ | ರಾಜಪೂತ | ಬಿ.ಎ. | ಗುಮಾಸ್ತಿ | ಶಾಂತಾ ಲೇಔಟ್ |
| ೭೫ | ಶ್ರೀಮತಿ ಇಂದಿರಾ | ೨೬ | ಪರಿಶಿಷ್ಟ | ಡಿಪ್ಲೋಮಾ ಎಲೆಕ್ಟ್ರಿಕಲ್ | ಎಲೆಕ್ಟ್ರಿಕಲ್ | ಗುಬ್ಬಿ ಕಾಲೋನಿ |
| ೭೬ | ಶ್ರೀಮತಿ ಸುಗಂಧ | ೩೫ | ಕಬ್ಬಲಿಗ | ಟಿ.ಸಿ.ಎಚ್. | ಶಿಕ್ಷಕಿ | ಬಸವೇಶ್ವರ ಕಾಲೋನಿ |
| ೭೭ | ಶ್ರೀಮತಿ ಸುಮಂಗಲ | ೨೯ | ಕಬ್ಬಲಿಗ | ಬಿ.ಕಾಂ. | ಬ್ಯಾಂಕ್ ಉದ್ಯೋಗಿ | ಎಂ.ಬಿ. ನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೭೮ | ಶ್ರೀಮತಿ ಶಶಿಕಲಾ | ೩೪ | ಪರಿಶಿಷ್ಟ | ಟಿ.ಸಿ.ಎಚ್. | ಅಂಗನವಾಡಿ ಕಾರ್ಯಕರ್ತೆ | ಸಿ.ಐ.ಬಿ. ಕಾಲೋನಿ |
| ೭೯ | ಶ್ರೀಮತಿ ಸಂಗೀತಾ ಕಂಬಳೆ | ೨೮ | ಪರಿಶಿಷ್ಟ | ಎಂ.ಎಲ್.ಐ.ಎಸ್.ಸಿ. | ಗ್ರಂಥಾಲಯ ಸಹಾಯಕಿ | ಕುವೆಂಪು ನಗರ |
| ೮೦ | ಶ್ರೀಮತಿ ತಾರಾಬಾಯಿ | ೪೫ | ಪರಿಶಿಷ್ಟ | ಪಿ.ಯು.ಸಿ. | ಅಂಗನವಾಡಿ ಕಾರ್ಯಕರ್ತೆ | ಸಿ.ಐ.ಬಿ. ಕಾಲೋನಿ |
| ೮೧ | ಶ್ರೀಮತಿ ಶೈಲಜಾ | ೩೦ | ಲಿಂಗಾಯತ | ಬಿ.ಎ. | ಶಿಕ್ಷಕಿ | ಬಸವೇಶ್ವರ ಕಾಲೋನಿ |
| ೮೨ | ಶ್ರೀಮತಿ ಜ್ಯೋತಿ | ೨೫ | ಪರಿಶಿಷ್ಟ | ಪಿಯುಸಿ | ಅಂಗನವಾಡಿ ಕಾರ್ಯಕರ್ತೆ | ಸಿ.ಐ.ಬಿ. ಕಾಲೋನಿ |
| ೮೩ | ಶ್ರೀಮತಿ ಸಂಗೀತಾ | ೪೨ | ಸಮಗಾರ | ಬಿ.ಎ. | ಹಿಟ್ಟಿನ ಗಿರಣಿ | ಸಿ.ಐ.ಬಿ. ಕಾಲೋನಿ |
| ೮೪ | ಶ್ರೀಮತಿ ವಿದ್ಯಾವತಿ | ೪೦ | ಪರಿಶಿಷ್ಟ | ಬಿ.ಎ. | ಬೆರಳಚ್ಚುಗಾರ್ತಿ | ಶಕ್ತಿ ನಗರ |
| ೮೫ | ಶ್ರೀಮತಿ ರತ್ನಮ್ಮ | ೪೦ | ಪರಿಶಿಷ್ಟ | ಪಿಯುಸಿ | ಜನರಲ್ ಸ್ಟೋರ್ಸ್ | ಐ.ಓನ್. ಶಾಹಿ |
| ೮೬ | ಶ್ರೀಮತಿ ಲಕ್ಷ್ಮೀ | ೪೧ | ವೈಶ್ಯ | ಪಿಯುಸಿ | ವ್ಯಾಪರಸ್ಥರು | ಸ್ಟೇಷನ್ ರೋಡ್ |
| ೮೭ | ಶ್ರೀಮತಿ ಸವಿತಾ | ೩೨ | ಲಿಂಗಾಯತ | ಪಿಯುಸಿ. ಐ.ಎನ್.ಟಿ.ಸಿ. | ಸಹ ಶಿಕ್ಷಕಿ | ವೆಂಕಟೇಶ ನಗರ |
| ೮೮ | ಶ್ರೀಮತಿ ರುದ್ರಮ್ಮ | ೩೦ | ಲಿಂಗಾಯತ | ಪಿಯುಸಿ ದ್ವಿತೀಯ | ಅಂಗನವಾಡಿ ಶಿಕ್ಷಕಿ | ಗಾಜಿಪೂರ ಕಾಲೋನಿ |
| ೮೯ | ಶ್ರೀಮತಿ ರತ್ನಮ್ಮ | ೩೫ | ಆರ್ಯ | ಟಿ.ಸಿ.ಎಚ್. | ಸಹ ಶಿಕ್ಷಕಿ | ಗಾಜಿಪೂರ ಕಾಲೋನಿ |
| ೯೦ | ಶ್ರೀಮತಿ ಶಿವಮ್ಮ | ೩೨ | ವಾಲ್ಮೀಕಿ | ಬಿ.ಎ. | ಬೇಕರಿ ಅಂಗಡಿ | ಶಕ್ತಿನಗರ |

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ಸ್ಥಳ |
|---|---|---|---|---|---|---|
| ೯೧ | ಶ್ರೀಮತಿ ಸರಸ್ವತಿ | ೩೦ | ಪರಿಶಿಷ್ಟ | ಪಿಯುಸಿ | ಬ್ಯಾಂಗಲ್‌ಸ್ಟೋರ್ಸ್ | ಶಾಂತಿ ನಗರ |
| ೯೨ | ಶ್ರೀಮತಿ ಗೀತಾಂಜಲಿ | ೩೫ | ವೀರಶೈವ | ಬಿ.ಎ. | ಶಿಕ್ಷಕಿ | ಗುಬ್ಬಿ ಕಾಲೋನಿ |
| ೯೩ | ಶ್ರೀಮತಿ ಹೆಮಗಿರಿಯಮ್ಮ | ೪೩ | ಕೊರವರು | ಪಿಯುಸಿ | ಅಂಗನವಾಡಿ ಕಾರ್ಯಕರ್ತೆ | ಗುಬ್ಬಿ ಕಾಲೋನಿ |
| ೯೪ | ಶ್ರೀಮತಿ ಮೀನಾಕ್ಷಿ | ೨೮ | ಕುರುಬರು | ಬಿ.ಎ. | ವ್ಯಾಪರಸ್ಥರು | ಗಾಜಿಪೂರ |
| ೯೫ | ಶ್ರೀಮತಿ ಜಯಲಕ್ಷ್ಮಿ | ೨೫ | ಭಜಂತ್ರಿ | ಪಿ.ಯು.ಸಿ. | ಕುಶಲಕಲೆ | ಬಡೇಪೂರ ಕಾಲೋನಿ |
| ೯೬ | ಶ್ರೀಮತಿ ಮಂಜಮ್ಮ | ೩೫ | ವಡ್ಡರು | ಪಿ.ಯು.ಸಿ. | ಪಂಚಾಯ್ತಿ ಸದಸ್ಯೆ | ಬಂಡೇಪೂರ ಕಾಲೋನಿ |
| ೯೭ | ಶ್ರೀಮತಿ ರೇಣುಕಾ ಕೆ. | ೨೯ | ತಮಿಳಿಯನ್ | ಬಿ.ಎ. | ಎಸ್.ಟಿ.ಡಿ. | ಗಾಜಿಪೂರ |
| ೯೮ | ಶ್ರೀಮತಿ ಪದ್ಮಾವತಿ | ೨೬ | ಕೊರವರು | ಪಿ.ಯು.ಸಿ. | ಟೈಲರಿಂಗ್ | ರಾಜಪೂರ |
| ೯೯ | ಶ್ರೀಮತಿ ನಾಗವೇಣಿ | ೩೪ | ಪ. ಪಂಗಡ | ಬಿ.ಎ. | ಸಮಾಜ ಕಾರ್ಯಕರ್ತೆ | ಆಶೋಕ ನಗರ |
| ೧೦೦ | ಶ್ರೀಮತಿ ಕಾಂತಮ್ಮ | ೨೬ | ಪರಿಶಿಷ್ಟ | ಪಿ.ಯು.ಸಿ. ಟಿ.ಸಿ.ಎಚ್. | ಶಿಕ್ಷಕಿ | ಶಕ್ತಿನಗರ |

